# ಬೇಡೇಕರರ ಉಪ್ಪಿನಕಾಯಿಯ ಶೀಶೆಯಂತಹದೇ ಶೀಶೆ ಮತ್ತು ಅದರಂತಹದೇ ಲೇಬಲ್ ಅಂದರೆ ಅಪ್ಪಟ ಬೇಡೇಕರರ ಉಪ್ಪಿನಕಾಯಿ ಅಲ್ಲ!

ಯಾವಾಗ ಉಪ್ಪಿನಕಾಯಿಯನ್ನು ಶೀಶೆಗಳಲ್ಲಿ ಹಾಕಿ ಮಾರುವ ಪದ್ಧತಿ ಇರಲಿಲ್ಲವೋ, ಆಗ ನಾವು ಉಪ್ಪಿನಕಾಯಿಯನ್ನು ಶೀಶೆಗಳಲ್ಲಿ ಹಾಕಿ ಮಾರಲು ಪ್ರಾರಂಭಿಸಿದೆವು. ಶೀಶೆಗಳ ಸ್ಪೆಶಲ್ ಮೋಲ್ಡ್ ಮಾಡಿಸಿದೆವು. ಲೇಬಲ್ ತಯಾರಿಸಿದೆವು. ಮಶೀನ್‌ನಿಂದ ಸೀಲ್ ಬಂದ್ ಆಗುವ ಮುಚ್ಚಳ ಕೂಡಿಸಿದೆವು. ಇಷ್ಟೇ ಅಲ್ಲ, ಶೀಶೆಗಳಲ್ಲಿ ಉಪ್ಪಿನಕಾಯಿ ಬಾಳಬೇಕೆಂದು ಬಹಳೇ ಪರಿಶ್ರಮ ವಹಿಸಿದೆವು.

ಈ ಕಾರಣದಿಂದ ಉಪ್ಪಿನಕಾಯಿ ತಯಾರಿಸುವಲ್ಲಿ ನಾವು ಅಗ್ರಗಣ್ಯರಾಗಿದ್ದೇವೆ. ಶೀಶೆಯಲ್ಲಿ ಉಪ್ಪಿನಕಾಯಿ ಹಾಕುವುದು ಇಂದು ನಾವೀನ್ಯವಾಗಿ ಉಳಿದಿಲ್ಲ. ಆದರೆ ಬೇಡೇಕರರಿಂದಾಗಿ ಅದು ಲೋಕಪ್ರಿಯವಾಗಿದೆ. ನಮ್ಮ ಈ ಲೋಕಪ್ರಿಯತೆಯನ್ನು ಲಕ್ಷ್ಯದಲ್ಲಿಟ್ಟುಕೊಂಡು ಅಂಥದೇ ಶೀಶೆ ಮತ್ತು ಅಂಥದೇ ಲೇಬಲ್ ಹಚ್ಚಿ ಅನೇಕ ಉಪ್ಪಿನಕಾಯಿ ತಯಾರಕರು ತಮ್ಮ ಉಪ್ಪಿನಕಾಯಿಗಳನ್ನು ಮಾರುತ್ತಿದ್ದಾರೆ. ಆದರೆ ಗ್ರಾಹಕರು ಜಾಣರಾಗಿದ್ದಾರೆ. ಅವರು ಬೇಡೇಕರರ ಉಪ್ಪಿನಕಾಯಿಗಳನ್ನು ಮಾತ್ರ ಕೊಳ್ಳುತ್ತಾರೆ. ಪ್ರಸನ್ನ ಸ್ವಾದ ಮತ್ತು ಉತ್ತಮ ರುಚಿ ಕೇವಲ ಬೇಡೇಕರರ ಉಪ್ಪಿನಕಾಯಿಗಳಲ್ಲಿವೆ.

ಉತ್ತಮ ಉಪ್ಪಿನಕಾಯಿಯನ್ನು ತಯಾರಿಸುವ ನಮ್ಮ ಅನುಭವ ದೀರ್ಘವಾಗಿದೆ. 1921ರಷ್ಟು ಹಳೆಯದು. ಉತ್ತಮ ಉಪ್ಪಿನಕಾಯಿ ತಯಾರಿಸುವುದು ಇಂದ್ರಜಾಲವೂ ಅಲ್ಲ, ಮಕ್ಕಳಾಟವೂ ಅಲ್ಲ. ಉತ್ತಮ ಮತ್ತು ವಿವಿಧ ಪ್ರಕಾರದ ಉಪ್ಪಿನಕಾಯಿಗಳನ್ನು ಬೇಡೇಕರರು ಮಾತ್ರ ತಯಾರಿಸುತ್ತಾರೆ ಯಾಕೆಂದರೆ ಅನುಭವ ಪಡೆಯುತ್ತ —'ಬೇಡೇಕರ್'ರು ಉಪ್ಪಿನಕಾಯಿಯಲ್ಲಿ ಸಿದ್ಧಹಸ್ತರಾಗಿದ್ದಾರೆ.




S.Vaze/VP/12-76

## ಬೇಡೇಕರ್
ಮುಂಬಯಿ-400 004.

ಉಪ್ಪಿನಕಾಯಿ ಖರೀದಿ ಮಾಡುವ ವೇಳೆ 'ಬೇಡೇಕರ್' ಹೆಸರ ನೋಡಿಕೊಳ್ಳಿ

**ಮೆ|| ವ್ಹಿ. ಪಿ. ಬೇಡೇಕರ ಅಂಡ್ ಸನ್ಸ್ ಪ್ರೈ. ಲಿ., ಮುಂಬಯಿ-೪೦೦೦೦೪ ಇವರ ಉತ್ಪಾದನೆ.**



ತೊಳೆ ಸುಲಿದ ಉಲ್ಲಾಸ




ಕಿತ್ತಳೆಯ ಸ್ವಾದದ

**ಬ್ರಿಟಾನಿಯಾ ಡಿಲೈಟ್** ಗರಿಮುರಿಯ ಮಜ ತುಂಬಿದ ಬಿಸ್ಕಿಟ್

BRITANNIA

ಲಿಂಟಾಸ್, BBC.DLT.6-1710 KN

# ‘ಕಸ್ತೂರಿ’ಯ ಅರ್ಧವಾರ್ಷಿಕ ಪರಿವಿಡಿ

## ಮಾರ್ಚ್ ೧೯೭೯ ರಿಂದ ಅಗಸ್ಟ್ ೧೯೭೯ ರ ವರೆಗೆ

**ಕ್ರಮ : ಲೇಖನದ ಹೆಸರು, ತಿಂಗಳು, ಪುಟಸಂಖ್ಯೆ**

ಮಾ = ಮಾರ್ಚ್, ಎ = ಎಪ್ರಿಲ್, ಮೇ = ಮೇ, ಜೂ = ಜೂನ್,
ಜು = ಜುಲೈ, ಅ = ಅಗಸ್ಟ್,

**ಅನುಭವ**


‘ಇದಿ’ ಅಮೀನನ ನಾಡಿನಲ್ಲಿ
(ಡಾ. ಪ್ರಕಾಶ ಕೊಣ್ಣೂರ) ಜು. ೩೭
ಒಂದು ಗುರಿ, ಮೂರು ಬಲಿ
(ಡಿ. ಆರ್. ಕುಲಕರ್ಣಿ) ಎ. ೩೫
ಕನ್ನಡ ‘ರತ್ನ’, ಸ್ಮೃತಿಗರ್ಭದ ಆಳದಿಂದ
(ಶ್ರೀದೇವದತ್ತ) ಮೇ ೧೯
ಕತ್ತಲಲ್ಲೂ ಕಂಡ ಬೆಳಕು (ರೇಣುಕ) ಅ ೧೦೫
ಕೊಲೆಯ ರಹಸ್ಯ, ನಿಂಗವ್ವನ ಗಂಡನ
(ಗುರುಪುತ್ರ ಪಸಾರದ) ಜೂ. ೫೫
ಚಿರತೆ, ತಡಸದ
(ಡಿ.ಆರ್. ಕುಲಕರ್ಣಿ) ಜೂ. ೨೩
ಭಾರತದರ್ಶನ, ನನ್ನ
(ಆರ್. ಪದ್ಮನಾಭನ್) ಜೂ. ೯೬
ಯುಗಾಂಡಾದಲ್ಲಿ...
(ಡಾ. ಪ್ರಕಾಶ ಕೊಣ್ಣೂರ) ಮೇ ೨೮
ಸಾಲಿಯುವರು, ಇವರು
(ಮುರಲೀಧರ ಮುಧೋಳ) ಅ. ೮೫


**ಇತಿಹಾಸ**


ನೀರಾವರಿ, ವಿಜಯನಗರ
ಸಾಮ್ರಾಜ್ಯದಲ್ಲಿ ಜು. ೭೫
ಪರಕಾಯಪ್ರವೇಶ, ಮುಧೋಳ
ರಾಜನ ಜೂ. ೬೮
ಪ್ರಾಚೀನ ಭಾರತದಲ್ಲಿ
ವಕೀಲರಿದ್ದರೇ? ಎ. ೨೩
ಬೆಳವಡಿ ಮಲ್ಲಮ್ಮ, ಮರಾಠಿ
ಸಾಹಿತ್ಯದಲ್ಲಿ ಮೇ ೧೨೬
ಭಾರತೀಯನೆಂಬ ಹೆಮ್ಮೆ ಅ. ೨೫
ಲಾಯಕ್ ಅಲಿ
ತಪ್ಪಿಸಿಕೊಂಡದ್ದೆಂತು? ಮಾ. ೮೧
ಹುಗಿದುಹೋಗಿದ್ದ ಇತಹಾಸ
(ಪಾಂಪೆ ನಗರದ ಕುರಿತು) ಅ. ೧೭


**ಇದುವೇ ಜೀವ, ಇದು ಜೀವನ**


ಮಾ. ೧೧೨, ಎ. ೪೭, ಮೇ. ೭೦, ಜೂ. ೧೦೬, ಜು. ೬೩, ಅ. ೩೨


**ಆರೋಗ್ಯ, ವೈದ್ಯಕೀಯ**


ಏರುಸಿರು ಮತ್ತು ಎದೆಹಾರುವಿಕೆ ಮೇ ೧೪೫
ಕಣ್ಣು ಜು. ೮೯
ನಾಯಿಕೆಮ್ಮು ಎ. ೭೮
ನುಲಿಗೊರಳು ಮತ್ತು ತಲೆದೂಗುವಿಕೆ ಜು. ೬೭
ರೋಗಾಣುಗಳ ಮೂಲವೆಲ್ಲಿ? ಮಾ. ೬೨
ಶ್ರವಣೇಂದ್ರಿಯೋಪಾಖ್ಯಾನ ಎ. ೬೭


**ಕವನ-ಉವಾಚ**


ಆಕೆ = ಅಮ್ಮ, ಅಪ್ಪ
(ರಘುನಾಥ ಎಸ್. ಶೆಣೈ) ಮೇ ೨೬
ಇಲಿ ಪಂದ್ಯ (ವ್ಯೈ. ಶ್ರೀ. ನಟರಾಜ) ಅ. ೧೧೨
ಒಂದು ಚಂದ್ರ (ಜಯಂತ ಕಾಯ್ಕಿಣಿ) ಮೇ ೧೦೨
ನೀನಿರುವುದಿಲ್ಲ
(ಸಿದ್ಧಲಿಂಗ ಪಟ್ಟಣಶೆಟ್ಟಿ) ಮೇ ೧೧೪
ಪ್ರಸಾದ (ಅರವಿಂದ ನಾಡಕರ್ಣಿ) ಜೂ. ೧೦೫
ಪ್ರಾರ್ಥನೆ (ಗೋವಾ) ಎ. ೯೨
ಬಿಲ್ಡಿಂಗುಗಳು ಮತ್ತು ಏಕಾಕಿ ನಾನು
(ಸರಜೂ ಕಾಟಕರ) ಮೇ ೩೩

ಸ್ತ್ರಾ ಗಾದೆಗಳು ಏ. ೮೧
ಬಿಸ್ತ್ರಾ ಗಾದೆಗಳು ಅ. ೪೦
ವಾಸನೆ (ಅರಕಲಗೂಡು ನೀಲಕಂಠಮೂರ್ತಿ) ಜು. ೧೪
ಸುಭಾಷಿತೆಗಳು ಜೂ. ೯೫
ಹೆಂಡತಿ (ಅರಕಲಗೂಡು ನೀಲಕಂಠಮೂರ್ತಿ) ಮೇ ೧೬೦

**ಕಥೆ**

ಅಭಿಮಾನ (ಎನ್. ಪಂಕಜ) ಜು. ೫೦
'ಅಮ್ಮಾ…' (ಯರ್ಮುಂಜ ರಾಮಚಂದ್ರ) ಮೇ ೧೦೪
ಆಮಂತ್ರಣ (ಆನಂದ ಟಿ. ಎರ್ಮೆಲ್) ಜೂ. ೮೮
ಇದ್ದುದು ಹೀಗೆ (ನೀಲಾ ಶಿರ್ತೋಳೆ) ಜು. ೮೧
ಒಂದು ಶರತ್ಕಾಲದ ರಾತ್ರಿ (ಮ್ಯಾಕ್ಸಿಂ ಗಾರ್ಕಿ) ಏ. ೮೩
ಒಂದು ಸಂಜೆಯ ಭೇಟಿ (ಚಂದ್ರಕಾಂತ ಬಕ್ಷಿ) ಮಾ. ೭೬
ಖಡ್ಗ ಮಾಡಿದ್ದು (ಲೂ ಶೂನ್) ಮೇ ೧೬೭
ಘಾಘು–ಭಡ್ಡರಿ (ಸುದರ್ಶನ ದೇಸಾಯಿ) ಜೂ. ೪೩
ತಂತ್ರ (ಗಾಯ್ ದ ಮೋಪಾಸಾ) ಮಾ. ೨೨
ನಿರ್ಣಯ (ಡಾ. ವಿಷ್ಣುಶರ್ಮ ವನಹಳ್ಳಿ) ಜು. ೫೮
ನಿರಾಶ್ರಿತರು (ಸೂರ್ಯಬಾಲಾ) ಜೂ. ೧೦೮
ನೆನಪು–ಬರಿ ನೆನಪು (ಎಂ. ಎಚ್. ನಾಯಕ ಬಾಡ) ಏ. ೫೩
ನಂಟು (ಪಿ. ಪಿ. ಉಪಾಧ್ಯ) ಮಾ. ೧೦೧
ಪರಾಜಿತ (ಎಲ್. ಎಲ್. ಕಾವಿಷ್) ಅ. ೫೫
ಪ್ರೊಫೆಸರ್ ಕುಲಕರ್ಣಿ (ಹೇಮಾ) ಮೇ ೧೨೦
ಭೂತ (ಜಿ. ಎಸ್. ಆನಂದವರ್ಧನ) ಅ. ೭೬
ಯಥಾಪ್ರಕಾರ (ವೈ. ಕೆ. ಸಂಧ್ಯಾ ಶರ್ಮಾ) ಮೇ ೧೫೩
ಯಾತನಾಶಿಬಿರ (ಚಂದ್ರಕಾಂತ ಕುಸನೂರ) ಜು. ೧೧೯
ವಿಷವೃತ್ತ (ನರೇಂದ್ರನಾಥ ಮಿತ್ರ) ಏ. ೧೦೩
ವಿಷ್ಣುಚಿಹ್ನ (ಖುಷ್ವಂತ್ ಸಿಂಗ್) ಮೇ ೭೨
ಶವಸಂಸ್ಕಾರ (ಗಾಯ್ ದ ಮೊಪಾಸಾ) ಜೂ. ೧೧
ಸೆಳೆತ (ಪಿ. ಎಸ್. ನಾರಾಯಣ) ಅ. ೯೦
ಹದಿನೆಂಟರ ಹೊಸಲಲ್ಲಿ (ಡಿ. ಆರ್. ಬಾಲು) ಮೇ ೪೪

**ಕಲೆ**

ಎಸ್ಕಿಮೋ ಕಲೆ ಏ. ೯
ಕಲಾತ್ಮಕ ಖಡ್ಗಗಳು ಅ. ೧೩
ಗೂಡಿನಲಿ…ಬಾನಾಡಿ ಜೂ. ೭
ನಾನಾ ನಮೂನೆಯ ನಾಯಿಗಳು ಮೇ ೩೪
ಯೋಗಿನಿ ಮಾ. ೧೪
ಹಕ್ಕಿಗಳ ಕೊಕ್ಕುಗಳು ಜು. ೯

**ಚರ್ಚೆ–ಚಿಂತನ**

'ಅಗ್ನಿಹಂಸ' ಎಂದರೇನು? ಮಾ. ೫೩
ಕಾಕವೇದಾಂತ ಜೂ. ೮೩
ಚಿಂತನೆಗಳು, ಮೂರು ಮೇ ೧೬೨
ಡಾರ್ವಿನ್‌ವಾದ ಎಷ್ಟು ಸರಿ? ಏ. ೮೯
ನೀಲಗಿರಿ ಹಾನಿಕರವೇ ? ಜು. ೧೧೦
ಪಕ್ಷಿಗಳ ಭಾಷೆ ಏ. ೩೩
ಪ್ರಾಚೀನ ಭಾರತದಲ್ಲಿ ವಕೀಲರಿದ್ದರೆ? ಏ. ೨೩
ವ್ಯಂಗ್ಯ ರೇಖೆಗಳಲ್ಲಿ ಸಮಾಜ ವಿಮರ್ಶೆ ಜು. ೧೮
ಸರ್ವಜ್ಞ ಕವಿಗೆ ಆ ಹೆಸರು ಏಕೆ? ಜೂ. ೮೧
ಶನಿ: ಗ್ರಹವೋ? ನಕ್ಷತ್ರವೋ? ಜೂ. ೨೭

**ಜೀವನ ಚರಿತ್ರೆ**

ಅಪರಿಚಿತ, ಪರಿಚಿತರ ನಾಡಿನಲ್ಲೊಬ್ಬ ಏ. ೧೫ (ಚಂದ್ರಶೇಖರ ಯಲವಿಗಿ ಕುರಿತು)
ಐನ್‌ಸ್ಟೈನ್, ಆಲ್ಬರ್ಟ್ ಮಾ. ೧೧೫
ಐನ್‌ಸ್ಟೈನ್, ಆಲ್ಬರ್ಟ್ ಏ. ೧೧೧
ಭಿಡೆ ಶಾಸ್ತ್ರಿಗಳು, 'ಕರ್ಮವೀರ'ದ ಮಾ. ೭
ಘಟಪ್ರಭೆಯ 'ವೈದ್ಯ'ರು ಏ. ೬
ಥ್ಯಾಚರ್, ಮಾರ್ಗರೆಟ್ ಜು. ೨೪
ದ್ವಿವೇದಿ, ಹಜಾರೀಪ್ರಸಾದ ಅ. ೨೭
ಥಿಯೊಫಿಲ್ ಲೆನೆಕ್, ಸ್ಟೆತೋಸ್ಕೋಪ್ ಜನಕ, ಡಾ. ಜೂ. ೪೧
ಗುರುರಾಜಭಟ್ಟರು, ಡಾ. ಪಿ. ಜೂ. ೧೮
ಮಾಗರೆಟ್, ಹೆಸರುಗಳ್ಳ ಕಲಾವಿದ ಮಾ. ೫೯
ರ್‍ಯಾಲೆ, ಸರ್ ವಾಲ್ಟರ್, ಸೊಗಸುಗಾರ ಸಾಹಸಿ ಅ. ೭೩

**ದೇಶ-ನಗರ**

'ಇದಿ' ಅಮೀನನ ನಾಡಿನಲ್ಲಿ ಜು. ೩೭
ಇರಾಣ: ಅಂದು–ಇಂದು ಮಾ. ೮೯
ಒಗಾದನ್, ಒಗಟಾಗಿ ಉಳಿದಿರುವ ಜೂ. ೧೧೭

'ನಾಸ್ತಿಕ' ದೇಶ, ನೇಹಿಗರಿಲ್ಲದ ಅ. ೮೦
ಮೆಕ್ಸಿಕೋದಲ್ಲೊಂದು ಅಂಧಪುರ, ಎ. ೯೩
ಯುಗಾಂಡಾದಲ್ಲಿ... ಮೇ ೨೮

**ನಗೆ**

ಮಾ. ೯೮, ಎ. ೪೦, ೭೬, ಮೇ. ೬೩, ೭೮, ಜೂ. ೩೧ ೪೦, ಜು. ೧೭,೨೨, ಅ. ೧೨, ೨೨

**ನಾಟಕ**

ಸಾತತ್ಯ (ಗೋಪಾಲ ಕಾರ್ಕಳ) ಮೇ ೮೧

**ನೀತಿಕಥೆ**

ಒಂದು ಕಥೆ, ಒಂದು ವ್ಯಥೆ ಮೇ ೧೭
ಮುಕ್ತಿ ಎ. ೫
ಯಾರು ಗೌರವಾರ್ಹ? ಜೂ. ೫
ಯಾವುದು ಶ್ರೇಷ್ಠ? ಜು. ೫
ಸಡಿಲು ನಾಲಿಗೆ ಮಾ. ೭
ಶೀಲ ಮಾ. ೯೬

**ಪಧಾರ್ಥ ಚಿಂತಾಮಣಿ**

ಮಾ. ೪೯, ಎ. ೧೨, ಮೇ ೬೯, ಜೂ. ೬೫, ಜು. ೪೯, ಅ. ೬೫

**ಪುಸ್ತಕ ವಿಭಾಗ**

ಅಸಿಧಾರಾ (ಸಾಮರ್‌ಸೆಟ್‌ಮಾಮ್) ಅ. ೧೧೫
ಐನ್‌ಸ್ಟೈನ್, ಆಲ್ಬರ್ಟ್ (ಜಿ. ಟಿ. ನಾರಾಯಣರಾವ್) ಮಾ. ೧೧೫
,, ಎ. ೧೧೧
ಒಗಾದನ್, ಒಗಟಾಗಿ ಉಳಿದಿರುವ (ಅರಕಲಗೂಡು ಎನ್. ಮೂರ್ತಿ) ಜೂ. ೧೧೭
ಖಡ್ಗ ಮಾಡಿದ್ದು (ಲೂ ಶೂನ್) ಮೇ ೧೬೭
ಯಾತನಾಶಿಬಿರ (ಚಂದ್ರಕಾಂತ ಕುಸನೂರ) ಜು. ೧೧೯

**ಪ್ರಾಣಿಜೀವನ**

ಆರ್ಮಡಿಲ್ಲೋ ಜೂ. ೮೬
ಒಕಾಪಿ ಅ. ೧೧೦
ಪಕ್ಷಿಗಳ ಭಾಷೆ ಎ. ೩೩
ಬಾಬ್‌ಕ್ಯಾಟ್ ಎ. ೪೨

**ರಹಸ್ಯ-ಸಾಹಸ-ಸೋಜಿಗ**

ಐನ್‌ಸ್ಟೈನ್ ಮಿದುಳಿನ ರಹಸ್ಯ ಜೂ. ೩೭
ಒಂದು ಗುರಿ, ಮೂರು ಬಲಿ ಎ. ೩೫

ಕಾನಿಗ್ಸ್‌ಬರ್ಗ್ ಸೇತುವೆಯ ಸಮಸ್ಯೆ ಜೂ. ೪೮
ಕೊಲೆಯ ರಹಸ್ಯ, ನಿಂಗವ್ವನ ಗಂಡನ ಜೂ. ೫೫
ಚಿರತೆ, ತಡಸದ ಜೂ. ೨೩
ಪರಕಾಯಪ್ರವೇಶ, ಮುಧೋಳ ರಾಜನ ಜೂ. ೬೮
ಮಾಗರೆನ್, ಹೆಸರುಗಳ್ಳ ಕಲಾವಿದ ಮಾ. ೫೯
ಭಾರತದರ್ಶನ, ನನ್ನ ಜೂ. ೯೬
ಲಾಯಕ ಅಲಿ ತಪ್ಪಿಸಿಕೊಂಡದ್ದೆಂತು? ಮಾ. ೮೧
ಸಾಧನೆಯ ಬೆಂಬತ್ತಿ... ಮಾ. ೧೭
ಸಾವಿನ ದವಡೆಯಲ್ಲಿ ಮುಕ್ಕಾಲು ಗಂಟೆ ಜು. ೮೬
ಹಾಂ! ದೇವಿ ದೊಡ್ಡಾಕೆ ಮಾ. ೬೮
ಹಾವಿಗಾಗಿ ಸತ್ತ, ಅವನು ಎ. ೬೫


**ವಿಜ್ಞಾನ**


ಅಪರಿಚಿತ, ಪರಿಚಿತರ ನಾಡಿನಲ್ಲೊಬ್ಬ ಎ. ೧೫
ಕಾನಿಗ್ಸ್‌ಬರ್ಗ್ ಸೇತುವೆಯ ಸಮಸ್ಯೆ ಜೂ. ೪೮
ಗುರುವೇ ಶಿಷ್ಯನಾದ ಮಾ. ೫೦
ಡಾರ್ವಿನ್‌ವಾದ ಎಷ್ಟು ಸರಿ? ಎ. ೪೯
ಧೂಮಕೇತುಗಳು ಮತ್ತು ಜೀವೋತ್ಪಾದನೆ ಅ. ೬೬
ಪರಿಪೂರ್ಣ ಸಂಖ್ಯೆಗಳು ಜು. ೬
ಭವಿಷ್ಯವಿಜ್ಞಾನ ಅ. ೩೪
ರೋಗಾಣುಗಳ ಮೂಲವೆಲ್ಲಿ? ಮಾ. ೬೨
ಶನಿ: ಗ್ರಹವೋ? ನಕ್ಷತ್ರವೋ? ಜೂ. ೨೭
ಶಬ್ದಬ್ರಹ್ಮನ ಗುಮ್ಮಟದೊಳಿದ್ದು ಎ. ೮೯


**ಸಾಮಾನ್ಯ**


'ಅಗ್ನಿಹಂಸ' ಎಂದರೇನು? ಮಾ. ೫೩
ಅಪ್ಪಯ್ಯ ದೀಕ್ಷಿತರು ಮದ್ದು ಸೇವಿಸಿ... ಮೇ ೧೧೬
ಆಪಾದನೆಗಳು ಅ. ೧೧೪
ಏಪ್ರಿಲ್ ಫೂಲ್ ಜು. ೨೯
ಮೆಕ್ಸಿಕೋದಲ್ಲೊಂದು ಅಂಧಪುರ ಎ. ೯೩
ಕವಿಸಮಯವಿಲಾಸಂ ಮೇ ೪೯
ಕಾಕವೇದಾಂತ ಜೂ. ೮೩
ಕಾನಿಗ್ಸ್‌ಬರ್ಗ್ ಸೇತುವೆಯ ಸಮಸ್ಯೆ ಜೂ. ೪೮
ಕೈಹಿಡಿದು ನಡೆಸುವನೆನ್ನ... ಎ. ೨೭
ದೊಡ್ಡವರ ಸಣ್ಣ ಕತೆಗಳು ಎ. ೧೩
ದ್ರೌಪದಿ ಮಾ. ೬೫
ನಮ್ಮ ಭೇಟಿ ಎಲ್ಲಿ? ಜು. ೧೧೨
ನೀಲಗಿರಿ ಹಾನಿಕರವೇ? ಜು. ೧೧೦
ಪಕ್ಷಿಗಳ ಭಾಷೆ ಎ. ೩೭
ಪಕ್ಷಿಪುರಾಣ, ಆಂಧ್ರಪ್ರದೇಶದ ಜು. ೫೭
ಪ್ರಾಚೀನ ಭಾರತದಲ್ಲಿ ವಕೀಲರಿದ್ದರೆ? ಎ. ೨೩
ಬ್ರಗ್ಗೋಣ ಪಂಚಾಂಗ ಎ. ೯೫
ಬಾಳುವೆ ಅ. ೧೧
ಬೆಳವಡಿ ಮಲ್ಲಮ್ಮ, ಮರಾಠಿ ಸಾಹಿತ್ಯದಲ್ಲಿ ಮೇ ೧೨೬
ಭಾರತೀಯನೆಂಬ ಹೆಮ್ಮೆ ಅ. ೨೫
ಮದ್ರಾಸಿ ಮರಾಠಿಗರು, ಹೀಗಿದ್ದಾರೆ, ಈ ಮಾ. ೨೮
ಮಹಾಭಾರತದಲ್ಲಿಯ ನಿದರ್ಶನಗಳು ಮೇ ೬೫
ಮೂರು ಚಿಂತನೆಗಳು ಮೇ ೧೬೨
ಸಿಖ್ ಮ್ಯೂಜಿಯಂ, ಲಾಹೋರದ ಜು. ೯೮
ವಾದವೈಖರಿ ಜು. ೮೦
ವಿದ್ಯಾರ್ಥಿಗಳು, ಪತ್ರಗಳಲ್ಲಿ ಕಂಡ ಜೂ. ೩೩
ನೀರಾವರಿ, ವಿಜಯನಗರ ಸಾಮ್ರಾಜ್ಯದಲ್ಲಿ ಜು. ೭೫
ವ್ಯಂಗ್ಯಚಿತ್ರ ಜು. ೧೬
ವ್ಯಂಗ್ಯ ರೇಖೆಗಳಲ್ಲಿ ಸಮಾಜ ವಿಮರ್ಶೆ ಜು. ೧೮
ಶಾಪಗ್ರಸ್ತ ವಜ್ರ ಜು. ೯೬
'ಸರ್ವಜ್ಞಕವಿಗೆ' ಆ ಹೆಸರು ಏಕೆ? ಜೂ. ೮೧
ಸಾಧನೆಯ ಬೆಂಬತ್ತಿ ಮಾ. ೧೭
ಸಾವಿನ ದವಡೆಯಲ್ಲಿ ಮುಕ್ಕಾಲು ಗಂಟೆ ಜು. ೮೬
ಸ್ಫೋಟಕ ಸಿಗಾರ್ ಜು. ೧೦೪
ಹಸಿರು ಹೊನ್ನು ಎ. ೬೦
ಹಿತ್ತಲ ಗಿಡ ಮದ್ದಲ್ಲ ಜು. ೯೭


**ಶಬ್ದ ಭಾಂಡಾರ**


ಮಾ. ೫೭, ಎ. ೨೧, ಮೇ ೧೫೧, ಜೂ. ೭೯, ಜು. ೬೫, ಅ. ೭೧


**ಹರಟೆ-ನಗೆಬರಹ**


ಅತಿಥಿಗಳು ಅತಿಯಾದಾಗ (ಪಾ.ವೆಂ. ಆಚಾರ್ಯ) ಮಾ. ೩೩
ಜಗತ್ತಿನ ಪುರುಷರೇ ಎದ್ದೇಳಿ (ಎಂ. ಜಿ. ರಂಗನಾಥರಾವ್) ಎ. ೧೦೮
ತಲೆಭಾರ (ಶಿವರಾಮ ಜೋಶಿ) ಅ. ೧೦೧
ಹೆಂಡತಿಯ ಗುಲಾಮ (ಕೆ. ಚಂದ್ರಮೌಳಿ) ಮಾ. ೩೯

## ಕಸ್ತೂರಿ

✡

ವ್ಯವಸ್ಥಾಪಕ ಸಂಪಾದಕ :
ಎಚ್. ಆರ್. ಬಸವರಾಜ್

✡

ಸಂಪಾದಕ :
ಪ. ಸು. ಭಟ್ಟ

✡

ಕಲೆ :
ಕೆ. ಬಿ. ಕುಲಕರ್ಣಿ

✡

ಮುಖಪುಟ :
ಅಳಬೇಡ ನನ ಕಂದಾ...

✡

ಚಂದಾದರ
ಅರ್ಧವರ್ಷ ಅಂಚೆ ಸೇರಿ ರೂ. ೧೦-೦೦
೧ ವರ್ಷ " ರೂ. ೧೮-೦೦
( ವಿಶೇಷ ಸಂಚಿಕೆ ಸೇರಿ)

( ಹೊಸ ದರಗಳು ಇದೇ ಸಪ್ಟಂಬರ್‌ನಿಂದ ಜಾರಿಯಲ್ಲಿ ಬರುವವು )



### ಬೆಳಕಿಂಡಿ

ಯಾವ ಕನ್ನಡಿಯೂ ತನ್ನೆದುರು ನಿಂತುಕೊಂಡ ಸ್ತ್ರೀಗೆ 'ನೀನು ಕುರೂಪಿ' ಎಂದು ಹೇಳುವುದಿಲ್ಲ.

– 'ಅಂಧಯುಗ'ದಿಂದ

*

ಪರಾಕ್ರಮವೆಂಬುದು 'ಪ್ರತಿಭೆ'ಯ ಸೋದರಿಯಂತೆ. ಹಾಗಾದರೆ ಸೋದರ ಯಾರು ?

ಚಾಣಕ್ಯ

*

ಬಿಗಿದ ಮುಷ್ಟಿಯೊಂದಿಗೆ ಹಸ್ತ-ಲಾಘವ ಎಂದಿಗೂ ಅಸಾಧ್ಯ.

- ಹಾರಿ ಫ್ಲೆಯಿಶ್ಮನ್

*

ಮೋಟಾರಿನವ ಪ್ರತಿ ಪಾದಚಾರಿ ಬಂದಾಗಲೂ ಮೋಟಾರು ನಿಲ್ಲಿಸುತ್ತ ಹೋದರೆ ಆತ ಮುಟ್ಟಬೇಕಾದಲ್ಲಿಗ ಮುಟ್ಟುವುದೇ ಇಲ್ಲ ಆದರೆ ಪಾದಚಾರಿ ಯೊಬ್ಬ ಪ್ರತಿ ಮೋಟಾರಿನವ ಬಂದಾಗ ನಿಲ್ಲದೇ ಹೋದರೆ ಮುಟ್ಟಬೇಕಾದಲ್ಲಿಗೆ ಬೇಗನೇ ಮುಟ್ಟುತ್ತಾನೆ.

– ಜಾಕಬ್

✡

### ಚಂದಾದಾರರಿಗೆ ಸೂಚನೆ

'ಕಸ್ತೂರಿ' ತಿಂಗಳ ಒಂದನೇ ದಿನಾಂಕ-ದೊಳಗೇ ಪ್ರಕಟವಾಗುವುದು. ತಿಂಗಳ ೫ ನೇ ದಿನಾಂಕದೊಳಗೆ ತಲುಪದೇ ಹೋದರೆ ಚಂದಾದಾರರು ತಮ್ಮ ಟಪಾಲು ಕಟ್ಟೆಯಲ್ಲಿ ಮೊದಲು ವಿಚಾರಿಸಿ ಅನಂತರ ನಮಗೆ ತಿಳಿಸಬೇಕು. ಪತ್ರವ್ಯವಹಾರ ಮಾಡುವಾಗ ಚೆಂದಾ ನಂಬರು ಹಾಕಿರ ಬೇಕು.

# ಈ ಸಂಚಿಕೆಯಲ್ಲಿ


| | | |
|---|---|---|
| ಸಹಚಿಂತನ | | ೯ |
| ಬಾಳುವೆ | ಮ್ಯಾಕ್ಸ್‌ಮುಲ್ಲರ್ | ೧೧ |
| ನಗೆಲಾಯ? ನ್ಯಾಯಾಲಯ! | ಚೆಸ್‌ಕ್ವೀನ್ | ೧೨ |
| ಕಲಾತ್ಮಕ ಖಡ್ಗಗಳು | | ೧೩ |
| ಹುಗಿದುಹೋಗಿದ್ದ ಇತಿಹಾಸ | ಎಂ. ಆರ್. ಎಸ್. ರಾವ್ | ೧೬ |
| ನಗೆಮಲ್ಲಿಗೆ | | ೨೨ |
| ಭಾರತೀಯನೆಂಬ ಹೆಮ್ಮೆ | ವೆಂಕಟೇಶ ಗಂಗಾವತಿ | ೨೫ |
| ಹಜಾರೀಪ್ರಸಾದ ದ್ವಿವೇದಿ | ಡಾ. ಮ. ಸು. ಕೃಷ್ಣಮೂರ್ತಿ | ೨೭ |
| ಇದುವೇ ಜೀವ ಇದು ಜೀವನ | | ೩೨ |
| ಭವಿಷ್ಯವಿಜ್ಞಾನ | ಜಿ. ಟಿ. ನಾರಾಯಣರಾವ್ | ೩೪ |
| ಬಿಸ್ರಾ ಗಾದೆಗಳು | ಬಿ. ಎಸ್. ರಾಮಾಚಾರ್ | ೪೦ |
| ಯಾಕೆ ಏನು ಎತ್ತಗಳ ಕೌತುಕಲೋಕ | ಪ್ರಶಾಂತ ಮಾಡ್ತ | ೪೧ |
| ವೈ. ಎಂ. ಸಿ. ಎ. | ಟಿ. ಎಂ. ಸುಬ್ಬರಾಯ | ೪೮ |
| ಪರಾಜಿತ (ಕಥೆ) | ಎಲ್. ಎಲ್. ಕಾವಿಷ್ | ೫೫ |
| ಪದಾರ್ಥ ಚಿಂತಾಮಣಿ | ಪಾವೆಂ | ೬೫ |
| ಧೂಮಕೇತುಗಳು ಮತ್ತು ಜೀವೋತ್ಪಾದನೆ | ಜಯಂತ ವಿಷ್ಣು ನಾರಳೀಕರ | ೬೬ |
| ನಿಮ್ಮ ಶಬ್ದಭಾಂಡಾರ ಬೆಳೆಯಲಿ | | ೭೧ |
| ಸೊಗಸುಗಾರ ಸಾಹಸಿ ಸರ್ ವಾಲ್ಟರ್ ರ್‍ಯಾಲೆ | ಗೌರೀಶ ಕಾಯ್ಕಿಣಿ | ೭೩ |
| ಭೂತ (ಕಥೆ) | ಜಿ. ಎನ್. ಆನಂದವರ್ಧನ | ೭೬ |
| ನೇಹಿಗರಿಲ್ಲದ 'ನಾಸ್ತಿಕ' ದೇಶ | ಗೋಪಾಲ ವಾಜಪೇಯಿ | ೮೦ |
| ಇವರು ಸಾಲಿಯವರು | ಮುರಲೀಧರ ಮುಧೋಳ | ೮೮ |
| ಸೆಳೆತ (ಕಥೆ) | ಪಿ. ಎಸ್. ನಾರಾಯಣ | ೯೦ |
| ತಲೆಭಾರ | ಶಿವರಾಮ ಜೋಶಿ | ೧೦೧ |
| ಕತ್ತಲಲ್ಲೂ ಕಂಡ ಬೆಳಕು | ರೇಣುಕ | ೧೦೫ |
| ಒಕಾಪಿ | ಜಿ. ಎಸ್. ಭಟ್ಟ | ೧೧೦ |
| ಇಲಿ ಪಂದ್ಯ (ಕವನ) | ವೈ. ಶ್ರೀ. ನಟರಾಜ | ೧೧೨ |
| ಆಪಾದನೆಗಳು | | ೧೧೪ |


**ಪುಸ್ತಕ ವಿಭಾಗ**


ಅಸಿಧಾರಾ — ಮೂಲ: ಸಾಮರ್‌ಸೆಟ್ ಮಾಮ್, ಕನ್ನಡಕ್ಕೆ: ಶ್ರೀಮತಿ ಗೀತಾ ಮೋಹನಮುರಲಿ ೧೧೫

# ಸಮಾಲೋಚನ

## ಸಮಸ್ಯೆಯಲ್ಲ!

ಜೂನ್ ೧೯೬೫ ಸಂಚಿಕೆಯಲ್ಲಿ ಪ್ರಕಟವಾದ ಕೋನಿಗ್ಸ್‌ಬರ್ಗ್ ಸೇತುವೆಯ ಸಮಸ್ಯೆ ನಿಜವಾದ ಸಮಸ್ಯೆಯಲ್ಲ. ಜನರು ಆ ಏಳೂ ಸೇತುವೆಗಳನ್ನು ಉಪಯೋಗಿಸಿ ಏಕೆ ಆ ಎಲ್ಲಾ ಭೂಭಾಗಗಳನ್ನು ನೋಡಬೇಕು? ಈ ಸಮಸ್ಯೆ ಕೇವಲ ೪ ಅಥವಾ ೫ ಸೇತುವೆಗಳನ್ನು ದಾಟುವುದರಿಂದ ಪರಿಹರಿಸಬಹುದು. ಅದು ಹೇಗೆಂದರೆ,

ಒಬ್ಬ ಪ್ರವಾಸಿ ನಾಲ್ಕು ಭೂಭಾಗಗಳಾದ *ABCD* ನೋಡಬೇಕಲ್ಲವೆ ?

*x* ಎಂಬ ಪ್ರವಾಸಿ *c* ಭೂಭಾಗದಿಂದ ಹೊರಟು *b* ಸೇತುವೆಯ ಮೂಲಕ *A* ಗೆ ಬಂದು ಅಲ್ಲಿ ಎಲ್ಲ ಭೂಭಾಗವನ್ನು ಸಂದರ್ಶಿಸಿ ನಂತರ *a* ಸೇತುವೆಯ ಮೂಲಕ *D* ಗೆ ಬಂದು ಅಲ್ಲಿಯ ಎಲ್ಲಾ ಭೂಭಾಗ ನೋಡಿಕೊಂಡು *g* ಸೇತುವೆ ಮೂಲಕ ಹಾದು *B* ಭೂಭಾಗ ನೋಡಿಕೊಂಡು *f* ಸೇತುವೆ ಮೂಲಕ ಬಂದು *C* ಭೂಭಾಗಗಳನ್ನು ಸಂದರ್ಶಿಸಿಕೊಂಡು ತನ್ನ ಸ್ವಸ್ಥಾನಕ್ಕೆ ವಾಪಸಾಗಬಹುದು. ಇಲ್ಲಿ ಕೇವಲ ೪ ಸೇತುವೆ ಉಪಯೋಗಿಸಿಕೊಂಡು ಎಲ್ಲಾ ಭೂಭಾಗಗಳನ್ನು ನೋಡಿದ್ದಾಯಿತು. ೭ ಸೇತುವೆಗಳನ್ನು ಕಟ್ಟಿದ್ದು ಮೂರ್ಖತನ. ಅದರ ಮೇಲೆ ಸಮಸ್ಯೆ ಉದ್ಭವಿಸಿದ್ದು ಸಹ ಮೂರ್ಖ ಜನರಿಂದ. ಕೇವಲ ೫ ಸೇತುವೆ ಎಲ್ಲಾ ಭೂಭಾಗಗಳ ಜನರು ಒಬ್ಬರೊಡನೊಬ್ಬರು ಸಂಪರ್ಕಿಸಲು ಸಾಕು.

ಚಿಂತಾಮಣಿ — ಜಿ. ಶ್ರೀಧರರಾವ್

[ಸ್ವಾಮಿ, ಎಲ್ಲ ಏಳೂ ಸೇತುವೆಗಳನ್ನು ಒಂದೇ ಒಂದು ಬಾರಿ ಉಪಯೋಗಿಸಿ ದಾಟುವುದೇ ಒಂದು ಸಮಸ್ಯೆಯೆಂದು ಹೇಳಿರುವಾಗ ನೀವು ಸೂಚಿಸಿರುವ ಪರಿಹಾರ ಎರಡು ಸೇತುವೆಗಳನ್ನು ಕೈಬಿಡುವುದಲ್ಲ ? —ಸಂ.]

## ಇದ್ದುದು ಹೀಗೆ

ಜುಲೈ 'ಕಸ್ತೂರಿ' ಯಲ್ಲಿ 'ಇದ್ದುದು ಹೀಗೆ' ಯಂಥ ಒಂದು ಒಳ್ಳೆಯ ಕಥೆಯನ್ನು ಕೊಟ್ಟಿದ್ದೀರಿ. ವ್ಯಕ್ತಿಗತ ದೃಷ್ಟಿ ಇಟ್ಟುಕೊಂಡು ನೋಡಿದರೆ ಮಾಲಿನಿಕಾಳ ಅಂತರಂಗದ ವ್ಯಕ್ತಿತ್ವ ಅರ್ಥವಾಗುತ್ತದೆ. ಪಾತಿವ್ರತ್ಯದ ಕಲ್ಪನೆ ವಿಪರೀತ ಮಟ್ಟಕ್ಕೇರಿರುವ ನಮ್ಮಲ್ಲಿ ಒಬ್ಬ ವ್ಯಕ್ತಿಯ—ಅದರಲ್ಲೂ ಹೆಣ್ಣಿನ—ನೈತಿಕ ಮಟ್ಟವನ್ನಳೆಯಲು ಮುಖ್ಯವಾಗಿ ನಾವು ನೋಡುವುದು ಆಕೆ ತಾನು ಮಾಡಿಕೊಂಡ ಗಂಡನಿಗೆ ಎಷ್ಟು ನಿಷ್ಠಳಾಗಿದ್ದಾಳೆ ಎಂಬ ಅಳತೆಗೋಲಿನಿಂದ. ಆದರೆ ಆ ಅಳತೆಗೋಲಿನಿಂದ ಅಳೆದು ನಾವಿಲ್ಲಿ ಮಾಲಿನಿಕಾ ಮಾಡಿದ್ದು ಹಾದರ ಎಂದು ಹೇಳಿದರೆ ಎಂಥ ಅಪಚಾರವಾದೀತು! ಆಕೆ ನೆಲದ ಮೇಲೆ ಗಟ್ಟಿಯಾಗಿ ಕಾಲೂರಿ ನಿಂತ ಮನುಷ್ಯಳೇ ಆಗಿದ್ದಾಳೆ, ಮಾನವಸಹಜ ಬೇಕು-ಬೇಡಗಳೆಲ್ಲವಕ್ಕೂ ಅವಳು ಬದ್ಧಳು: ಆಕೆ ಪ್ರಜ್ಞಾವಂತ ಸ್ತ್ರೀ.

ಬೆಂಗಳೂರು — ಕೆ. ಚಿಂತಾಮಣಿ




ಚಿತ್ರ 1.

## ಅಪ್ರಿಯ ಸತ್ಯ

'ವ್ಯಂಗ್ಯ ರೇಖೆಗಳಲ್ಲಿ ಸಮಾಜ ವಿಮರ್ಶೆ' (ಜುಲೈ ೧೯೭೮) ಲೇಖನ ನಮಗೆ ಕಾರ್ಟೂನುಗಳ ಮಹತ್ವವನ್ನು ತಿಳಿಸಿಕೊಟ್ಟಿತು. ನಮ್ಮಲ್ಲಿ ಹಾಸ್ಯ ಪ್ರಜ್ಞೆ ಏಷ್ಟಿದೆ ಎಂಬುದಕ್ಕೆ ವ್ಯಂಗ್ಯಚಿತ್ರಗಳಿಗಾಗಿಯೇ ಇದ್ದ ಪತ್ರಿಕೆಗಳು ಕಣ್ಮುಚ್ಚಿರುವುದೇ ಸಾಕ್ಷಿ. ಕಾರ್ಟೂನುಗಳು ಹೇಳುವುದು ಒಂದು ರೀತಿಯಲ್ಲಿ ಅಪ್ರಿಯ ಸತ್ಯ. ಕನ್ನಡದ 'ಕೊರವಂಜಿ' ವ್ಯಂಗ್ಯಚಿತ್ರ–ಲೇಖನಗಳಿಗಾಗಿಯೇ ಇದ್ದ ಪತ್ರಿಕೆ. ಕೊನೆಯುಸಿರೆಳೆಯುವಾಗ 'ಕನ್ನಡ ನಾಡಿಗಿಂತ ಕಾಡೇ ಲೇಸು. ಅಲ್ಲಿಗೇ ಹೊಗ್ತೇನೆ' ಎಂದಿತ್ತು. ನಮ್ಮ ಜನ, 'ಧಾರಾಳವಾಗಿ ಹೋಗು. ಆದರೆ ನೀನಿದ್ದುದೇ ಇಷ್ಟು ದಿನ ನನಗೆ ಗೊತ್ತಿರಲಿಲ್ಲವಲ್ಲ' ಎನ್ನುವ ಹಾಗೆ ಪ್ರತಿಕ್ರಿಯೆ ತೋರಿಸಿದರು.

ನಮ್ಮ ರಾಜಕಾರಣಿಗಳಂತೂ ವ್ಯಂಗ್ಯ ಚಿತ್ರಕಾರರನ್ನೇ ಬಗ್ಗು ಬಡಿಯುವ ಮನೋಭಾವದವರು. ಅಂತಾರಾಷ್ಟ್ರೀಯ ಮಟ್ಟಕ್ಕೇರಿದ್ದ ಏಕೈಕ ವ್ಯಂಗ್ಯಸಾಪ್ತಾಹಿಕ 'ಶಂಕರ್ಸ್ ವೀಕ್ಲಿ' ಸತ್ತು ಹೋಗಲು ಕೇವಲ ಅದಕ್ಕಿದ್ದ ಆರ್ಥಿಕ ಮುಗ್ಗಟ್ಟು ಕಾರಣವಲ್ಲ, ಆಗಿನ ಪ್ರಧಾನಿಯ ಕ್ರೂರ ಪತ್ರಿಕಾ ಸೆನ್ಸಾರ್ ನೀತಿಯೂ ಕಾರಣವಾಗಿತ್ತು.

ಅಂದಹಾಗೆ ಲೇಖನದ ಮೊದಲು ಕೊಟ್ಟ ಅನಿಲ ಬೆಟಗೇರಿಯವರ ಕಾರ್ಟೂನಿನ ಅರ್ಥ ಏನು? ಕ್ರಮಶಃ ಡಿರಿಖ, ಚೋ, ಮಾರಿಯೋ, ಅಬು ಅಂಥವರ ಪರಿಚಯ ಮಾಡಿಕೊಡುವಿರಾ?

ಗುಲಬರ್ಗಾ –ಮುಕುಂದ ಪೆರಕಲ್ಲ

## ಪರಿಣಾಮಕಾರಿ

'ಯಾತನಾಶಿಬಿರ'ದ ಪುಸ್ತಕ ಸಂಗ್ರಹ(ಜುಲೈ ಸಂಚಿಕೆ)ವನ್ನು ಓದಿ ನನಗೆ ಮತ್ತೆ ಯಾತನೆಯ ನೆನಪು ಮರುಕಳಿಸಿತು. ಗುಲಬುರ್ಗಾ ಜಿಲ್ಲೆಯ ಆ ಭೀಕರ ಬರಗಾಲದಲ್ಲಿ ಸಾಕಷ್ಟು ಬೆಂದವ ನಾನು. ಸಂಗ್ರಹ (ನಾನು ಮೂಲವನ್ನೋದಿಲ್ಲವಾದರೂ) ಬಹಳ ಪರಿಣಾಮಕಾರಿಯಾಗಿದೆ.

ಬೆಳಗಾವಿ ಆರ್.ಕೆ. ಕುಲಕರ್ಣಿ

## ಯಾತನೆಯ ಶಿಬಿರ?

ಅಡಿಗೆಯವನಾಗಿ ಸೇರಿ ಆಡಳಿತವನ್ನು ಕೈಗೆತ್ತಿಕೊಂಡು ಸರ್ವಾಧಿಕಾರದ ಆಟವಾಡಿದ ಇದಿ ಅಮೀನನ ಬಗ್ಗೆ ಹಾಗೂ ಆತನ ನಾಡಿನ 'ಯಾತನಾಶಿಬಿರ'ವನ್ನು ಬಲು ಸರಳವಾಗಿ ಮತ್ತು ಪರಿಣಾಮಕಾರಿಯಾಗಿ ಚಿತ್ರಿಸಿದ ಡಾ. ಪ್ರಕಾಶ ಕೊಣ್ಣೂರರಿಗೆ ಧನ್ಯವಾದಗಳು.

ಧಾರವಾಡ. ಎ.ಎಲ್. ಮುರಗೇಶಿ

## ಒಂದು ಆಶ್ಚರ್ಯ

ನಿಮ್ಮ ಜುಲೈ ಸಂಚಿಕೆಯಲ್ಲಿ ಬಂದ 'ಲಾಹೋರದ ಸಿಖ್ ಮ್ಯೂಜಿಯಂ' ನೋಡಿ ನನಗೆ ಖಂಡಿತ ಆಶ್ಚರ್ಯವೇ ಆಯಿತು. ಪಾಕಿಸ್ತಾನದಲ್ಲಿ ಮುಸ್ಲಿಮೇತರರಿಗೆ ಸಂಬಂಧಿಸಿದ ಯಾವುದೇ ವಸ್ತು ಸುರಕ್ಷಿತವಾಗಿ ಉಳಿದಿರಲು ಸಾಧ್ಯವೇ ಇಲ್ಲವೆಂದು ನನ್ನ ಕಲ್ಪನೆಯಾಗಿತ್ತು. ಆದರೆ ಪ್ರಸಿದ್ಧ ಸಿಖ್ ಅರಸು ಮನೆತನಕ್ಕೆ ಸಂಬಂಧಿಸಿದ ಐತಿಹಾಸಿಕ ವಸ್ತುಸಂಗ್ರಹಾಲಯವನ್ನು ಪಾಕಿಸ್ತಾನ ಸುಸ್ಥಿತಿಯಲ್ಲಿ ಉಳಿಸಿಕೊಂಡು ಬಂದಿರುವುದು ಶ್ಲಾಘನೀಯ.

ಪುಣೆ —ವಿ. ಎಸ್. ಶಾನಭಾಗ

## ಚಿತ್ರಗಳು

ಡಾ. ಕೆ. ಎಂ. ಧ್ರುವಕುಮಾರರು ಬರೆಯುತ್ತಿರುವ ಎಲ್ಲಾ ವೈದ್ಯಕೀಯ ಕಥೆ (ಅವು ಕಥೆಯಂತೆ ಹೇಳಲ್ಪಡುವುದರಿಂದ ಹಾಗೆ ಹೇಳಿದ್ದೇನೆ) ಗಳನ್ನು ಓದುತ್ತ ಬಂದಿದ್ದೇನೆ. ತುಂಬಾ ಇನ್‌ಫಾರ್ಮೆಟಿವ್ ಆಗಿವೆ. ಆದರೆ ಒಂದು ಕೊರತೆ ಚಿತ್ರಗಳದ್ದು. ದಯವಿಟ್ಟು, ಆಯಾ ರೋಗಕ್ಕೆ ಸಂಬಂಧಿಸಿದ ಚಿತ್ರಗಳನ್ನೂ ಹಾಕಿದರೆ ಇನ್ನೂ ಇನ್‌ಫಾರ್ಮೆಟಿವ್ ಆಗುತ್ತದಲ್ಲವೆ ?

ಬೆಂಗಳೂರು – ವಾಮನಮೂರ್ತಿ

[ನಿಮ್ಮ ಸಲಹೆ ಸ್ಥೂಲಮಾನದಿಂದ ಯೋಗ್ಯವಾಗಿದೆ. ಆದರೆ ಮಾನಸಿಕ ಅಸ್ವಾಸ್ಥ್ಯದ ಪ್ರಕರಣಗಳಲ್ಲಿ ಕಲ್ಪನೆಯಿಂದ ಚಿತ್ರಗಳನ್ನು ಬರೆಸುವುದು ಅಸಾಧ್ಯವಲ್ಲವೆ? –ಸಂ.]



# ಕಸ್ತೂರಿ

ಸಂಚಿಕೆ: ೧೨ ಕಸ್ತೂರಿ, ಅಗಸ್ಟ್ ೧೯೭೯ ವರ್ಷ: ೨೩

## ಬಾಳುವೆ

ವ್ಯಾಕ್ಸ್‌ಮುಲ್ಲರ್

ಬಾಳುವೆ ನಮ್ಮದಾದರೂ, ಬಾಳ್ವೆಯ ಗತಿಯನ್ನು ನಿರ್ದೇಶಿಸುವುದು ನಮ್ಮ ಕೈಯೊಳಗಿನ ಕೆಲಸವಲ್ಲ. ನಮ್ಮ ಯೋಗ್ಯತೆಗೆ ಅನುಸಾರವಾಗಿಯೇ ನಮ್ಮ ಜೀವನವನ್ನು ರೂಪಿಸಿದಾತನ ಕಾರ್ಯವೇ ಸರಿ ಎನ್ನಿಸುತ್ತದೆ. ಬಾಳಿನಲ್ಲಿ ಬರುವ ಅಸಹನೀಯವಾದದ್ದನ್ನೆಲ್ಲ ಸಹಿಸಲೇಬೇಕು. ತಾಳ್ಮೆಯಿಂದ, ಸಂತೋಷದಿಂದ ನಡೆದುಕೊಂಡರೆ ನಮಗೇ ಒಳ್ಳೆಯದು. ನಿಜ ! ಬಾಳಿನಲ್ಲಿ ಬರುವ ಕಷ್ಟಗಳನ್ನೆಲ್ಲಾ ಅನುಭವವನ್ನಾಗಿ ಅಳವಡಿಸಿಕೊಂಡು, ಬಾಳಿಗೆ ಒಂದು ನಿರ್ದಿಷ್ಟ ಗುರಿಯನ್ನು ರೂಪಿಸಿಕೊಂಡು ಅದನ್ನ ತಲುಪುವಂತೆ ಸಾಗಬೇಕು. ಬಾಳಿನಲ್ಲಿ ನಮ್ಮನ್ನು ಅಗಲಿ ಹೋಗುವವರು ಕೆಲವರು ಬೇಗ ಹಲವರು ನಿಧಾನವಾಗಿ — ಒಟ್ಟಿನಲ್ಲಿ ಎಲ್ಲರೂ ಹೋಗಲೇಬೇಕು — ಎಲ್ಲಿ ಅವಿಚ್ಛಿನ್ನ ಶಾಂತಿ ದೊರಕುವದೋ ಅಲ್ಲಿಗೆ. ಆತುರ, ಬೇಸರ, ಗೊಂದಲ ಗಾಟ, ಕಂಬನಿ ಯಾವುದೂ ನಮ್ಮ ಸಹಾಯಕ್ಕೆ ಬರುವುದಿಲ್ಲ. ಅವುಗಳಿಂದ ಜೀವನದ ಗತಿಯನ್ನು ಬದಲಾಯಿಸಲೂ ಸಾಧ್ಯವಿಲ್ಲ. ಇನ್ನೂ ಬಾಳುವೆಯ ದಾರಿಯನ್ನು ದೀರ್ಘಗೊಳಿಸಿದಂತೆ ಅನ್ನಿಸುತ್ತದೆ. ಅದೇ ಶಾಂತಿ, ನಿರ್ಲಿಪ್ತತೆ. ಕೃತಜ್ಞತೆ ಮತ್ತು ವಿಶ್ವಾಸ ನಮ್ಮನ್ನುಯೋಗ್ಯರನ್ನಾಗಿಸಿ — ಬಾಳಿಗೊಂದು ಭರವಸೆಯನ್ನು ನೀಡುತ್ತದೆ. ನಾವು… ಮಾಡಲೇ ಬೇಕಾದ ನಮ್ಮ ನಮ್ಮ ಕರ್ತವ್ಯವನ್ನು ಹಗುರುಗೊಳಿಸುತ್ತದೆ. ಇರುಳಿನಲ್ಲಿ ಕತ್ತಲೆ ಕವಿದಷ್ಟೂ ನಕ್ಷತ್ರದ ಕಾಂತಿ ಹೆಚ್ಚುವಂತೆ ಬಾಳಿನಲ್ಲಿ ಕಷ್ಟಗಳು ಬಂದಷ್ಟೂ ಜ್ಞಾನಜ್ಯೋತಿ ಬೆಳಗುತ್ತದೆ.

ಸಂಗ್ರಹ : " ಕಲಾ "




## ಹೇಗಾದರೂ ಸರಿ

ತಾನು ತಪ್ಪನ್ನೇ ಮಾಡಲಾರೆ, ತನ್ನ ಕೋರ್ಟಿನಲ್ಲಿ ನಿರ್ಣಯ ತಪ್ಪಾಗಲಾರದು. ಎಂದು ತಪ್ಪಾಗಿ ತಿಳಿದ ನ್ಯಾಯಾಧೀಶರೊಬ್ಬರಿದ್ದರು.

ಅಕಸ್ಮಾತ್ ಒಂದು ಸಾರಿ ಅವರು ಜಜ್‌ಮೆಂಟ್ ನೀಡಿದ ಪ್ರಕರಣದ ತಾರೀಖನ್ನು ಜೂನ್ ೩೧ ಎಂದು ಸಹಿ ಮಾಡಿದರು.

ಈ ಚಿಕ್ಕ ತಪ್ಪನ್ನು ಅವರ ಕಾರಕೂನ ಗಮನಿಸದೇ ಹೋಗಲಿಲ್ಲ. ಅಧೈರ್ಯದಿಂದಲೇ ತಲೆ ಕೆರೆಯುತ್ತ ಈ ವಿಷಯವನ್ನು ನ್ಯಾಯಮೂರ್ತಿಗಳ ಗಮನಕ್ಕೆ ತರಲು ಯತ್ನಿಸಿದ. "ಸ್ವಾಮೀ, ಜೂನ್ ತಿಂಗಳಿಗೆ ಮೂವತ್ತೇ ದಿನಗಳು."

"ಅದು ಹೇಗಾದೀತು? ನಾನು ನಿರ್ಣಯ ಸಾರಿ ಬಿಟ್ಟಿದ್ದೇನೆ. ಈಗ ಬದಲಾವಣೆ ಅಸಾಧ್ಯ."

"ಆದರೆ ಈ ವಿಷಯಕ್ಕೆ ಯಾರೂ ಅಪೀಲು ಮಾಡುವುದು ಸರಿಯೆನಿಸದು ಸ್ವಾಮೀ"

ನ್ಯಾಯಾಧೀಶರು ಒಂದು ಕ್ಷಣ ವಿಚಾರಿಸಿದರು. "ಸರಿ, ಹಾಗಾದರೆ ಜಜ್‌ಮೆಂಟ್ ಕೊನೆಯಲ್ಲಿ ಶರಾ ಸೇರಿಸಿರಿ."

"ಏನೆಂದು?"

"ಈ ನಿರ್ಣಯದಲ್ಲಿ ಜೂನ್ ೩೧ ಎಂದು ಬರೆದದ್ದನ್ನು ಜೂನ್ ೩೦ ಎಂದೇ ಗ್ರಹಿಸತಕ್ಕದ್ದು!"

ತನ್ನ ಬುದ್ಧಿವಂತಿಕೆಗೆ ತಾವೇ ನಕ್ಕರು ನ್ಯಾಯಾಧೀಶರು, ಅಂತೂ ಬರೆದದ್ದನ್ನು ಕಾಟು ಹಾಕಿ ಅಳಿಸಲಿಲ್ಲವಲ್ಲ ಎಂದು!

* * *

## ಅದು ಅಸಂಬದ್ಧ !

ಪಾಟೀ ಸವಾಲಿನಲ್ಲಿ ಕೂಡ ಅಪ್ರಸ್ತುತ-ಅಸಂಬದ್ಧ ಪ್ರಶ್ನೆ ಕೇಳಕೂಡದು. ಅದು ನಿಯಮ. ಅಂಥ ಸಂದರ್ಭದಲ್ಲಿ ಇದಿರು ಪಕ್ಷದ ವಕೀಲ ಅಥವಾ ಕೋರ್ಟು ಆಕ್ಷೇಪ ವೆತ್ತಬಹುದಾಗಿದೆ. ಕೋರ್ಟು ಅಂಥ ಆಕ್ಷೇಪವೆತ್ತಿದಾಗ ಆಕ್ಷೇಪಾರ್ಹ ಪ್ರಶ್ನೆಗಳನ್ನು ಕೇಳುವಂತಿಲ್ಲ.

ವಕೀಲರೊಬ್ಬರು ಇಂಥ ಸಂದರ್ಭದಲ್ಲಿ ನ್ಯಾಯಾಧೀಶರನ್ನು ಎದುರಿಸುವ ಪ್ರಸಂಗ ಬಂತು. ಆ ವಕೀಲರು ಕೇಳಿದ ಪ್ರಶ್ನೆ, "ಅಪ್ರಸ್ತುತ"ವೆಂಬ ಆಕ್ಷೇಪವನ್ನು ನ್ಯಾಯಾಧೀಶರು ಎತ್ತಿದರು. ಆದರೆ ವಕೀಲರು ಪಟ್ಟು ಹಿಡಿದು ಪುನಃ ಅದೇ ಪ್ರಶ್ನೆ ಕೇಳಿದರು. ತಿಕ್ಕಾಟ ಪ್ರಾರಂಭವಾಯಿತು. ನ್ಯಾಯಾಧೀಶರು ವಕೀಲರು ಸಾಕ್ಷಿಗೆ ಕೇಳುತ್ತಿರುವ ಪ್ರಶ್ನೆ ಅಸಂಬದ್ಧವೆಂದೂ, ವಕೀಲರು ಅದು ಸುಸಂಬದ್ಧವೆಂದೂ ಧ್ವನಿ ಏರಿಸಿ ಹೇಳತೊಡಗಿದರು. "ಏನ್ರೀ, ನಾನು ಹದಿನೈದು ವರ್ಷಗಳ ಅನುಭವ ಹೊಂದಿದವನಿದ್ದೇನೆ. ನನಗೇ ಹೇಳುತ್ತೀರಲ್ಲ?" ನ್ಯಾಯಾಧೀಶರು ಖಚಿತ ಧ್ವನಿಯಲ್ಲಿ ಕೇಳಿದರು.

"ಆದರೆ ಅದು (ನಿಮ್ಮ ಅನುಭವ) ಇಲ್ಲಿ ಅಸಂಬದ್ಧ ಮಹಾಸ್ವಾಮೀ" ಎಂದಾಗ ನ್ಯಾಯಾಧೀಶರು ತೆಪ್ಪಗಾದರು.

— ಜೆಸ್ ಕ್ಲೀನ್

# ಕಲಾತ್ಮಕ ಖಡ್ಗಗಳು

ದೇವತೆಗಳೆಲ್ಲ ಸಭೆ ಸೇರಿ, ಜಗತ್ಕರ್ತನನ್ನು ಕಂಡು ಪರಿಹಾರ ಕೇಳುವ ನಿರ್ಣಯ ತೆಗೆದುಕೊಂಡರು. ಅವರೆಲ್ಲರ ಅಳಲು ಸೃಷ್ಟಿಕರ್ತನಿಗೆ ಅರ್ಥವಾಯಿತು. ಅನೇಕ ಯುದ್ಧಗಳಲ್ಲಿ ಸುರಪಕ್ಷ ಅಸುರರಿಂದ ಸೋಲಿಸಲ್ಪಟ್ಟು ಹತಪ್ರಭವಾಗಿತ್ತು, ನಿರುಪಾಯವಾಗಿತ್ತು. ಈ ವಿಷಯ ಬ್ರಹ್ಮನಿಗೆ ಗೊತ್ತಿತ್ತು. ಅಂತೆಯೇ ಆತ ಯಜ್ಞವೊಂದನ್ನು ಮಾಡಿದ. ಯಜ್ಞನಾರಾಯಣನಿಂದ ಬಂದ ಪ್ರಸಾದವನ್ನು ಪ್ರಜಾಪಾಲಕ ದಕ್ಷರಾಜನ ಹಿರಿಯ ಮಗಳು ಜಯಾಳ ಕೈಗಿತ್ತ. ಪ್ರಸಾದವನ್ನು ಭುಂಜಿಸಿದ ಜಯಾ ಗರ್ಭ ಧರಿಸಿದಳು. ನವಮಾಸಗಳ ನಂತರ ಆಕೆ ಹೆತ್ತಳು. ಮಗುವನ್ನಲ್ಲ—ಅಸಿ(ಖಡ್ಗ)ಯನ್ನು !

ಈ ಖಡ್ಗವನ್ನು ಬ್ರಹ್ಮ ದೇವತೆಗಳಿಗಿತ್ತ. ಅವರು ತಮ್ಮ ಮೇಲೆ ಮತ್ತೆ ಹರಿಬಂದ ಅಸುರರನ್ನು ಜಯಿಸಿದರು...

ಈ ಕಥೆ ಪುರಾಣಕಾಲದ್ದು. ನಮ್ಮಲ್ಲಿ ಖಡ್ಗ ಹೇಗೆ ಹುಟ್ಟಿತು, ಅಪೂರ್ವ ಅಸ್ತ್ರ ಹೇಗಾಯಿತು ಎಂಬುದನ್ನು ತಿಳಿಸುವಂಥದು. ಅಗ್ನಿ ಅಥವಾ ಯಜ್ಞನಾರಾಯಣ ಅಸಿದೇವತೆ. ಕ್ಷತ್ರಿಯ ಕುಲಕ್ಕೆ ಈ ಆಯುಧ ಬ್ರಹ್ಮನಿಂದಲೇ ಕೊಡಲ್ಪಟ್ಟಿತು, ಶಿಷ್ಟ ರಕ್ಷಣೆ – ದುಷ್ಟ ಶಿಕ್ಷಣೆಯ ಸಲುವಾಗಿ ಎಂದೂ ಹೇಳುತ್ತಾರೆ.

ಖಡ್ಗಗಳ ಕಥೆ ವೈವಿಧ್ಯಮಯವಾಗಿರುವಂತೆ, ಖಡ್ಗಗಳಲ್ಲೂ ವೈವಿಧ್ಯವಿದೆ. ಇದು ಕೇವಲ ಆಯುಧವಷ್ಟೇ ಅಲ್ಲ, ದೇವಪ್ರಸಾದವೂ ಹೌದು. ಇದರಲ್ಲೂ ಕಲೆ ಅರಳಿದೆ. ಅಷ್ಟೇ ಅಲ್ಲ. ದೇವತೆಗಳಿಂದ ಖಡ್ಗಗಳನ್ನು ರಾಜ ಮಹಾರಾಜರು ಪಡೆದುಕೊಂಡ ಅನೇಕ ಕಥೆಗಳು ನಮ್ಮ ಇತ್ತೀಚಿನ ಇತಿಹಾಸದಲ್ಲೂ ಕಂಡುಬರುತ್ತವೆ. ಉದಾ: ಶಿವಾಜಿ ಪಡೆದ 'ಭವಾನಿ ಖಡ್ಗ.'

ಇಲ್ಲಿ ಖಡ್ಗಗಳ ಕಥೆಗಿಂತ ಅವುಗಳ ವೈವಿಧ್ಯದ ಕಡೆಗೇ ಹೆಚ್ಚು ಮಹತ್ವ ಕೊಡುತ್ತಿದ್ದೇವೆ. ಖಡ್ಗಗಳಿಂದ ರಾಜರೂ ರಾಜರಿಂದ ಖಡ್ಗಗಳೂ ಪ್ರಸಿದ್ಧವಾಗಿವೆ. ಶಿವಾಜಿಯ ಖಡ್ಗ, ಟಿಪ್ಪುವಿನ ಖಡ್ಗ ಎಂದೂ, ಅಥವಾ ಇಂಥ ವೀರರ ಇಲ್ಲವೆ ದುಷ್ಟನ ತಲೆ ಕಡಿಯಲು ಉಪಯೋಗಿಸಿದ ಖಡ್ಗವೆಂದೋ ನಾವು ಹೇಳುವುದುಂಟು. ಇಂಥ

ಖಡ್ಗಗಳು ನಮ್ಮ ದೇಶದ ಅನೇಕ ವಸ್ತು ಸಂಗ್ರಹಾಲಯಗಳಲ್ಲೂ, ಮಾಜಿ ರಾಜರ ವಂಶಜರ ಮನೆಗಳಲ್ಲಿಯೂ ಕಾಣಸಿಗುತ್ತವೆ.

ಇಂಗ್ಲೀಷಿನಲ್ಲಿ ಸ್ವೋರ್ಡ್, ಸಂಸ್ಕೃತದಲ್ಲಿ ಅಸಿ, ಹಿಂದಿ ಮರಾಠಿ ಮತ್ತಿತರ ಉತ್ತರ ಭಾರತದ ಭಾಷೆಗಳಲ್ಲಿ ತಲವಾರ್ ಮತ್ತು ಖಡ್ಗ ಎಂದು ಕರೆಯಲ್ಪಡುವ ಇದು ಕನ್ನಡದಲ್ಲಿ ಕತ್ತಿ, ಖಡ್ಗ ಮತ್ತು ಕಠಾರಿ ಎಂದು ಕರೆಯಲ್ಪಡುತ್ತದೆ. ದ್ರಾವಿಡ ಭಾಷೆಗಳೆಲ್ಲದರಲ್ಲೂ ಇದು ಖಡ್ಗ–ಕತ್ತಿ ಎಂದೇ ಪರಿಚಿತ.

ಇಬ್ಬದಿಯ ಅಲಗು, ಒಬ್ಬದಿಯ ಅಲಗುಗಳಲ್ಲದೇ ಮೊನೆಯಾದ, ಭಾರವಾದ, ಅಗಲವಾದ, ಬಾಗಿದ ಖಡ್ಗಗಳೂ ಇವೆ. ಹಾವಿನಂತೆ ಬಳಕುವ, ಐದರಿಂದ ಆರು ಅಡಿ ಉದ್ದವಾದ, ಸೊಂಟಕ್ಕೆ ಸುತ್ತಲು ಬರುವಂಥ ಖಡ್ಗಗಳೂ ಇವೆ. ಇದಕ್ಕೆ 'ಉರಮಿ' ಎಂದು ಹೆಸರಿದ್ದು ಹೆಚ್ಚಾಗಿ ದಕ್ಷಿಣ ಭಾರತದಲ್ಲಿ ಬಳಸಲ್ಪಡುತ್ತಿತ್ತು.

ಭಾರತೀಯ ಯುದ್ಧಕಲೆಯಲ್ಲಿ ಹತ್ತೊಂಬತ್ತನೆ ಶತಮಾನದವರೆಗೂ ಮಹತ್ವ ಪಡೆದಿದ್ದು ಖಡ್ಗ. ಬಂದೂಕು ಪಿಸ್ತೂಲುಗಳಂಥ ಅಗ್ನ್ಯಸ್ತ್ರಗಳು ಬಳಕೆಗೆ ಬಂದ ಮೇಲೆ ಇವು ತಮ್ಮ ಮಹತ್ವ ಕಳಕೊಂಡು, ಕೇವಲ ಗತವೈಭವದ ದ್ಯೋತಕವಾಗಿ ನಿಂತಿವೆ.

ರೋಮ್ ಸಾಮ್ರಾಜ್ಯದಲ್ಲೂ ಖಡ್ಗ ಬಳಸಲ್ಪಡುತ್ತಿತ್ತು. ಆದರೆ ಭಾರತದ ಖಡ್ಗಗಳಷ್ಟು ಪ್ರಸಿದ್ಧವಾದ ಖಡ್ಗಗಳು ಬೇರೆ ಕಡೆ ಸಿಗುವುದಿಲ್ಲ. ವೀರರಿಗೆ ಭಾರತೀಯ ಖಡ್ಗಗಳೆಂದರೆ ಬಲು ಗೌರವ. ಅಲೆಕ್ಸಾಂಡರ್ ಭಾರತದ ಮೇಲೆ ದಂಡೆತ್ತಿ ಬಂದಾಗ, ಭಾರತದ ಸೇನಾನಿಯೊಬ್ಬ ಆತನನ್ನು ಉಕ್ಕಿನ ತಲವಾರ್ ನೀಡಿ ಸ್ವಾಗತಿಸಿದನಂತೆ. ಈ ಕಾಣಿಕೆ ಆತನಿಗೆ ಬಲು ಸಂತಸ ತಂದಿತಂತೆ.

ಕಾರಣವಿಲ್ಲದೆ ಖಡ್ಗವನ್ನು ಹಿರಿಯುವುದು, ಖಡ್ಗವನ್ನು ತಿಕ್ಕುವುದು, ಅದರಲ್ಲಿ ಮುಖಬಿಂಬ ನೋಡಿಕೊಳ್ಳುವುದು, ನೆಲಕ್ಕೆಸೆಯುವುದು, ಮುಂತಾದುವುಗಳೆಲ್ಲ ನಿಷೇಧಿಸಲ್ಪಟ್ಟಿದ್ದವು. ಒಂದು ವೇಳೆ ಖಡ್ಗ ಆಕಸ್ಮಿಕವಾಗಿ ಹಿರಿಯಲ್ಪಟ್ಟರೆ ಖಡ್ಗಧಾರಿ ಅದಕ್ಕೆ ತನ್ನ ಬೆರಳ ರಕ್ತ ಹಚ್ಚಿ ಒರೆಗೆ ಸೇರಿಸಬೇಕಾಗುತ್ತಿತ್ತು.

ವಂಶಾನುಕ್ರಮವಾಗಿ ತಂದೆಯಿಂದ ಮಗನಿಗೆ, ಮೊಮ್ಮಗನಿಗೆ ಹೀಗೆ ಖಡ್ಗಗಳು ಒಪ್ಪಿಸಲ್ಪಟ್ಟ ಉದಾಹರಣೆಗಳೂ ಇವೆ.

ಖಾಂಡಾ ಎಂದು ಕರೆಯಲ್ಪಡುವ ಖಡ್ಗದಲ್ಲೊಂದು ಉಪದೇಶವಿದೆ. 'ಯುದ್ಧ ಬೇಡ–ಪ್ರೀತಿ ಮಾಡು' ಎಂದು. ಅದರಲ್ಲಿ ರಾಧಾಕೃಷ್ಣರ ಚಿತ್ರವೂ ಇದೆ.

ಖಡ್ಗದ ಜತೆಜತೆಗೇ ಢಾಲು ಅಥವಾ ಗುರಾಣಿಯೂ ಇರುತ್ತದೆ.

ಇವೆರಡರಲ್ಲೂ ಕಲೆ ಅರಳಿರುವುದನ್ನು ಇಲ್ಲಿ ಕಾಣಬಹುದು. ಕೆತ್ತನೆಯ ಕೆಲಸದ ಜತೆಗೆ ವಜ್ರಖಚಿತವಾದ ಖಡ್ಗಗಳೂ ಇದ್ದವು.

☆



ನ್ಯೂಯಾರ್ಕಿನಲ್ಲಿನ ಸ್ವೀಪರ್‌ಗಳು (ಬೀದಿ ಕಸಗುಡಿಸುವವರು) ಬಹುಶಃ ಜಗತ್ತಿನಲ್ಲಿಯೇ ಅತಿಹೆಚ್ಚು ಸಂಬಳ ಪಡೆಯುವಂಥ ಸ್ವೀಪರ್‌ಗಳಾಗಿದ್ದಾರೆ. ಅವರಿಗೆ ಪ್ರತಿವರ್ಷದ ಪಗಾರವು ೧೫ ಸಾವಿರ ಡಾಲರುಗಳು ಅಂದರೆ ಪ್ರತಿ ತಿಂಗಳಕ್ಕೆ ೧೦ ಸಾವಿರ ರೂಪಾಯಿಗಳು. ಇದರ ಜತೆಗೇ ಅವರಿಗೆ ಉಳಿದ ಭತ್ಯಗಳು, ಸೌಲಭ್ಯಗಳೂ ದೊರೆಯುತ್ತವೆ. ಅದು ಅವರ ಸಂಬಳದ–ಶೇಕಡಾ ೧೦ ರಷ್ಟು.

ರೋಮನ್ ಸಂಸ್ಕೃತಿಯ ಪ್ರಾತಿನಿಧಿಕ ನಗರಗಳಲ್ಲಿ ಒಂದೆಂದು ಹೇಳಬಹುದಾಗಿದ್ದ ಪಾಂಪೆ ಪ್ರಕೃತಿಯ ಮುನಿಸಿಗೆ ಗುರಿಯಾಗಿ ಮಣ್ಣಲ್ಲಿ ಮುಚ್ಚಿಹೋಗಿ ಇದೇ ಆಗಸ್ಟ್ ೨೪ಕ್ಕೆ ಸರಿಯಾಗಿ ೧೯೦೦ ವರ್ಷಗಳಾದವು.

# ಹುಗಿದುಹೋಗಿದ್ದ ಇತಿಹಾಸ

**ಎಂ. ಆರ್. ಎಸ್. ರಾವ್**

ಇಂದಿಗೆ ಸರಿಯಾಗಿ ೧೯ ಶತಮಾನಗಳ ಹಿಂದೆ ಆಗಸ್ಟ್ ೨೪ರಂದು ಬೆಳಗು ಮುಂಜಾನೆ ಇಟಲಿಯ ಪಾಂಪೆಯ ಜನಜೀವನ ಯಥಾಪ್ರಕಾರ ಶುರುವಾಯಿತು. ನಿತ್ಯದಂತೆ ಜನರು ತಮ್ಮ ಪ್ರಾತರ್ವಿಧಿಗಳನ್ನು ಮುಗಿಸಿದರು. ವಣಿಜರು ವ್ಯಾಪಾರಕ್ಕಾಗಿ ತಮ್ಮ ತಮ್ಮ ಮಳಿಗೆಗಳಿಗೆ ತೆರಳಿದರೆ ಪಾಂಪೆಯ ನಗರಸಭೆಯ ಚುನಾವಣೆಯ ದಿನ ಆದ್ದರಿಂದ ರಾಜಕೀಯದಲ್ಲಿ ಆಸಕ್ತಿಯಿರುವ ಜನ ಯಾರು ಯಾರು ನಗರಸಭೆಯ ಸದಸ್ಯರಾಗಿ ಚುನಾಯಿತರಾಗುವರೆನ್ನುವುದನ್ನು ಬೀದಿಗಳಲ್ಲಿ ಗುಂಪುಗೂಡಿ ಚರ್ಚಿಸತೊಡಗಿದರು. ರಾಜಕೀಯ ಪಕ್ಷಗಳ ಉಮೇದುವಾರರ ಪ್ರಚಾರಕ್ಕಾಗಿ ಇನ್ನು ಕೆಲವರು ತೆರಳಿದರು. ಚುನಾವಣೆಯಲ್ಲಿ ಭಾಗವಹಿಸಲೆಂದು ಬಂದ ಪಾಂಪೆಯ ಸುತ್ತ ಮುತ್ತಣ ಹಳ್ಳಿಗರು ಚುನಾವಣೆಯ ಸಮಯಕ್ಕಾಗಿ ಕಾಯುತ್ತಾ ಊರಲ್ಲಿ ತಿರುಗತೊಡಗಿದರು.

ಹೊತ್ತು ಏರತೊಡಗಿತ್ತು. ಆದರೆ ಹಿಂದಿನ ರಾತ್ರಿ ಪಾನಗೃಹಗಳಲ್ಲಿ ಕಂಠಮಟ್ಟ ಕುಡಿದು ಮಲಗಿದವರ ಪಾಲಿಗೆ ಇನ್ನೂ ಬೆಳಗಾಗಿರಲಿಲ್ಲ. ಕೆಳಗಿನ ಬೀದಿಗಳಲ್ಲಿ ಚುನಾವಣೆ ಪ್ರಚಾರದ ಅಬ್ಬರ ಹೆಚ್ಚಾಗುತ್ತಿದ್ದಂತೆಯೆ ಹಿಂದಿನ ರಾತ್ರಿಯ ರಸಭರಿತ ಘಟನೆಗಳನ್ನು ಮೆಲುಕುಹಾಕುತ್ತಾ ವಸತಿ ಗೃಹಗಳಲ್ಲಿ ಮಲಗಿದ ರಸಿಕರು ಹಾಸಿಗೆಯಿಂದೆದ್ದು ದಿನವನ್ನು ಹೇಗೆ ಮಜವಾಗಿ ಕಳೆಯಬೇಕೆಂಬ ಬಗ್ಗೆ ಯೋಚಿಸತೊಡಗಿದರು.

[illegible] ಜಾಗೃತವಾಯಿತು. [illegible] [illegible] ಇಲ್ಲದ [illegible]ಂತೆ ಕಾರಂಜಿಗಳಿಂದ ನೀರ [illegible] ಕೊಂಡು ಪಟಪಟ ಪೊಡೆಯುತ್ತಾ [illegible] ತ್ತಿದ್ದರು. ಸ್ನಾನಗೃಹಗಳಲ್ಲಿನ ಸುಂದರಿಯರೀದ ಸುಗಂಧದ್ರವ್ಯಗಳನ್ನು ಪೂಸಿಕೊಂಡು ಸ್ನಾನ ಮಾಡಿದ ಜನ ನಿತ್ಯಕರ್ಮಗಳಿಗಾಗಿ ಕಚೇರಿ ಗಳಿಗೋ ಅಂಗಡಿಗಳಿಗೋ ಶಾಲೆ ಕಾಲೇಜು ಗಳಿಗೋ ತೆರಳತೊಡಗಿದರು.

ಆದರೆ ಎಂದಿನಂತೆ ಆ ದಿನ ಸಾಮಾನ್ಯವಲ್ಲ ವೆನ್ನುವುದನ್ನು ಅವರಾರೂ ಮರೆತಿರಲಿಲ್ಲ. ರೋಮನ್ ಚಕ್ರಾಧಿಪತ್ಯದ ಆ ಪ್ರಮುಖ ನಗರ ದಲ್ಲಿ ಅಂದು ನಗರಸಭೆಗೆ ಚುನಾವಣೆ ನಡೆಯು ವುದಿತ್ತು.

ಅದು ಮತ್ತೊಂದು ರೀತಿಯಲ್ಲಿ ಅಸಾಮಾನ್ಯ ವಾಗುವುದೆಂಬುದು ಅವರಿಗಾರಿಗೂ ಗೊತ್ತಿರ ಲಿಲ್ಲ. ಅಂದು ಕಾಲ ತನ್ನ ಕರಾಳ ಹಸ್ತಗಳಿಂದ ಪಾಂಪೆನಗರವನ್ನು ಯಥಾಸ್ಥಿತಿಯಲ್ಲೆ ಭೂಗರ್ಭ ದಲ್ಲಿ ಸಮಾಧಿಗೊಳಿಸಿ ಒಂದೂವರೆ ಸಾವಿರ ವರ್ಷಗಳ ನಂತರ [illegible] ಪ್ರಪಂಚಕ್ಕೆ ಅವರ ದರ್ಶನಮಾಡಿಸುವವನಿದ್ದನೆಂಬುದು ಅಂದಿನ ಜನರಿಗಷ್ಟೇ ಏಕೆ, ಮುಂದೆ ೧೯ ಶತಮಾನಗಳ ವರೆಗೆ ಜೀವಿಸಿದ ಜನರಿಗೂ ಗೊತ್ತಿರಲಿಲ್ಲ.

ಮಧ್ಯಾಹ್ನವಾಯಿತು. ಚುನಾವಣೆ ಪ್ರಾರಂಭ ವಾಯಿತು. ಹಾಸುಗಲ್ಲುಗಳಿಂದ ನಿರ್ಮಿತ ವಾದ ಬೀದಿಗಳು ಬಿಸಿಯೇರುತ್ತಿದ್ದಂತೆಯೆ ನಗರಸಭೆಯ ಸೇವಕರು ಕಾರಂಜಿಗಳಿಂದ ನೀರು ತಂದು ರಸ್ತೆಯ ಮೇಲೆ ಎರಚಿ ರಾಜವೀಥಿಗಳ ಕೆನ್ನಾಲಿಗೆಗಳನ್ನು ಶಮನಗೊಳಿಸತೊಡಗಿದರು.

ಹೊತ್ತೇರತೊಡಗಿತ್ತು. ನಗರದಾಚೆಗಿದ್ದ ವೆಸುವಿಯಸ್ ಪರ್ವತದ ತುದಿಯಿಂದ ಒಂದು ಮೋಡವೆದ್ದು ಊರ್ಧ್ವಮುಖವಾಗಿ ಚಲಿಸತೊಡ ಗಿತು. ಸ್ವಲ್ಪ ಹೊತ್ತಿನ ನಂತರ ಅದು ಬೃಹದಾಕಾರ ತಾಳಿ ಸಾವಕಾಶವಾಗಿ ಆಕಾಶದ ನೀಲಿಯಲ್ಲಿ ಕರಗಿಹೋಯಿತು. ಚುನಾವಣೆಗಳಲ್ಲಿ ವ್ಯಸ್ತರಾದ ಜನರಿಗೆ ಇದರ ಬಗ್ಗೆ ಲಕ್ಷ್ಯವೇ ಇರಲಿಲ್ಲ.



ಪಾಂಪೆಯ ಭವ್ಯ ಕ್ರೀಡಾಂಗಣ. ಇಲ್ಲಿ ಗಚ್ಚನ್ನು ಬಳಸಿರುವ ಬಗೆಯನ್ನು ನೋಡಿದರೆ [illegible]ನ್ನರಿಗೆ ಕಾಂಕ್ರೀಟಿನ ಉಪಯೋಗದ ಅರಿವು ಚೆನ್ನಾಗಿಯೇ ಇತ್ತೆಂದು ಮನವರಿಕೆಯಾಗುವುದು

ಪಳ್ಳಿಗಳು ಸಾಲಾಗಿ ಉರಿಯತೊಡಗಿದವು. ಇದಾವುದರ ಪರಿವೆಯೂ ಇಲ್ಲದಂತೆ ಹಿರಿಯ ಪ್ಲಿನಿ ನಿದ್ರಿಸುತ್ತಿದ್ದ. ಆದರೆ ಗೆಳೆಯನ ಪರಿವಾರ ನಿದ್ದೆಗೆಟ್ಟು ಹೌಹಾರಿ ಇದೆಲ್ಲವನ್ನೂ ನಿರೀಕ್ಷಿಸುತ್ತಿತ್ತು. ಬಿಸಿ ಬಿಸಿ ಬೂದಿ ಮನೆಯ ಸುತ್ತ ಸಂಗ್ರಹವಾಗತೊಡಗಿದಾಗ ಆಳ ಪ್ಲಿನಿಯನ್ನು ಎಬ್ಬಿಸಿ ಬಟ್ಟೆಬರೆ ಕಟ್ಟಿಕೊಂಡು ಸುರಕ್ಷಿತ ಸ್ಥಳವನ್ನರಸಿ ಓಡತೊಡಗಿದರು. ಬೆಳಗಾದರೂ ಸೂರ್ಯನ ಬೆಳಕು ಕಾಣದಷ್ಟು ದಟ್ಟವಾಗಿ ಆಕಾಶ ಮೋಡಗಳಿಂದ ಆಚ್ಛಾದಿತವಾಗಿತ್ತು. ಕೈದೀವಟಿಗೆಗಳನ್ನು ಹಿಡಿದು ಜನ ಓಡುತ್ತಿದ್ದರು. ಪ್ಲಿನಿಯೂ ಅವರ ಹಿಂದೆ ಓಡತೊಡಗಿದ. ವಾತಾವರಣ ಗಂಧಕಮಯವಾಗಿತ್ತು. ಭೂಮಿ ಕಂಪಿಸುತ್ತಿತ್ತು. ವೆಸುವಿಯಸ್ ಅಗ್ನಿಯನ್ನು ಕಾರುತ್ತಿತ್ತು. ವಿಷಾಕ್ತ ವಾತಾವರಣದಿಂದಾಗಿ ಪ್ಲಿನಿ ಬಸವಳಿದು ಬಿದ್ದ. ಎಚ್ಚರ ಬಂದಾಗ ಬಾಯಾರಿತ್ತು. ಆ ಗದ್ದಲದಲ್ಲಿ ಪಕ್ಕದವರಿಂದ ಎರಡು ಗ್ಲಾಸು ನೀರು ಸೇವಿಸಿ ಮತ್ತೆ ಓಡಲು ಪ್ರಯತ್ನಿಸಿ ಸಾಧ್ಯವಾಗದೆ ಕೆಳಗೆ ಬಿದ್ದು ಪ್ರಾಣ ಬಿಟ್ಟ. ಆತ ವಿಷಾಕ್ತವಾಯುವಿನಿಂದ ಸತ್ತನೋ ಅಥವಾ ಶ್ರಮಾತಿಶಯದಿಂದ ಸತ್ತನೋ ಎನ್ನುವುದು ಅನಿರ್ಣೀತವಾಗಿದೆಯಾದರೂ ಬಹುತರವಾಗಿ ಇತಿಹಾಸಕಾರರು ಆತ ಶ್ರಮವನ್ನು ತಾಳಲಾರದೆ ಸತ್ತನೆಂದು ಅಭಿಪ್ರಾಯಪಡುತ್ತಾರೆ.

ಇಪ್ಪತ್ತೆಂಟು ಗಂಟೆಗಳ ನಂತರ ಬೆಳಗಾ



ಪಾಂಪೆಯ ಅವಶೇಷಗಳಲ್ಲಿ ಕಂಡುಬಂದ ಒಂದು ನೋಟ. ಆಗ ಪರ್ವತದಿಂದ ಸಿಡಿದು ಬಂದ ಮಣ್ಣುಕಲ್ಲುಗಳಲ್ಲಿ ಹುಗಿದು ಹೋದ ಸಾವಿರಾರು ಮಾನವ ಶರೀರಗಳು ಹತ್ತೊಂಭತ್ತು ಶತಮಾನಗಳ ನಂತರ ನಡೆದ ಉತ್ಖನನದಲ್ಲಿ, ಕೊಳೆತು ನಾಶವಾಗದೆ ಹಾಗೆಯೇ ಉಳಿದದ್ದು ಕಂಡುಬಂದಿದೆ



ರೋಮನ್ನರ ದೇವತೆ ಫಾನ್‌ನ ಕಂಚಿನ ಸುಂದರ ವಿಗ್ರಹ ಪಾಂಪೇಯ ಕಲಾಕಾರರ ಯೋಗ್ಯತೆಯನ್ನು ಇದರಿಂದ ಅಳೆಯಬಹುದು. ಫಾನ್ ಕುರುಬರನ್ನು ರಕ್ಷಿಸುವ ದೇವತೆ.

ದಾಗ ವೆಸುವಿಯಸ್ಸಿನ ರುದ್ರತಾಂಡವ ನಿಂತುಹೋಗಿತ್ತು. ಅದರೊಟ್ಟಿಗೆ ಇಪ್ಪತ್ತು ಸಾವಿರ ಜನಸಂಖ್ಯೆಯ ಪಾಂಪೆಯ ಜೀವನಾಡಿಯೂ ಸ್ತಬ್ಧವಾಗಿತ್ತು. ಈ ಅವಧಿಯಲ್ಲಿ ಅಗ್ನಿಪರ್ವತದಿಂದ ಚಿಮ್ಮಿದ ಲಾವಾರಸ ಇಡಿ ನಗರದ ಮೇಲೆ ಹರಿದು ಪಾಂಪೆಯ ಅಸ್ತಿತ್ವವನ್ನು ಅಳಿಸಿಹಾಕಿತ್ತು.ಅನಂತರ ಪ್ರಚಂಡವಾದ ಮಳೆ ಬೀಳತೊಡಗಿ ಪ್ರಕೃತಿಯು ಪಾಂಪೆಯ ಗೋರಿಯನ್ನು ಪೂರ್ತಿಗೊಳಿಸಿತು.

ಈ ಉತ್ಪಾತದಿಂದ ಕಿರಿಯ ಪ್ಲಿನಿ ಹೇಗೋ ಪಾರಾದ. ಆದರೆ ಮುಂದೆ ಅವನಿಗೆ ಅಲ್ಲಿ ಉಳಿಯುವ ಅಗತ್ಯ ಕಾಣಲಿಲ್ಲ. ಆತ ನಾವೆಯೇರಿ ರೋಮ್ ಪಟ್ಟಣಕ್ಕೆ ಹಿಂದಿರುಗುವಾಗ ವೆಸುವಿಯಸ್ಸಿನ ತುದಿಯಿಂದ ಆಗಾಗ ಅಗ್ನಿಶಿಖೆ ರಾರಾಜಿಸುತ್ತಿತ್ತು. ನಿಸರ್ಗ ಹಾಳು ಸುರಿಯುತ್ತಿತ್ತು. ಪಶುಪಕ್ಷಿಗಳು ಅಲ್ಲಲ್ಲಿ ಸತ್ತುಬಿದ್ದಿದ್ದವು. ತಮ್ಮ ಜೀವವುಳಿಸಿಕೊಳ್ಳಲು ಯಾವ ಪರಿವೆಯೂ ಇಲ್ಲದಂತೆ ಪರವೂರಿಗೆ ಓಡಿಹೋದ ಜನ ಕಳೆದುಹೋದ ಆಪ್ತಬಾಂಧವರನ್ನು ಆಶೆಗಣ್ಣುಗಳಿಂದ ಹುಡುಕುತ್ತಿದ್ದರು. ತಾಯಿಯನ್ನು ಕಳೆದುಕೊಂಡ ಮಗುವೂ ಮಗುವನ್ನು ಕಳೆದುಕೊಂಡ ತಾಯಿಯೂ ವೃದ್ಧಾಪ್ಯದಿಂದಾಗಿ ಕಣ್ಣು ಕಳೆದುಕೊಂಡ ಮುದುಕರು ಮಕ್ಕಳನ್ನೂ ಅಳುತ್ತಾ ಹುಡುಕುತ್ತಿದ್ದ ದೃಶ್ಯ ಹೃದಯವೇಧಕವಾಗಿತ್ತು. ಎಲ್ಲವನ್ನೂ ಕಳೆದುಕೊಂಡವರು ಅನಾಥರಕ್ಷಕನಲ್ಲಿ ಮೊರೆಯಿಡುವುದನ್ನೂ ಇಂಥ ದುರ್ಧರ ಪ್ರಸಂಗದಲ್ಲಿಯೂ ದುಷ್ಟರು ಜನರನ್ನು ದೋಚುವುದನ್ನೂ ಕಾಣಬಹು-

ದಾಗಿತ್ತು.

ಕಾಲಕ್ರಮೇಣ ಈ ಘಟನೆ ಜನಮಾನಸದಿಂದ ಮರೆಯಾಗಿ ಹದಿನೈದು ನೂರು ವರ್ಷಗಳ ನಂತರ ಆ ಪ್ರದೇಶದಲ್ಲಿ ಆಕಸ್ಮಿಕವಾಗ ಪಾಂಪೆ ಯ ಕೆಲವು ಅವಶೇಷಗಳು ಪ್ರಕಾಶಕ್ಕೆ ಬಂದರೂ ಸಾರ್ವಜನಿಕ ಆಸಕ್ತಿ ಅಷ್ಟಾಗಿ ಕುದುರಲಿಲ್ಲ. ಮುಂದೆ ಹದಿನೆಂಟನೆಯ ಶತಮಾನದ ಪೂರ್ವಾರ್ಧದಲ್ಲಿ ಇಟಲಿಯ ಸರಕಾರ ಹೂತುಹೋದ ಈ ಮಹಾನಗರದ ಬಗೆಗೆ ಮುತುವರ್ಜಿ ವಹಿಸಿ ಉತ್ಖನನ ನಡೆಸಿದಾಗ ದೊರೆತ ರೋಮನ್ ಸಂಸ್ಕೃತಿಯ ಅವಶಿಷ್ಟ ಅಮೂಲ್ಯ ತಮ್ಮ ಕಲಾಸೌಂದರ್ಯದಿಂದಾಗಿ ಜಗತ್ತಿನ ಲಕ್ಷ್ಯ ವನ್ನು ಸೆಳೆದವು. ಅಂದಿನಿಂದಲೂ ಅಲ್ಲಿ ಉತ್ಖನನ ಗಳು ನಡೆಯುತ್ತಲೇ ಇವೆ. ಉತ್ಖನನ ನಡೆ ದಂತೆಲ್ಲ ಆ ಕಾಲದ ನಾಗರಿಕತೆಯ ಮೇಲೆ ಬೆಳಕು ಚೆಲ್ಲುವ ಕುರುಹುಗಳು ಸಿಗುತ್ತಲೇ ಇವೆ. ಉತ್ಪಾತ ಒಮ್ಮೆಲೆ ಸಂಭವಿಸಿದ್ದರಿಂದ ಮಾನವ ರನ್ನೊಳಗೊಂಡು ಎಲ್ಲ ವಸ್ತುಗಳೂ ದುರಂತ ಸಂಭವಿಸಿದ ಕ್ಷಣಕ್ಕೆ ಇದ್ದ ಭಂಗಿಯಲ್ಲಿ ಶಿಲಾ ಜಾತವಾಗಿದ್ದು ಅಲ್ಲಿ ದೊರೆತ ವಸ್ತುಗಳಲ್ಲೆಲ್ಲ ಜೀವಂತಿಕೆ ತುಂಬಿತುಳುಕುತ್ತಿದೆ.

ಪಾಂಪೆಯ ದುರಂತ ಸಂಭವಿಸಿ ಎರಡು ಸಾವಿರ ವರ್ಷಗಳಾದ ಈ ಸಂದರ್ಭದಲ್ಲಿ ಪಾಂಪೆಗೆ ಐತಿಹಾಸಿಕವಾಗಿಯೂ ಕಲಾತ್ಮಕವಾಗಿಯೂ ಇರುವ ಮಹತ್ವವನ್ನು ಪರಿಗಣಿಸಿ ಅಮೇರಿಕದ ಪ್ರಕೃತಿ ವಿಜ್ಞಾನ ಮ್ಯೂಜಿಯಂ ಪಾಂಪೆಯ ಬಳಿ ಯಿರುವ ವಸ್ತುಸಂಗ್ರಹಾಲಯದಿಂದ ಪಾಂಪೆಗೆ ಸಂಬಂಧಿಸಿದ ಅವಶೇಷಗಳನ್ನು ಸಾವಿರ ಗಟ್ಟಲೆಯಲ್ಲಿ ತರಿಸಿಕೊಂಡು ತನ್ನ ದೇಶದಲ್ಲಿ ಪ್ರದರ್ಶನವನ್ನೇರ್ಪಡಿಸಿದೆ. ಹೀಗೆ ಗತಕಾಲದಲ್ಲಿ ಉಚ್ಛ್ರಾಯದಲ್ಲಿದ್ದ ಸಂಸ್ಕೃತಿಗೊದಗಿದ ದುರಂತಕ್ಕೆ ಪಾಂಪೆಯಿಂದು ಮೂಕ ಸಾಕ್ಷಿಯಾಗಿದೆ. ●

---

## ನಮ್ಮ ಓದುಗ ಅಭಿಮಾನಿಗಳಲ್ಲಿ

ಮುದ್ರಣ ಕಾಗದ ಮತ್ತು ಇತರ ಮುದ್ರಣ ಸಲಕರಣೆಗಳ ಬೆಲೆಯಲ್ಲಿ ವಿಪರೀತ ಹೆಚ್ಚಳವಾಗಿರುವ ಕಾರಣದಿಂದಾಗಿ "ಕಸ್ತೂರಿ"ಯ ಬೆಲೆ ಯನ್ನೂ ಚಂದಾದರವನ್ನೂ ಅನಿವಾರ್ಯವಾಗಿ ಪುನರ್ವಿಮರ್ಶಿಸಬೇಕಾಗಿ ಬಂದಿದೆ. ಕಳೆದ ೨೩ ವರ್ಷಗಳಲ್ಲಿ "ಕಸ್ತೂರಿ"ಯ ಮಾರಾಟ ದರವನ್ನು ಎರಡು ಸಲ ಮಾತ್ರ ಹೆಚ್ಚಿಸಲಾಗಿದೆ. ೧೯೭೪ರ ನಂತರ ಈಗ ಅಂಥ ಪ್ರಮೇಯ- ವೊದಗಿದ್ದು ಸಹೃದಯ ಓದುಗರು ನಮ್ಮೊಂದಿಗೆ ಸಹಕರಿಸುವರಾಗಿ ನಂಬಿದ್ದೇವೆ.

— ವ್ಯವಸ್ಥಾಪಕ, ಕಸ್ತೂರಿ

ಸಪ್ಟಂಬರ್ ೧, ೧೯೭೯ ರಿಂದ ಜಾರಿಗೆ ಬರುವ ಪುನರ್ವಿಮರ್ಶಿತ ದರಗಳು :

| | | |
|---|---|---|
| ಬಿಡಿ ಸಂಚಿಕೆ | ... ... | ರೂ. ೧-೫೦ |
| ಆರು ತಿಂಗಳಿಗೆ (ಅಂಚೆ ವೆಚ್ಚ ಸೇರಿ) | | ರೂ. ೧೦-೦೦ |
| ಒಂದು ವರ್ಷಕ್ಕೆ | ,, ,, | ರೂ. ೧೮-೦೦ |

ಅಂಚೆ ಮೂಲಕ "ಕಸ್ತೂರಿ"ಯನ್ನು ತರಿಸಿಕೊಳ್ಳುವ ಚಂದಾದಾರರಿಗೆ ಅವರ ಚಂದಾ ಅವಧಿಯಲ್ಲಿ ಹೊರಬರುವ ವಿಶೇಷ ಸಂಚಿಕೆಯೂ ವಾರ್ಷಿಕ ಮತ್ತು ಅರ್ಧ ವಾರ್ಷಿಕ ಚಂದಾ ಹಣದಲ್ಲೇ ದೊರೆಯುವುದು.

# ನಗೆಮಲ್ಲಿಗೆ

"ಈಶ್ವರನ ಹೆಂಡತಿ ಪಾರ್ವತಿ. ವಿಷ್ಣುವಿನ ಹೆಂಡತಿ ಲಕ್ಷ್ಮಿ. ಹಾಗಾದರೆ ಗಣಪತಿಯ ಹೆಂಡತಿ ಯಾರು ಗುರುಗಳೇ?"

"ಶಿಷ್ಯೋತ್ತಮಾ, ಗಣಪತಿಯು ಬುದ್ಧಿಯ ದೇವತೆಯೆಂಬುದನ್ನು ಮರೆತುಬಿಟ್ಟೆಯಾ? ಆತ ಮದುವೆಯಾಗಲೇ ಇಲ್ಲ."

•

ಶಾಲೆಯಲ್ಲಿ ಭಾಷಣಸ್ಪರ್ಧೆಗಾಗಿ ತಯಾರಿ ನಡೆದಿತ್ತು. ಕಿಟ್ಟು ಭಾಷಣಮಾಡುತ್ತಿದ್ದ. ತಪ್ಪನ್ನು ಸರಿಪಡಿಸಲು ಗುರುಗಳು ಮಧ್ಯೆ ಪ್ರವೇಶಿಸಿದರು: "ಕಿಟ್ಟು, ಶಬ್ದಗಳನ್ನು ಸರಿಯಾಗಿ ಉಪಯೋಗಿಸಬೇಕು. ಹಬ್ಬ, ಉತ್ಸವಗಳು ನಡೆಯುತ್ತವೆ. ಆದರೆ ಮಹಾ ಮಹಾ ಉತ್ಪಾತಗಳು ಮಾತ್ರ ಸಂಭವಿಸುತ್ತವೆ, ಎನ್ನುವುದನ್ನು ಯಾವಾಗಲೂ ಲಕ್ಷ್ಯದಲ್ಲಿಟ್ಟುಕೊಂಡಿರು" "ಆಗಲಿ ಸಾರ್, ನಾನು ಆಗ ಹೇಳಿದ ಹಾಗೆ ನನ್ನ ಅಪ್ಪನ ವಿವಾಹ ಸಂಭವಿಸಿದಾಗ ನನ್ನ ಅಜ್ಜಿಯ ವಯಸ್ಸು..." ಕಿಟ್ಟು ಭಾಷಣವನ್ನು ಮುಂದುವರಿಸಿದ.

•

ಪ್ರಣಯ: ಗಂಡು ಹೆಣ್ಣಿನ ಬೆನ್ನಟ್ಟಿಕೊಂಡು ಹೋಗಿ ಹಣ್ಣನ್ನು ಹಿಡಿಯುವ ಬದಲು ಬೆನ್ನಟ್ಟಿಕೊಂಡು ಬಂದ ಹೆಣ್ಣು ಗಂಡನ್ನು ಹಿಡಿಯುವ ಆಟ.

•

ಸಂಖ್ಯಾಶಾಸ್ತ್ರಿಯೊಬ್ಬ ಸರ್ವೆ ನಡೆಸಿ ಹೆಂಗಸರಿಗೆ ಸರಾಸರಿಯಾಗಿ 3·6 ಮಕ್ಕಳು ಗಂಡಸರಿಗೆ 1.8 ಮಕ್ಕಳು ಇರುವದನ್ನು ಕಂಡುಕೊಂಡಿದ್ದರಿಂದ ಹೆಂಗಸರಿಗಿಂತ ಗಂಡಸರಿಗೇ ಕಡಿಮೆ ಮಕ್ಕಳು ಎಂಬ ನಿರ್ಣಯಕ್ಕೆ ಬಂದನಂತೆ.

•

ಮೂರ್ಖರೊಂದಿಗೆ ಜಗಳಾಡುವುದು ಜಾಣತನವಲ್ಲ. ಏಕೆಂದರೆ ಆಗ ಅಕ್ಕಪಕ್ಕದವರಿಗೆ ಯಾರು ಯಾರೆನ್ನುವುದೇ ಗೊತ್ತಾಗುವುದಿಲ್ಲ.

•

"ನೀನು ಆತನ ಸಂಬಂಧಿಕನೆನ್ನುತ್ತಾನೆ. ಆದರೆ ನೀನು ಏನೂ ಸಂಬಂಧವೇ ಇಲ್ಲವೆನ್ನುತ್ತಿ. ಯಾವುದು ಸರಿ?"

"ಆತನ ಮಾತನ್ನು ನಂಬಬೇಡ ಆತನೊಬ್ಬ ಕತ್ತೆ."

"ಇರಬಹುದು ಬಿಡು. ಈ ದಿನಗಳಲ್ಲಿ ಎಲ್ಲರ ಮಾತು ನೂರಕ್ಕೆ ನೂರರಷ್ಟು ಸತ್ಯವಿರುತ್ತದೆಂಬುದಕ್ಕೆ ಗ್ಯಾರಂಟಿಯಾದರೂ ಏನು?"

•

"ನಿನ್ನ ಹೆಂಡತಿಗೆ ನೀನು ಆಶ್ರಯವನ್ನೇ ಕೊಟ್ಟಿಲ್ಲವಂತೆ! ಏನಯ್ಯಾ, ನಿನ್ನ ತಹ ಸಭ್ಯಗೃಹಸ್ಥರು ಎಂದಾದರೂ ಹೀಗೆ ಮಾಡುವುದೆ?" ಜಜ್ ಸಾಹೇಬರು ಪ್ರಶ್ನಿಸಿದರು

"ಒಮ್ಮೆ ನಮ್ಮ ಮನೆಗೆ ಬಂದು ನೋಡಿ ಸಾರ್. ಯಾರಿಗೆ ಯಾರು ಆಶ್ರಯ ಕೊಡಬೇಕೆನ್ನುವುದು ತಂತಾನೆ ಗೊತ್ತಾಗುತ್ತೆ."

"ಹಾಗೆಂದರೇನಯ್ಯಾ ಅದು?" ಜಜ್ ಸಾಹೇಬರು ಗುಡುಗಿದರು.

"ಇನ್ನೂ ತಿಳಿಸಿ ಹೇಳಬೇಕೆ ಸಾರ್? ನನ್ನ ಮನೆಯಲ್ಲಿ ನಾನು ನಿರಾಶ್ರಿತ.' ಪುಕ್ಕಲ ಪ್ರಾಣಿಯಿಂದ ಉತ್ತರ ಬಂತು.

•

ಕಾರ್ ಅಪಘಾತದಲ್ಲಿ ಕೈ ಕಳೆದುಕೊಂಡ ಮಹಿಳೆಯೊಬ್ಬಳು ನಷ್ಟಭರ್ತಿಗಾಗಿ ದಾವೆ ಹೂಡಿದಳು. ವಿಚಾರಣೆ ಪ್ರಾರಂಭವಾಯಿತು. ಜಜ್ ಕೇಳಿದ: "ಅಲ್ಲಮ್ಮಾ ಒಂದು ಲಕ್ಷ ರೂಪಾಯಿಗಳಷ್ಟು ನಷ್ಟ ಭರಿಸಬೇಕೆಂದು ದಾವೆ ಹೂಡಿದ್ದೀಯಾ, ಮೊತ್ತ ಬಹಳ ಆಗುವುದಿಲ್ಲವೆ?" "ಅದು ಹೇಗೆ ಸರ್ ಬಹಳವಾಗುವುದು? ನಾನು ಈ ವರೆಗೆ ನನ್ನ ಗಂಡನನ್ನು ಹಿಡಿದಿಟ್ಟುಕೊಂಡಿದ್ದೇ ಅದರಲ್ಲಿ. ಅನ್ನುವಾಗ..." ಎಂದಳಂತೆ ಆ ಮಹಿಳೆ.

•

"ನನಗಿಂತಲೂ ಚಿಕ್ಕವರಾದವರನು ನಾನು ಹೊಡೆಯಬೇಕೇನಮ್ಮ?"

"ಇಲ್ಲ ಮರಿ. ಎಂದೆಂದಿಗೂ ಹೊಡೆಯು ಬಾರದು."

"ಹೂಂ. ಆ ಮಾತು ನನಗೂ ಗೊತ್ತು. ಆದರೆ ನಮ್ಮ ಟೀಚರಿಗೇ ಗೊತ್ತಿಲ್ಲ ನೀನು ನಾಳೆ ಸ್ಕೂಲಿಗೆ ಬಂದು ಈ ಮಾತನ್ನು ಅವರಿಗೂ ಹೇಳುವಿಯೇನಮ್ಮ ?"

*

ಒಂದು ಪುಸ್ತಕದ ಮೊದಲ ಪುಟದಲ್ಲಿ ಹೀಗೆ ಬರೆದಿತ್ತಂತೆ: "ನನ್ನ ಹೆಂಡತಿಗೆ ಸಮರ್ಪಿತ. ಅವಳ ಗೈರುಹಾಜರಿಯಿಲ್ಲದೆ ಪುಸ್ತಕವನ್ನು ಬರೆದು ಮುಗಿಸಲು ಸಾಧ್ಯವಾಗುತ್ತಿರಲಿಲ್ಲ ಎಂಬ ಕಾರಣದಿಂದ "

*

ಕಿಟ್ಟುವಿನ ತಂದೆ ತೀರಿಹೋದ ಕೆಲವು ದಿನಗಳ ನಂತರ ಪುಟ್ಟು ಭೇಟಿಯಾದ. ಆತ ಕೇಳಿದ: "ಅರ್ರೆ, ಕಿಟ್ಟು. ಪಾಪ, ನಿಮ್ಮ ತಂದೆ. ತೀರಿಹೋದರಂತಲ್ಲೊ. ಕೊನೆಯಲ್ಲಿ ಏನಾದರೂ ಹೇಳಿದರೇನೋ ಅವರು ?"

ದೀರ್ಘವಾದ ನಿಟ್ಟುಸಿರನ್ನು ಬಿಟ್ಟು ಪುಟ್ಟು ಹೇಳಿದ: "ಇಲ್ಲಪ್ಪಾ ಇಲ್ಲ ಒಂದು ಮಾತನ್ನೂ ಹೇಳಲಿಲ್ಲ. ಕೊನೆಯ ವರೆಗೂ ನನ್ನ ತಾಯಿ ಆತನ ಬಳಿಯೇ ಇದ್ದಳು."

*

ಸ್ತ್ರೀ ಸಿದ್ಧಾಂತ: ಆಭರಣವನ್ನೋ ಸೀರೆಯನ್ನೋ ಬ್ಲೌಜ್ ಪೀಸ್‌ನ್ನೋ ಹೂವಿನ ದಂಡೆಯನ್ನೋ ಅಥವಾ ಹೆಂಡತಿಗೆ ಪ್ರಿಯವಾದ ಇನ್ನಾವುದಾದರೂ ವಸ್ತುವನ್ನೋ ತಂದು ಕೇವಲ ಹೆಂಡತಿಯ ಪ್ರೀತ್ಯರ್ಥವಾಗಿ ಇವುಗಳನ್ನು ತಂದಿದ್ದಾಗಿ ಗಂಡನು ಹೇಳಿದಾಗ ಅದರ ಹಿಂದೆ ಯಾವುದೋ ಗೂಢವಾದ ಹಾಗೂ ಸಬಲವಾದ ಕಾರಣವಿದೆಯೆಂದು ಭಾವಿಸತಕ್ಕದ್ದು.

*

ಉಂಡಾಡಿಗಳು ಮಾತಾಡುತ್ತಿದ್ದುದನ್ನು ಕೇಳಿಸಿಕೊಂಡದ್ದು.

"ಅಲ್ರೋ, ಆ ದಿನ ಸಮುದ್ರದ ದಂಡೆಯ ಮೇಲೆ ಮೈಮೇಲೆ ಸಾಕಷ್ಟು ಬಟ್ಟೆಯಿಲ್ಲದೆ ತಿರುಗುತ್ತಿದ್ದ ಆ ನಾಚಿಗೆಗೆಟ್ಟವಳನ್ನು ಪೋಲೀಸರು ಬಂಧಿಸಿದ್ದರಲ್ಲ, ಮುಂದೇನಾಯಿತು ?"

"ಏನು ಆಗಲಿಲ್ಲ ಕಣೋ, ಪುರಾವೆಯಿಲ್ಲವೆಂದು ಹೇಳಿ ಜಜ್ ಅವಳನ್ನು ಬಿಟ್ಟು ಬಿಟ್ಟರಂತೆ."

*

ತೊಂದರೆಯಲ್ಲಿದ್ದ ಸ್ನೇಹಿತನಿಗೆ ಅಗತ್ಯವಾಗಿ ಸಹಾಯಮಾಡಿ. ಆತ ನಿಮ್ಮ ಸಹಾಯವನ್ನು ಕೃತಜ್ಞತೆಯಿಂದ ಸ್ಮರಿಸುವುದನ್ನು ಮರೆಯಲು ಸಾಧ್ಯವೇ ಇಲ್ಲ — ಮುಂದಿನ ಸಲ ಮತ್ತೆ ಸಹಾಯಕ್ಕಾಗಿ ಬಂದಾಗ

*

ಸಂಖ್ಯಾಶಾಸ್ತ್ರಿಯೊಬ್ಬ ವಿಚಿತ್ರ ಪ್ರಾಣಿ. ಆತನ ಕಾಲುಗಳನ್ನು ಬೆಂಕಿಯಲ್ಲಿ ತಲೆಯನ್ನು ರಿಫ್ರಿಜಿರೇಟರಿನಲ್ಲೂ ಇರಿಸಿ 'ಹೇಗೆ ಅನಿಸುತ್ತದಪ್ಪಾ?' ಎಂದು ಕೇಳಿ ಬೇಕಾದರೆ 'ಸರಾಸರಿಯಾಗಿ ಆರಾಮವಾಗಿ' ಎಂದು ಆತ ಉತ್ತರಿಸುತ್ತಾನೆ

*

ಪಾಕೀಟು ಹಾರಿಸಿದ್ದಕ್ಕಾಗಿ ಧಡಿಯನೊಬ್ಬ ಯುವಕನನ್ನು ಕೋರ್ಟಿಗೆ ಎಳೆದುಕೊಂಡು ಬಂದ. "ಹೌದು ಸ್ವಾಮಿ, ನಾನು ಪಾಕೀಟು ಹಾರಿಸಿದ್ದು ನಿಜ ನನಗೆ ಶಿಕ್ಷೆಯನ್ನು ವಿಧಿಸಿ, ಡೈವೋರ್ಸ್ ನ ಕೊಡಿ."

"ಶಹಭಾಸ್ ಹುಡುಗಾ, ಕಳ್ಳತನ ಮಾಡಿದ್ದರೂ ಮಾಡಿದ್ದನ್ನು ಸುಲಭವಾಗಿ ಒಪ್ಪಿಕೊಂಡೆಯಲ್ಲ, ಅಷ್ಟೇ ನನಗೆ ಸಮಾಧಾನ. ಅದಿರಲಿ ಡೈವೋರ್ಸ್ ಏಕೆ ಕೊಡಬೇಕು ಹೇಳು? ಕಳ್ಳತನಕ್ಕೂ ಅದಕ್ಕೂ ಏನು ಸಂಬಂಧ ?"

"ಖಂಡಿತ ಇದೆ ಸ್ವಾಮಿ, ಖಂಡಿತ ಇದೆ. ನಾನು ಇವರ ಪರ್ಸನ್ನು ತೆಗೆದಾಗ ಕಿಲುಬು ಕಾಸೂ ಸಿಗಲಿಲ್ಲ. ಸಿಕ್ಕಿದ್ದೆಂದರೆ ನನ್ನ ಹೆಂಡತಿಯ ಮೂರು ಫೋಟೋಗಳು ಮಾತ್ರ," ಯುವಕ ಉತ್ತರಿಸಿದ.

*

ಪೋರನೊಬ್ಬ ಪಠ್ಯಪುಸ್ತಕದ ಮೇಲೆ ಬರೆದುಕೊಂಡಿದ್ದು. "ಶನಿವಾರ, ರವಿವಾರ ಹಾಗೂ ರಜಾದಿನಗಳಲ್ಲಿ ಬಂದ್."

# ಭಾರತೀಯನೆಂಬ ಹೆಮ್ಮೆ

ಲಂಡನ್ನಿನ ಕ್ಯಾಕ್ಸ್ಟನ್ ಭವನದಲ್ಲಿ ಸೆಂಟ್ರಲ್ ಏಶಿಯನ್ ಸೊಸಾಯಿಟಿಯ ವತಿಯಿಂದ ೧೯೪೦ರ ಮಾರ್ಚ್ ೧೩ ರಂದು ಒಂದು ಸಭೆ ಜರುಗಿತು. ಜಾಲಿಯನವಾಲಾ ಬಾಗ್ ಹತ್ಯಾಕಾಂಡ ನಡೆದ ಸಮಯದಲ್ಲಿ ಪಂಜಾಬದ ಗವ್ಹರ್ನರರಾಗಿದ್ದ ಸರ್ ಮೈಕೇಲ್ ಡಾಯರನನ್ನು ಅದಕ್ಕೆ ಏಶಿಯಾದ ವಿಷಯಗಳ ತಜ್ಞನೆಂದು ಆಮಂತ್ರಿಸಲಾಗಿತ್ತು. ಸಭೆ ಮುಗಿಯಿತು. ಎಲ್ಲರೂ ಹೊರಡತೊಡಗಿದರು. ಆಗ ಉಧಮ್ ಸಿಂಹ ತನ್ನ ಜೇಬಿನಿಂದ ಐದು ಗುಂಡಿನ ರಿವಾಲ್ವರನ್ನು ಹೊರತೆಗೆದನು. ಕೂಡಲೇ ಢಂ ಢು ಎಂದು ಶಬ್ದವಾಯಿತು. ಅಲ್ಲಿದ್ದ ಜನರು ವಿಸ್ಮಿತರಾಗಿ ನೋಡತೊಡಗಿದರು. ಸರ್ ಮೈಕೇಲ್ ಡಾಯರ್ ಮತ್ತು ಲಾರ್ಡ್ ಜೆಟ್ಲಂಡ್—ಇಬ್ಬರೂ ಭಾರತದ ಮಾಜಿ ಗವ್ಹರ್ನರರು ನೆಲಕ್ಕುರುಳಿದರು.

ಆಕ್ರಮಣಕಾರಿಯ ಶೋಧ ಜೋರಿನಿಂದ ನಡೆಯಿತು. ಅದೇ ಸಮಯಕ್ಕೆ ಓರ್ವ ಇಂಗ್ಲೀಷ್ ಯುವತಿ ತನ್ನೆರಡೂ ಕೈಗಳನ್ನು ಬಾಗಿಲಿಗೆ ಅಡ್ಡಗಟ್ಟಿ ಓರ್ವ ದೃಢಕಾಯ ತರುಣನನ್ನು ಹೊರಗೆ ಹೋಗದಂತೆ ತಡೆದಳು. ಕ್ಷಣಾರ್ಧದಲ್ಲಿಯೇ ಉಧಮ್‌ಸಿಂಹನ ಜೇಬಿನಿಂದ ರಿವಾಲ್ವರ್ ಪುನಃ ಹೊರಗೆ ಬಂದಿತು. ಆದರೆ ತನ್ನನ್ನು ತಡೆದ ವ್ಯಕ್ತಿ ಮಹಿಳೆಯೆಂಬುದು ತಿಳಿದಕೂಡಲೆ ಅವನು ತನ್ನ ರಿವಾಲ್ವರನ್ನು ನೆಲಕ್ಕೆ ಎಸೆದನು. ಅವನನ್ನು ಆಗಿಂದಾಗ್ಗೆ ಬಂಧಿಸಲಾಯಿತು.

ಬ್ರಿಟಿಷ್ ನ್ಯಾಯಾಲಯದಲ್ಲಿ ಉಧಮ್‌ಸಿಂಹನನ್ನು ನಿಲ್ಲಿಸಲಾಗಿತ್ತು. ನ್ಯಾಯಾಧೀಶರು ಪ್ರಶ್ನಿಸಿದರು: "ನೀನು ರಕ್ಷಣೆಗಾಗಿ ವಕೀಲರ ಸಹಾಯವನ್ನು ಅಪೇಕ್ಷಿಸುವೆಯಾ?" ಉತ್ತರ ದೊರೆಯಿತು "ಇಲ್ಲ." ಪ್ರಶ್ನೆಗಳ ಶೃಂಖಲೆ ಮುಂದುವರಿಯಿತು. ಅಷ್ಟರಲ್ಲಿ ಓರ್ವ ಯುವತಿಯು ಜನರನ್ನು ಬದಿಗೆ ಸರಿಸಿ ನ್ಯಾಯಾಧೀಶರ ಎದುರಿನಲ್ಲಿ ಬಂದು ನಿಂತು, ನ್ಯಾಯಾಧೀಶರಿಂದ ಅನುಮತಿ ಪಡೆದು ಉಧಮ್‌ಸಿಂಹನನ್ನು ಪ್ರಶ್ನಿಸಿದಳು: "ನಿನ್ನ ರಿವಾಲ್ವರಿನಲ್ಲಿ ಇನ್ನೂ ಮೂರು ಗುಂಡುಗಳಿದ್ದವು, ನೀನು ನನಗೂ ಗುಂಡಿಕ್ಕಿ ಪಾರಾಗಲು ಏಕೆ ಪ್ರಯತ್ನಿಸಲಿಲ್ಲ?"

ಉಧಮ್‌ಸಿಂಹ ಅತ್ಯಂತ ಶಿಷ್ಟತೆ ಮತ್ತು ವಿನಮ್ರತೆಯಿಂದ ಉತ್ತರಿಸಿದ: "ಸಹೋದರಿ, ನಾವು ಭಾರತೀಯರು, ಮಹಿಳೆಯರ ಮೇಲೆ ಕೈಯೆತ್ತುವುದು ನಮ್ಮ ಸಂಸ್ಕೃತಿಯಲ್ಲ. ಆದುದರಿಂದಲೇ ನಾನು ರಿವಾಲ್ವರನ್ನು ಕೆಳಗೆ ಎಸೆದುಬಿಟ್ಟೆ. ಒಂದು ವೇಳೆ ನಿನ್ನ ಸ್ಥಾನದಲ್ಲಿ ಮತ್ತಾರಾದರೂ ಪುರುಷರು ಇದ್ದಿದ್ದರೆ ಅವರು ಅಂದು ನನ್ನ ಗುಂಡಿಗೆ ಬಲಿಯಾಗುತ್ತಿದ್ದರು."

ನ್ಯಾಯಾಲಯ ಉಧಮ್‌ಸಿಂಹನಿಗೆ ಮರಣ ದಂಡನೆ ವಿಧಿಸಿತು. ೧೯೪೦ ರ ಜೂನ್ ೧೨ ರಂದು "ವಂದೇ ಮಾತರಂ," ಎಂದು ಭಾರತಮಾತೆಗೆ ನಮಿಸಿ ಆತ ನಗುನಗುತ್ತ ನೇಣುಗಂಬವನ್ನೇರಿದ.

(ಸಾಧಾರ)

—ವೆಂಕಟೇಶ ಗಂಗಾವತಿ

ಕಣ್ಮರೆಯಾದ ಕೀರ್ತಿಕಲಶ

# ಹಜಾರೀಪ್ರಸಾದ ದ್ವಿವೇದಿ

**ಡಾ. ಮ. ಸು. ಕೃಷ್ಣಮೂರ್ತಿ**

ಹಿಂದಿಯ ಮೂರ್ಧನ್ಯ ವಿದ್ವಾಂಸರಾದ ಡಾ. ಹಜಾರಿ ಪ್ರಸಾದ ದ್ವಿವೇದಿಯವರು ದಿ. ೧೯-೫-೭೯ ರಂದು ನಿಧನರಾದರು. ಅವರ ನಿಧನದಿಂದ ಹಿಂದೀ ಸಾಹಿತ್ಯದ ಕಲಶ ವೊಂದು ಕಳಚಿಬಿದ್ದಂತಾಗಿದೆ. ಅವರ ಸಾವಿನೊಂದಿಗೆ ಒಂದು ಯುಗ ಮುಕ್ತಾಯವಾಯಿತು. ಆಧುನಿಕ ಹಿಂದೀ ಸಾಹಿತ್ಯದ ಕೀರ್ತಿಕಲಶಗಳಲ್ಲಿ ಒಬ್ಬರಾದ ಡಾ. ಹಜಾರಿಪ್ರಸಾದ ದ್ವಿವೇದಿಯವರು ಬಹುಮುಖಿ ಪ್ರತಿಭಾಸಂಪನ್ನರು. ಭಾರತೀಯ ಸಂಸ್ಕೃತಿಯ ಜೀವಂತ ಪ್ರತಿಮೆಯೆಂದು ವಿಖ್ಯಾತರಾಗಿದ್ದ ಅವರು ಹಿಂದಿಯ ರಸವಾದೀ ವಿಮರ್ಶಕರಾಗಿ, ರಮ್ಯೋಜ್ವಲ ಕಾದಂಬರಿಕಾರರಾಗಿ, ಸರ್ವಶ್ರೇಷ್ಠ ಪ್ರಬಂಧಕಾರರಾಗಿ, ಗಂಭೀರ ಸಂಶೋಧಕರಾಗಿ, ಮಾನವತಾವಾದೀ ಇತಿಹಾಸಕಾರರಾಗಿ. ಎಲ್ಲಕ್ಕೂ ಮಿಗಿಲಾಗಿ ಸ್ವಾಧೀನ ಚಿಂತಕರಾಗಿ ಹಿಂದೀ ಸಾಹಿತ್ಯಕ್ಕೆ ಒಂದು ಹೊಸ ಆಯಾಮವನ್ನು ನೀಡಿದರು. ಅವರ ಉದ್ದ ಅಗಲಗಳಲ್ಲಿ ಹಬ್ಬಿ ಪರ್ವತೋಪಮರಾಗಿ ಬೆಳೆದರು.

ಉತ್ತರ ಪ್ರದೇಶದ ಬಲಿಯಾ ಜಿಲ್ಲೆಯ ಓಝಾಬಲಿಯಾ ಎಂಬ ಹಳ್ಳಿಯಲ್ಲಿ ೧೯೦೭ ರಲ್ಲಿ ದ್ವಿವೇದಿಯವರು ಜನಿಸಿದರು. ಅವರ ಮುತ್ತಜ್ಜ ಆರತ ದುಬೆ ಆ ಭಾಗದಲ್ಲೇ ಬಹು ದೊಡ್ಡ ಜ್ಯೋತಿಷಿಗಳು. ಅವರು 'ಆರತ ದುಬೇಕಾ ಛಪರಾ' ಎಂಬ ಒಂದು ಹೊಸ ಹಳ್ಳಿಯನ್ನೇ ಹುಟ್ಟು ಹಾಕಿದರು. ದ್ವಿವೇದಿಯವರ ತಂದೆ ಅನಮೋಲ್ ದ್ವಿವೇದಿ ದೊಡ್ಡ ವಿದ್ವಾಂಸರು. ಸಾಧು ಸ್ವಭಾವದವರು. ದ್ವಿವೇದಿಯವರಿಗೆ ನಾಮಕರಣವಾದದ್ದು ಬೈಜನಾಥ ದ್ವಿವೇದಿ ಎಂದು, ಆದರೆ ಮಗು ಹುಟ್ಟಿದ ಗಳಿಗೆಯೋ ಏನೋ, ಅವರ ತಂದೆಗೆ ಎಲ್ಲಿಂದಲೋ ಆಕಸ್ಮಿಕವಾಗಿ ಸಾವಿರ ರೂಪಾಯಿ ಬಂದಿತು. ಆದ್ದರಿಂದ ಅಕ್ಕಪಕ್ಕದ ಜನರು ಮಗುವನ್ನು 'ಹಜಾರಿಪ್ರಸಾದ' (ಸಾವಿರದ ವರ) ಎಂದೇ ಕರೆಯತೊಡಗಿದರು. ಕೊನೆಗೆ ಅದೇ ಶಾಶ್ವತವಾಯಿತು. ದ್ವಿವೇದಿಯವರು ತಮ್ಮ ಜಿಲ್ಲೆಯ ಪ್ರಾಥಮಿಕ, ಮಾಧ್ಯಮಿಕ

ಶಾಲೆಗಳಲ್ಲಿ ಶಿಕ್ಷಣಮುಗಿಸಿ ಕೊನೆಗೆ ಕಾಶಿಗೆ ಹೋಗಿ ಜ್ಯೋತಿಷ್ಯಶಾಸ್ತ್ರದಲ್ಲಿ ವಿಶೇಷ ವ್ಯಾಸಂಗ ಮಾಡಿದರು. ೧೯೩೦ ರಲ್ಲಿ ಶಾಸ್ತ್ರಾಚಾರ್ಯ ಪರೀಕ್ಷೆ ಪಾಸುಮಾಡಿದರು. ಜ್ಯೋತಿಷ್ಯ ಅವರ ಮನೆತನದ ಕಸುಬಾಗಿತ್ತು. ಅವರ ತಂದೆ ತಮ್ಮ ಮಗ ಭವಿಷ್ಯವಾದಿ ಇಲ್ಲವೆ ವಕೀಲನಾಗಲಿ ಎಂದು ಬಯಸಿದರು. ಆದರೆ ವಿಧಿಲಿಖಿತವೇ ಬೇರೆ. ಅವರು ಹಿಂದೀ ಸಾಹಿತ್ಯದ ಭವಿಷ್ಯ ನಿರ್ಮಾಪಕರಾದರು.

## ನಡೆದದ್ದೇ ದಾರಿ

ಅವರಿಗೆ ಬಾಲ್ಯದಿಂದಲೇ ಸಾಹಿತ್ಯದಲ್ಲಿ ಆಸಕ್ತಿ. ಹಿಂದಿಯ ವಿಖ್ಯಾತ ಕವಿಗಳಾದ ಹರಿ ಔಧರು ಕವಿತೆ ಬರೆಯಲು ಅವರಿಗೆ ಪ್ರೇರಣೆ ನೀಡಿದರು. ಅವರು ಬರೆದ ಕವಿತೆಗಳನ್ನು ಮೆಚ್ಚಿ ಬೆನ್ನು ತಟ್ಟುತ್ತಿದ್ದರು. ಆಗ ಅವರು ಬ್ರಜ ಭಾಷೆಯಲ್ಲಿ ಕವಿತೆ ಬರೆಯುತ್ತಿದ್ದರು. ಅವರ ಕವಿತೆಗಳು ಮೈಯಲ್ಲಿ ಮಿಂಚಿನ ಹೊಳೆ ತುಳುಕಿಸುವಂಥವು. ಅವುಗಳಿಗೆ ತಲೆದೂಗಿ ಹಿಂದಿಯ "ಹರಿಕವಿ ಭೂಷಣನಿಗೆ ನೀನು ಸಮ" ಎಂದು ಅವರು ಈ ಕಿಶೋರನನ್ನು ಹುರಿದುಂಬಿಸುತ್ತಿದ್ದರು.

ಶಿಕ್ಷಣ ಮುಗಿದ ಮೇಲೆ ೧೯೩೦ರ ಸುಮಾರಿನಲ್ಲಿ ದ್ವಿವೇದಿಯವರು ಶಾಂತಿನಿಕೇತನಕ್ಕೆ ಹಿಂದೀ ಅಧ್ಯಾಪಕರಾಗಿ ಹೋದರು. ಸ್ಪರ್ಶಮಣಿಯ ಸಂಪರ್ಕದಿಂದ ಕಲ್ಲೂ ಕಾಂಚನವಾಗುತ್ತದೆ. ಅಂಥದರಲ್ಲಿ ದ್ವಿವೇದಿಯಂಥ ಸಹೃದಯ ವ್ಯಕ್ತಿಯನ್ನು ಕೇಳಬೇಕೆ? ಶಾಂತಿನಿಕೇತನವೊಂದು ಜ್ಯೋತಿರ್ಮಂಡಲ. ಗುರುದೇವ ಕವೀಂದ್ರ ರವೀಂದ್ರರು, ದೀನಬಂಧು ಸಿ. ಎಫ್. ಆಂಡ್ರೂಸ್, ನಂದಲಾಲ ಬಸು, ಆಚಾರ್ಯ ಕ್ಷಿತಿಮೋಹನ ಸೇನ, ಮಹಾಮಹೋಪಾಧ್ಯಾಯ ವಿಧುಶೇಖರ ಭಟ್ಟಾಚಾರ್ಯ. "ಓ ನೆನಪುನೊಂದಿಗ್ಗಿಕೆ! ಅವರ ಸಾಹಿತ್ಯದಲ್ಲಿ ನಾನು ನಿಜವಾಗಿಯೂ 'ದ್ವಿಜತ್ವ'ವನ್ನು ಪಡೆದೆ" ಎಂದು ಅವರು ಹೇಳಿಕೊಂಡಿದ್ದಾರೆ. ಶಾಂತಿನಿಕೇತನದಲ್ಲಿ ಅವರು 'ಅನಿಕೇತನ ಪ್ರಜ್ಞೆ'ಯನ್ನು ಬೆಳೆಸಿಕೊಂಡುದರ ಜೊತೆಗೆ ಬಂಗಾಲಿ, ಇಂಗ್ಲಿಷ್ ಮೊದಲಾದ ಭಾಷೆಗಳ ವಿದ್ವಾಂಸರ ಸಂಪರ್ಕ ಪಡೆದರು. ಆ ಭಾಷೆಗಳ 'ರತ್ನಾಕರ'ಗಳಲ್ಲಿ ಮುಳುಗಿಗರು ನಿಷ್ಣಾತಶಿಂದಲ್ಲಿ ಅವರು ಸರ್ವತೋಮುಖವಾಗಿ ಬೆಳೆದರು. ಸಂಸ್ಕೃತದ ಉದ್ದಾಮ ಪಂಡಿತರಾದ ಅವರು, ವೇದಾಭ್ಯಾಸ ಜಡರಾಗದೆ, ವಿಶ್ವಕುತೂಹಲಿಗಳಾಗಿ ಬೆಳೆದರು. ೧೯೩೦ ರ ಸುಮಾರಿನಲ್ಲಿ ಅವರು ಸಾಹಿತ್ಯಕ್ಷೇತ್ರಕ್ಕೆ ಕಾಲಿಟ್ಟರು. ಅಂದಿನಿಂದ ಇಂದಿನ ವರೆಗೆ (೧೯೭೯) ಸುಮಾರು ಅರ್ಧ ಶತಮಾನಗಳ ಕಾಲ ಹಿಂದೀ ಸಾಹಿತ್ಯದಲ್ಲಿ ಅವರು ಗಂಧವಾರಣವಾಗಿ, ಮಲಯಸಮೀರಣವಾಗಿ ವಿಜೃಂಭಿಸಿದರು. ಆನೆ ಹೋದದ್ದೇ ಹಾದಿ. ಅದೇ ರೀತಿ ದ್ವಿವೇದಿ ಹೋದದ್ದೆಲ್ಲ ಹಾದಿಯಾಯಿತು.

ದ್ವಿವೇದಿಯವರು ಮೊದಲು ವಿಮರ್ಶಕರಾಗಿ ಸಾಹಿತ್ಯಲೋಕವನ್ನು ಪ್ರವೇಶಿಸಿದರು. ಈ ಹೊತ್ತಿಗಾಗಲೆ ಪಂಡಿತ ರಾಮಚಂದ್ರ ಶುಕ್ಲರು ಹಿಂದಿಯಲ್ಲಿ ಸಮಾಲೋಚನಾಸಮ್ರಾಟರೆನಿಸಿಕೊಂಡು ಒಂದು ಹೊಸ ಯುಗವನ್ನು ಸ್ಥಾಪಿಸಿದ್ದರು. ಮಹಾಮೇಧಾವಿಗಳಾದ ಅವರ ಸ್ಥಾಪನೆಗಳ ಮುಂದೆ ನಿಲ್ಲುವ ಸಾಮರ್ಥ್ಯ ಬಹುಮಂದಿಗಿರಲಿಲ್ಲ. ಶುಕ್ಲರು ಹಿಂದೀ ಸಾಹಿತ್ಯದ ವಿವಿಧ ಪ್ರವೃತ್ತಿಗಳನ್ನು ಅಳೆದು ಸುರಿದು ಬೆಲೆಗಟ್ಟಿದ್ದರು. ಆದರೆ ವಿವಿಧ ಕಾವ್ಯಧಾರೆಗಳ, ಪ್ರವೃತ್ತಿಗಳ ಮೂಲ ಸೆಲೆಗಳನ್ನು ಗುರುತಿಸಿ ಅವುಗಳಿಗೆ ಸಮಂಜಸವಾದ ವ್ಯಾಖ್ಯಾನ ನೀಡಿ ಮತ್ತು ಪ್ರಾಚೀನ ಕಾವ್ಯಗಳಿಗೆ ಆ ಯುಗಚೇತನದ ಆಧಾರದ ಮೇಲೆ ಮೌಲ್ಯ ನಿರ್ಧಾರ ಮಾಡುವ ಕಾರ್ಯ ಉಳಿದಿತ್ತು. ದ್ವಿವೇದಿಯರು ಹಿಂದೀ ಸಾಹಿತ್ಯಕ್ಕೆ ಪೂರ್ವಪೀಠಿಕೆಯಾಗಿ ಸಂಸ್ಕೃತ, ಪ್ರಾಕೃತ ಹಾಗೂ ಅಪಭ್ರಂಶ ಸಾಹಿತ್ಯದ ಪರಂಪರೆ ಮತ್ತು ಅವುಗಳ ಪ್ರಭಾವವನ್ನು ಬಿಚ್ಚಿ ತೋರಿಸಿದರು. ಈ ದೃಷ್ಟಿಯಿಂದ ಅವರ 'ಹಿಂದೀ ಸಾಹಿತ್ಯ ಕೀ ಭೂಮಿಕಾ' ಅತ್ಯಂತ ಮಹತ್ವದ ಕೃತಿ. 'ಕಬೀರ' 'ಸೂರಸಾಹಿತ್ಯ' ಮೊದಲಾದ ಗ್ರಂಥಗಳಲ್ಲಿ ದ್ವಿವೇದಿಯವರು ಸಂತ ಕಬೀರನಿಗೆ ಹಿಂದಣ ವಿಮರ್ಶಕರಿಂದ ಆಗಿದ್ದ ಅನ್ಯಾಯವನ್ನು ತೊಡೆದು ಹಾಕಿ ಅವನ ವಿರಾಟ್ ವ್ಯಕ್ತಿತ್ವವನ್ನು ಸ್ಪಷ್ಟಪಡಿಸಿದ್ದಾರೆ. ಸೂರದಾಸರ ಸಾಹಿತ್ಯವನ್ನು ವಿದ್ಯಾಪತಿ ಮತ್ತು ಚಂಡೀದಾಸರ ಹಿನ್ನೆಲೆಯಲ್ಲಿ ಅಳೆದಿದ್ದಾರೆ. ಅವರು

ಹಿಂದೀ ಸಾಹಿತ್ಯವನ್ನು ಮಾನವತಾವಾದೀ ದೃಷ್ಟಿ ಕೋಣದಿಂದ ಅಳೆದು ನೋಡಿದ್ದಾರೆ.

## ಸಮನ್ವಯ ದೃಷ್ಟಿ

ದ್ವಿವೇದಿಯವರ ವ್ಯಕ್ತಿತ್ವ ಮತ್ತು ಜೀವನ ದರ್ಶನ ಭಾರತೀಯ ಸಾಧನೆಯ ದೀರ್ಘಪರಂಪರೆಯ ಚರಮವಿಕಸಿತ ಪುಷ್ಪ. ಅದರಲ್ಲಿ ಒಂದೆಡೆ ಕಾಳಿದಾಸನ ಸಹೃದಯತೆ, ಬಾಣನ ಪಾಂಡಿತ್ಯ, ಕಬೀರನ ನಿಶ್ಛಲತೆ ಇದ್ದರೆ; ಮತ್ತೊಂದೆಡೆ ಕವೀಂದ್ರ ರವೀಂದ್ರರ ವ್ಯಾಪಕ ಸೌಂದರ್ಯ ಚೇತನ, ಮಾಳವೀಯರ ಉದಾರ ದೃಷ್ಟಿ, ಮಹಾತ್ಮಾ ಗಾಂಧಿಯವರ ಶೀಲ ಇವು ತಮ್ಮ ರವ್ಯೋಜ್ವಲ ರೂಪದಲ್ಲಿವೆ. ಅವರು ಪ್ರಾಚೀನ ಮತ್ತು ನವೀನ, ದರ್ಶನ ಮತ್ತು ವಿಜ್ಞಾನ ಸಾಹಿತ್ಯ ಮತ್ತು ಜೀವನದ ಸುಂದರ ಸಮನ್ವಯದ ಜೀವಂತ ನಿದರ್ಶನ.

ರಾಮಚಂದ್ರ ಶುಕ್ಲರಲ್ಲಿ ದ್ವಿವೇದಿಯರ ಸ್ವರ್ಣ ದೃಷ್ಟಿ ಇರಲಿಲ್ಲ. ಸರ್ವೋದಯ, ಸಮನ್ವಯ ಮತ್ತು ಪೂರ್ಣದೃಷ್ಟಿ ಇವುಗಳ ತ್ರಿವೇಣಿಯನ್ನು ನಾವು ದ್ವಿವೇದಿಯವರಲ್ಲಿ ಕಾಣಬಹುದು. ಶುಕ್ಲರು ಈ ದೃಷ್ಟಿಯಿಂದ ದ್ವೈತಿಗಳು, ಅವರಲ್ಲಿ ತಾರತಮ್ಯಪ್ರಜ್ಞೆ ಬಹಳ. ಆದರೆ ದ್ವಿವೇದಿಗಳದು ಅದ್ವೈತ ದೃಷ್ಟಿ. ಆದ್ದರಿಂದ ದ್ವಿವೇದಿಯವರ ವ್ಯಾಪಕತೆ, ವಿಸ್ತಾರ ಶುಕ್ಲರಲ್ಲಿಲ್ಲ.

ಸಾಹಿತಿಗಳ ಹೊಣೆಗಾರಿಕೆ ಏನು ಎಂಬುದನ್ನು ಕುರಿತು ಅವರು ಹೀಗೆ ಹೇಳುತ್ತಾರೆ. "ಸಾಹಿತ್ಯದ ಈ ಅಂಗ (ಲಲಿತ ಸಾಹಿತ್ಯ) ಬರಿಯ ವಾಗ್ವಿಲಾಸದ ಸಾಧನವಾಗಬಾರದು, ಅದು ಮನುಷ್ಯತ್ವದ ಉನ್ನಯನವಾಗಬೇಕು." ಅವರ ಪ್ರಕಾರ "ಇಡೀ ಮಾನವ ಸಮಾಜವನ್ನು ಸುಂದರಗೊಳಿಸುವ ಸಾಧನೆಯ ಹೆಸರೇ ಸಾಹಿತ್ಯ." ಈ ರೀತಿ ದ್ವಿವೇದಿಯವರು ಉಪದೇಶಕರಲ್ಲ, ಸೌಂದರ್ಯದ್ರಷ್ಟಾರರು.

ದ್ವಿವೇದಿಯವರ ನಾಲ್ಕು ರೂಪಗಳು ನಮ್ಮ ಮುಂದೆ ಬಂದು ನಿಲ್ಲುತ್ತವೆ—ಪ್ರಾಚ್ಯ ವಿದ್ಯಾವಿಶಾರದ, ಸಾಹಿತ್ಯ ಸಮಾಲೋಚಕ, ಲಲಿತ ನಿಬಂಧಕಾರ, ಮತ್ತು ಕಾದಂಬರಿಕಾರ. ಅವರು ಪ್ರಾಚ್ಯವಿದ್ಯೆಯ ಜ್ಞಾನ ಹಿಂದೀ ಸಾಹಿತ್ಯಕ್ಕೆ ಅನಿವಾರ್ಯವೆನ್ನುತ್ತಾರೆ. ಸಾಹಿತ್ಯದ ಇತಿಹಾಸವೆಂದರೇನು ಎನ್ನುವುದನ್ನು ಅವರು ಹೀಗೆ ಸ್ಪಷ್ಟಪಡಿಸಿದ್ದಾರೆ—"ಸಾಹಿತ್ಯ ಚರಿತ್ರೆಯೆಂದರೆ ಗ್ರಂಥಗಳ ಗ್ರಂಥಕಾರರ ಉದ್ಭವ ಹಾಗೂ ವಿಲಯದ ಕಥೆಯಲ್ಲ, ಅದು ಕಾಲಸ್ರೋತದಲ್ಲಿ ಹರಿಯುವ ಜೀವಂತ ಸಮಾಜದ ವಿಕಾಸ ಕಥೆ. ಗ್ರಂಥಕಾರರು ಮತ್ತು ಗ್ರಂಥಗಳು ಆ ಪ್ರಾಣಧಾರೆಯತ್ತ ಬೆರಳು ಮಾಡಿ ತೋರಿಸಬಲ್ಲವು ಅಷ್ಟೇ. ಅವೇ ಮುಖ್ಯವಲ್ಲ, ಮುಖ್ಯವಾದುದು ನಾನಾ ಪರಿಸ್ಥಿತಿಗಳಿಗೆ ಸಿಕ್ಕಿ ತೊಳಲಿ ಇಂದು ನಮ್ಮೊಳಗೆ ತನ್ನನ್ನು ತಾನೆ ಪ್ರಕಟಗೊಳಿಸುವ ಪ್ರಾಣಧಾರೆ ಸಾಹಿತ್ಯ ಚರಿತ್ರೆಯಲ್ಲಿ ನಮ್ಮನ್ನು ನಾವೇ ಓದುವ ಸೂತ್ರವನ್ನು ಕಂಡುಕೊಳ್ಳುತ್ತೇವೆ!"

## ಗತಿ–ಸ್ಥಿತಿ

'ಹಿಂದೀ ಸಾಹಿತ್ಯಕೀ ಭೂಮಿಕಾ' 'ನಾಥ ಸಂಪ್ರದಾಯ' 'ಹಿಂದಿ ಸಾಹಿತ್ಯ ಕಾ ಆದಿಕಾಲ' 'ಮಧ್ಯಕಾಲೀನ ಧರ್ಮಸಾಧನಾ' ಮೊದಲಾದ ಕೃತಿಗಳಲ್ಲಿ ದ್ವಿವೇದಿಯವರು ಭಾರತೀಯ ಜೀವನದ ಈ ಪ್ರಾಣಧಾರೆಯನ್ನು ದರ್ಶಿಸಲು ಯತ್ನಿಸಿದ್ದಾರೆ. ಅವರ ದೃಷ್ಟಿಯಲ್ಲಿ ಆಧುನಿಕ ಸಾಹಿತ್ಯದ ಪ್ರಾಣ ಮಾನವತಾವಾದ. ಸಾಹಿತ್ಯ ಸಮಾಲೋಚನೆಯಲ್ಲಿ ಅವರು ರಸಕ್ಕೆ ಹೆಚ್ಚಿನ ಮಹತ್ವ ನೀಡಿದ್ದಾರೆ. ಅವರು ಕಾಳಿದಾಸನ ಭಕ್ತರು. ದ್ವಿವೇದಿಯವರ ಪ್ರಿಯ ಕವಿಗಳು ಕಬೀರ, ಸೂರದಾಸ, ತುಳಸಿದಾಸ, ಚಂಡಿದಾಸ, ಮತ್ತು ರವೀಂದ್ರನಾಥ ಠಾಕೂರರು. ಶಾಸ್ತ್ರದ ಬಗೆಗೆ ಅವರು ಹೀಗೆ ಹೇಳುತ್ತಾರೆ: "ಶಾಸ್ತ್ರಗಳು ಕವಿಯ ಮಿದುಳನ್ನು ಉರ್ವರಗೊಳಿಸುತ್ತವೆ. ಪ್ರಾಚೀನ ಸಾಹಿತ್ಯದ ಮೇರುದಂಡ ಪೌರಾಣಿಕ ಕಥೆಗಳು, ಇಂದಿನ ಸಾಹಿತ್ಯದ ಬೆನ್ನುಮೂಳೆ ವಿಜ್ಞಾನ ಮತ್ತು ಇತಿಹಾಸ."

ಆಚಾರ್ಯ ದ್ವಿವೇದಿಯವರು ಭಾರತೀಯ ಸಾಹಿತ್ಯದ ಮಂಥನ ಮಾಡಿದ್ದಾರೆ. ರವೀಂದ್ರ ಸಾಹಿತ್ಯವನ್ನು ಅರಗಿಸಿಕೊಂಡಿದ್ದಾರೆ; ಕಾಳಿದಾಸ ಸಾಹಿತ್ಯದ ರಸಪಾನ ಮಾಡಿದ್ದಾರೆ; ಆದಿಕಾಲ

ಮತ್ತು ಮಧ್ಯಕಾಲೀನ ಹಿಂದೀ ಸಾಹಿತ್ಯದ ಅನುಶೀಲನೆ ಮಾಡಿದ್ದಾರೆ; ಪಾಶ್ಚಾತ್ಯ ಸಾಹಿತ್ಯ ಮತ್ತು ಭಾಷಾ ವಿಜ್ಞಾನದ ಪರಿಶೀಲನೆ ಮಾಡಿದ್ದಾರೆ. ದ್ವಿವೇದಿಯವರು ಆದರ್ಶವಾದದ ನೆಲೆಗಟ್ಟಿನ ಮೇಲೆ ಪರಂಪರಾವಿರೋಧೀ ವಿಚಾರಧಾರೆಗಳು, ಪರಂಪರೆ ಹಾಗೂ ಪ್ರಯೋಗ ಸಂಸ್ಕೃತಿ ಹಾಗೂ ನಾಗರಿಕತೆ, ಸಮಾಜ ಹಾಗೂ ವ್ಯಕ್ತಿ, ಧರ್ಮ ಮತ್ತು ವಿಜ್ಞಾನ, ಗಾಂಧಿ ಮತ್ತು ಮಾರ್ಕ್ಸ್, ಪ್ರಾಚೀನ ಮತ್ತು ನವೀನಗಳ ಸಮನ್ವಯ ಮಾಡಿದ್ದಾರೆ. ತಮ್ಮ 'ಲಾಲಿತ್ಯ ತತ್ವ' ಎಂಬ ಪ್ರಬಂಧದಲ್ಲಿ ಅವರು ಇಚ್ಛಾಶಕ್ತಿ, ಕ್ರಿಯಾಶಕ್ತಿಯ ಶಬ್ದಾವಳಿಯ ಮಾಧ್ಯಮದಿಂದ ಪದ ಮತ್ತು ಪದಾರ್ಥ, ಜಡ ತತ್ವ ಮತ್ತು ಪ್ರಾಣ ತತ್ವ, ಪ್ರಕೃತಿ ಮತ್ತು ಪುರುಷ ತಾಂಡವ ಮತ್ತು ಲಾಸ್ಯ ಸೌಂದರ್ಯ ಮತ್ತು ಲಾಲಿತ್ಯಗಳ ಅಂತರವನ್ನು ಸ್ಪಷ್ಟಪಡಿಸುತ್ತಾ ತಮ್ಮ ಆದರ್ಶವಾದೀ ಜೀವನ ದೃಷ್ಟಿಯನ್ನು ಬಿಂಬಿಸಿದ್ದಾರೆ. ಸಾಹಿತ್ಯವನ್ನು ಕುರಿತ ಸೌಂದರ್ಯಕ್ಕೆ ಸಂಬಂಧಿಸಿದ ಮಾನ್ಯತೆಗಳ ಮೂಲ ಇವರ ಜೀವನ ದೃಷ್ಟಿ 'ಸಮಷ್ಟಿ ಮಂಗಳ' ದಿಂದ ಅನುಪ್ರಾಣಿತವಾಗಿದೆ. ಇಚ್ಛೆ ಮತ್ತು ಕ್ರಿಯೆಯ ಸ್ವರೂಪವನ್ನು ಸ್ಪಷ್ಟಪಡಿಸುತ್ತ ಅವರು ಹೀಗೆ ಹೇಳಿದ್ದಾರೆ– "ಇಚ್ಛೆ ಅನಂತ, ಕ್ರಿಯೆ ಸಾಂತ, ಇಚ್ಛೆ ನಾದ– ಕಂಟಿನ್ಯುಯಮ್, ಕ್ರಿಯೆ ಬಿಂದು–ಕ್ವಾಂಟಮ್, ಇಚ್ಛೆ ಗತಿ, ಕ್ರಿಯೆ ಸ್ಥಿತಿ, ಗತಿಸ್ಥಿತಿಗಳ ಈ ದ್ವಂದ್ವ ನಿರಂತರವೂ ನಡೆಯುತ್ತಿರುತ್ತದೆ. ಇದರಿಂದಲೇ ರೂಪವಾಗುತ್ತದೆ, ಛಂದಸ್ಸು ಮೈದಳೆಯುತ್ತದೆ. ಸಂಗೀತ ಹೊಮ್ಮುತ್ತದೆ, ನೃತ್ಯ ಚಿಮ್ಮುತ್ತದೆ. ಇಚ್ಛೆ ಕಾಲ, ಕ್ರಿಯೆ ದೇಶ, ಈ ದೇಶ ಕಾಲದ ದ್ವಂದ್ವದಿಂದ ಜೀವನ ಪ್ರವಾಹ ರೂಪದಲ್ಲಿ ರೂಪಿತವಾಗುತ್ತದೆ.' ಈ ರೀತಿ ದ್ವಿವೇದಿಯವರು ದ್ವಂದ್ವಾತ್ಮಕ ಭೌತಿಕವಾದಕ್ಕೆ ರೊಮ್ಯಾಂಟಿಕ್ ವ್ಯಾಖ್ಯಾನ ನೀಡುತ್ತಾರೆ.

ಇವರ ಎಲ್ಲ ಪ್ರಬಂಧ ಹಾಗೂ ಕಾದಂಬರಿಗಳಲ್ಲಿ ಸಮಾಜ ಮಂಗಳ ಭಾವನೆಯಿದೆ. ಸಮಾಜ ಮಂಗಳದ ಸ್ವರೂಪ ರೊಮ್ಯಾಂಟಿಕ್ ಕಾವ್ಯ ಬೋಧದಿಂದ ರೂಪಗೊಂಡಿದೆ. ಇದು ಮಾರ್ಕ್ಸ್‌ವಾದದ ಸಮಾಜಕಲ್ಯಾಣದಂತೆ ವಿಶಿಷ್ಟವಲ್ಲ, ಸಾಮಾನ್ಯ ಬೌದ್ಧಿಕವಲ್ಲ, ಭಾವಾತ್ಮಕ ಯಥಾರ್ಥವಾದಿಯಲ್ಲ ಆದರ್ಶವಾದಿ. ಇದೇ ಜೀವನ ದೃಷ್ಟಿಯನ್ನು ಇವರ ಮನುಷ್ಯತಾ ನಿರೂಪಣೆಯ ಮೂಲದಲ್ಲಿ ನೋಡಬಹುದು, ಸೌಂದರ್ಯಬೋಧೆ ಮತ್ತು ಲಾಲಿತ್ಯ ಬೋಧೆಯ ಅಂತರದಲ್ಲಿ ಕಾಣಬಹುದು.

## ದೂರದೃಷ್ಟಿ

ಆಚಾರ್ಯ ಶುಕ್ಲರ ಜೀವನದೃಷ್ಟಿಯ ಮೂಲದಲ್ಲೂ ಸಮಾಜಮಂಗಳದ ಭಾವನೆಯಿದೆ. ಸಮಾಜ ಕಲ್ಯಾಣದ ಕಲ್ಪನೆಯಿದೆ. ಅದು ಕಾವ್ಯ ಸಿದ್ಧಾಂತಗಳ ಮೇಲೆ ತನ್ನ ಪ್ರಭಾವ ಬೀರುತ್ತದೆ. ಆದರೆ ಆಚಾರ್ಯ ದ್ವಿವೇದಿಯವರ ಸಮಾಜ ಮೂಲಗಳ ಸಂಬಂಧೀ ಜೀವನ ದೃಷ್ಟಿಯ ಮೇಲೆ ರೊಮ್ಯಾಂಟಿಕ್ ಜೀವನಬೋಧದ ಗಂಭೀರ ಪ್ರಭಾವವಿದೆ. ಆಚಾರ್ಯ ಶುಕ್ಲರ ಜಾತಿ ಮೂಲಕ ಸಂಸ್ಕಾರ ದೃಢವಾದುದು. ಆದರೆ ದ್ವಿವೇದಿಯವರ ಬ್ರಾಹ್ಮಣ ಸಂಸ್ಕಾರ ಶಿಥಿಲವಾದುದು. ಇದರ ಕಾರಣ ರವೀಂದ್ರ ಸಾಹಿತ್ಯದ ಪ್ರಭಾವ ಮತ್ತು ಶಾಂತಿನಿಕೇತನದ ವಾಸ. ವಿಶ್ವಭಾರತಿಯ ವಾತಾವರಣದಲ್ಲಿ ವಿಶ್ವ ಸಂಸ್ಕೃತಿಯ ನಿರೂಪಣೆ ನಡೆಯುತ್ತಿದೆ. ಆಚಾರ್ಯ ದ್ವಿವೇದಿಯವರ ಜ್ಯೋತಿಷ್ಯಜ್ಞಾನ ಅವರಿಗೆ ಭವಿಷ್ಯದತ್ತ ಇಣುಕಿ ನೋಡಲು ದಿವ್ಯ ಶಕ್ತಿ ಹಾಗೂ ಪ್ರೇರಣೆಯನ್ನು ನೀಡುತ್ತದೆ. ಅವರ ಪಾಂಡಿತ್ಯ ಅವರಿಗೆ ಗತಕಾಲವನ್ನು ಅಗೆದು ನೋಡುವ ಶಕ್ತಿ ನೀಡಿದೆ. ಅವರು ಭೂತ ಭವಿಷ್ಯದಲ್ಲಿ ಎಷ್ಟೊಂದು ಅಲೆದಾಡುತ್ತಿದ್ದರೆಂದರೆ ಕೆಲವೊಮ್ಮೆ ವರ್ತಮಾನವನ್ನು ಮರೆಯುವುದೂ ಉಂಟು. ಸಂಸ್ಕೃತಿ ಮತ್ತು ನಾಗರಿಕತೆಯನ್ನು ಕುರಿತು ದ್ವಿವೇದಿಯವರು ಗಹನಚಿಂತನೆ ನಡೆಸಿದ್ದಾರೆ, ನಿರಂತರ ಮನನ ಮಾಡಿದ್ದಾರೆ. ಭಾರತೀಯ ಸಂಸ್ಕೃತಿಯಲ್ಲಿ ಬಾಹ್ಯ ಶುದ್ಧಿ ಮತ್ತು ಆಂತರಿಕ ಶುಚಿತ್ವದ ಮೇಲೆ ಕೊಟ್ಟಿರುವ ಒತ್ತನ್ನು ನಿರೂಪಿಸಲು ಜೀವವಿಜ್ಞಾನ, ಭೌತಶಾಸ್ತ್ರ, ಮನೋವಿಜ್ಞಾನ ಮೊದಲಾದವನ್ನು ಪೂರ್ತಿಯಾಗಿ ಬಳಸಿಕೊಂಡಿದ್ದಾರೆ. ದ್ವಿವೇದಿಯವರಿಗೆ ಭಾರತೀಯ ಸಂಸ್ಕೃತಿಯ ಈ ಮುತ್ತೈದೆಯ ಬಗೆಗೆ ಎಲ್ಲಿಲ್ಲದ ಮೋಹ, ಆಸಕ್ತಿ, ಅವಳನು

ಸಿಂಗರಿಸಲು ದೇಶವಿದೇಶಗಳಿಂದ ಆಭರಣಗಳನ್ನು ಸಂಗ್ರಹಿಸಲು ಪೆಣಗುತ್ತಾರೆ. ಅವರು ಸಂಸ್ಕೃತಿ ಮತ್ತು ಅದರ ಮಗ ಸಾಹಿತ್ಯ ಇವೆರಡೂ ಬೇರೆ ಬೇರೆ ಎಂದು ಭಾವಿಸುವುದಿಲ್ಲ. ಜೀವನದಲ್ಲಿ ಮಾನವ ಜೀವನ, ಮಾನವ ಜೀವನದಲ್ಲಿ ಮಾನವ ಸಂಸ್ಕೃತಿಗೆ ಮತ್ತು ಮಾನವ ಸಂಸ್ಕೃತಿಯಲ್ಲಿ ಭಾರತೀಯ ಸಂಸ್ಕೃತಿಗೆ ವಿಶಿಷ್ಟ ಸ್ಥಾನ. ಇವೆಲ್ಲದರ ಮೂಲದಲ್ಲಿ ಜಡತತ್ವದ ಹಾಗೂ ಪ್ರಾಣತತ್ತ್ವದ ಸಂಘರ್ಷವಿದೆ. ಈ ಸಂಘರ್ಷ ಸೋದ್ದೇಶವಾದುದು. ಅದರಲ್ಲಿ ಪ್ರಾಣ ತತ್ತ್ವದ ಜಯಗಾಥೆ ಮತ್ತು ಜಯ ಯಾತ್ರೆ ಲಕ್ಷಿತವಾಗುತ್ತದೆ. ಆದ್ದರಿಂದ ಅವರು ಪ್ರಾಣತತ್ತ್ವ ಮೇಲೇಳಬೇಕೆಂದು ಮತ್ತೆ ಮತ್ತೆ ಒತ್ತಿ ಹೇಳಿದರು.

ತಮ್ಮ ಪಾಂಡಿತ್ಯ ಭಾರದಿಂದ ಬಳಲಿದಾಗ ಅವರು ವಿಶ್ರಾಂತಿಗಾಗಿ ಹಾಸ್ಯ ವಿನೋದವನ್ನು ಆಶ್ರಯಿಸುತ್ತಾರೆ. ಈ ವ್ಯಕ್ತಿತ್ವದ ಸ್ವರೂಪ ಕೂಡ ಸಾಮಾಜಿಕ. ದ್ವಿವೇದಿಯವರ ಮತ್ತೊಂದು ವೈಶಿಷ್ಟ್ಯವೆಂದರೆ ಅವರ ವ್ಯಕ್ತಿತ್ವದ ಸಹಜತೆ. ಅವರು ತಮ್ಮ ಪ್ರತಿಯೊಂದು ರೂಪದಲ್ಲೂ ಸಹಜವಾಗಿದ್ದಾರೆ. ಲೇಖಕರಾಗಿ, ವಾಗ್ಮಿಗಳಾಗಿ ಸಾಮಾನ್ಯ ವ್ಯವಹಾರಿಗಳಾಗಿ ಅವರು ನುಡಿದಂತೆ ನಡೆಯುವ, ನಡೆಯುವಂತೆ ನುಡಿಯುವ ಮಹಾನುಭಾವರು. ಕೃತ್ರಿಮ ಆಡಂಬರವೆಂದರೆ ಅವರಿಗೆ ಆಗದು. ಒಮ್ಮೆ ಅವರೇ ಹೇಳಿದ್ದಾರೆ–"ಒಮ್ಮೆ ಮನಸ್ಸು ಕುದಿದುಬಿಡುತ್ತದೆ. ಕೂಟನೀತಿಜ್ಞರ ಬಾಯಿಂದ ಸತ್ವದ ಹೊಗಳಿಕೆ ಕೇಳಿ ಮನಸ್ಸು ಗ್ಲಾನಿಗೊಳ್ಳುತ್ತದೆ. ಸೇನಾಪತಿಗಳಿಂದ ಅಹಿಂಸೆಯ ಸ್ತುತಿ ಕೇಳಿ ತುಂಬಾ ಸಿಟ್ಟು ಬರುತ್ತದೆ."

## ಬೆಂಬಿಡದ ಕೀರ್ತಿ

ಸಾಹಿತ್ಯಶಾಸ್ತ್ರ, ಧರ್ಮಸಾಧನೆ, ಸಾಹಿತ್ಯ ಚರಿತ್ರೆ, ಸಂಶೋಧನೆ, ನೃತತ್ವ ಇವುಗಳ ಮೇಲೆ ಅವರ ಗ್ರಂಥಗಳಾದ ದಶರೂಪಕ ನಾಥ ಸಂಪ್ರದಾಯ, ಸಹಜಯೋಗ ಮಧ್ಯಕಾಲಿನ ಧರ್ಮಸಾಧನಾ, ಕಾಲಿದಾಸಕೀ ಲಾಲಿತ್ಯ ಯೋಜನಾ, ಕಬೀರ್, ಹಿಂದಿ ಸಾಹಿತ್ಯ, ಹಿಂದೀ ಸಾಹಿತ್ಯ ಕಾ ಆದಿಕಾಲ, ಪ್ರಾಚೀನ ಭಾರತ ಕೇ ಕಲಾತ್ಮಕ ವಿನೋದ ಮೊದಲಾದವು ಆಯಾ ಕ್ಷೇತ್ರಗಳಲ್ಲಿ ಮೈಲುಗಲ್ಲುಗಳಾಗಿವೆ. ಪಾಂಡಿತ್ಯಕ್ಕೆ ಪರಿಮಳ ಕಟ್ಟುವಂತಹ ರಸಿಕತೆ ಅವರಲ್ಲಿದೆ.

ಕೀರ್ತಿಶನಿಯಿಂದ ದೂರ ಸರಿಯುತ್ತಿದ್ದ ಅವರನ್ನು ಕೀರ್ತಿ ಬೆನ್ನಟ್ಟಿ ಹೋಯಿತು. ಯಾವ ವಿಶ್ವವಿದ್ಯಾನಿಲಯದ ಪದವಿಯೂ ಇಲ್ಲದ ಅವರಿಗೆ ಲಕ್ನೋ ವಿಶ್ವವಿದ್ಯಾಲಯ ಗೌರವ ಡಾಕ್ಟರೇಟ್ ನೀಡಿ ಗೌರವಿಸಿತು. ಬನಾರಸ್ ವಿಶ್ವವಿದ್ಯಾನಿಲಯ ಹಿಂದಿಯ ಪ್ರಾಧ್ಯಾಪಕರನ್ನಾಗಿ, ಪ್ರೊ—ವೈಸ್‌ಛಾನ್ಸಲರನ್ನಾಗಿ ನೇಮಿಸಿತು. ಕರಾಚಿಯಲ್ಲಿ ನಡೆದ ಹಿಂದೀ ಸಾಹಿತ್ಯ ಸಮ್ಮೇಳನಕ್ಕೆ ಅವರು ಅಧ್ಯಕ್ಷರಾಗಿದ್ದರು. ದರ್ಭಾಂಗದಲ್ಲಿ ನಡೆದ ಪ್ರಾಚ್ಯವಿದ್ಯಾ ಸಮ್ಮೇಳನದ ಹಿಂದೀ ಸಮಿತಿಯ ಅಧ್ಯಕ್ಷರಾಗಿದ್ದರು. ಪಾಟ್ನಾದಲ್ಲಿ ನಡೆದ ವಂಗೀಯ ಸಾಹಿತ್ಯ ಸಮ್ಮೇಳನದ ಭಾರತೀಯ ವಿಭಾಗದ ಅಧ್ಯಕ್ಷರಾಗಿದ್ದರು. ರಾಷ್ಟ್ರೀಯ ಭಾಷಾ ಕಮೀಷನ್, ಯು. ಜಿ. ಸಿ. ಮೊದಲಾದವುಗಳ ಸದಸ್ಯರಾಗಿದ್ದರು. ರಶಿಯಕ್ಕೆ ಭಾರತ ಸರಕಾರ ಕಳಿಸಿಕೊಟ್ಟಿದ್ದ ತ್ರಿಸದಸ್ಯ ಸಾಹಿತಿಗಳ ನಿಯೋಗದ ಸದಸ್ಯರಾಗಿದ್ದರು. ಉತ್ತರ ಪ್ರದೇಶದ ಹಿಂದೀ ಗ್ರಂಥ ಸಮಿತಿಗೆ ಕೊನೆಯವರೆಗೂ ಅಧ್ಯಕ್ಷರಾಗಿ ನೂರಾರು ಗ್ರಂಥಗಳ ರಚನೆ, ಪ್ರಕಾಶನಕ್ಕೆ ಕಾರಣರಾದರು. ಭಾರತ ಸರಕಾರ ಅವರಿಗೆ 'ಪದ್ಮಭೂಷಣ' ಪದವಿ ನೀಡಿ ಸನ್ಮಾನಿಸಿತ್ತು.

ದಾರ್ಶನಿಕ ದೃಷ್ಟಿ, ಭಾವುಕತೆ, ಒಳ್ಳೆಯದೆಲ್ಲವನ್ನು ಸ್ವಾಗತಿಸುವ ಮುಕ್ತ ಮನೋಧರ್ಮ ಬುದ್ಧಿ ಭಾವಗಳ ವಿದ್ಯುದಾಲಿಂಗನ ಇವು ಅವರ ವೈಶಿಷ್ಟ್ಯಗಳು. ಮನುಷ್ಯತ್ವವೇ ಸತ್ಯವೆಂಬ ಅವರ ದೃಢವಿಶ್ವಾಸವೇ ಅವರನ್ನು ಹಿಂದಿ ಸಾಹಿತ್ಯ ಕ್ಷಿತಿಜದಲ್ಲಿ ಇನ್ನಾರಿಗಿಂತಲೂ ಹೆಚ್ಚು ಪ್ರಕಾಶಮಾನವಾಗಿ ಬೆಳಗುವಂತೆ ಮಾಡಿತು. ✿

# ಇದುವೇ ಜೀವ ಇದು ಜೀವನ

ಗುಂಡ ನನ್ನ ಮಿತ್ರ. ಅಂದು ಜೇಬಿನಲ್ಲಿ ಬಿಡಿಗಾಸೂ ಇಲ್ಲದೆ ಪರದಾಡುತ್ತಿದ್ದಾಗ ಅವನ ಗೆಳೆಯ ಬಂದು ಸಿನೇಮಾಕ್ಕೆ ಕರೆದ. ಒತ್ತಾಯಕ್ಕೆ ಕಟ್ಟುಬಿದ್ದು ಗುಂಡ ಹೋದ.

ಅವರು ಕುಳಿತ ಸಾಲಿನ ಮುಂಭಾಗದಲ್ಲಿ ಉತ್ತಮ ವಸ್ತ್ರ ಧರಿಸಿದ, ಬೋಳು ತಲೆಯವನೊಬ್ಬ ಕುಳಿತಿದ್ದ. ಬೆಳಕಿನಲ್ಲಿ ಆ ತಲೆ ಇನ್ನೂ ಎದ್ದು ಕಾಣುತ್ತಿತ್ತು. ಸುಮ್ಮನಿರಲಾಗದ ಆತನ ಗೆಳೆಯ ಗುಂಡನಿಗೆ ಆತನನ್ನು ತೋರಿಸಿ, "ನೋಡು ಗುಂಡ ಆ ಬೋಳು ತಲೆಯವನ ಬುರುಡೆಗೆ ಒಂದು ಏಟು ಹಾಕಬೇಕು. ಅಂದರೆ ನಿನಗೆ ಐದು ರೂಪಾಯಿ," ಎಂದ.

ಗುಂಡನ ಬುದ್ಧಿ ಚುರುಕಾಯಿತು. "ಮೊದಲು ಐದು ರೂಪಾಯಿ ಕೈ ಮೇಲಿಡು." ಎಂದು ಹಣ ಪಡೆದು ಮೇಲೆದ್ದ. ಆ ಬೋಳು ತಲೆಯವನ ಸಮೀಪಕ್ಕೆ ಹೋಗಿ, ಬುರುಡೆಗೆ ಬಾರಿಸಿ, "ಹಲ್ಲೋ ಸುರೇಶ್ ಯಾವಾಗ ಬಂದೆಯೋ, ಎಲ್ಲಾ ಆರೋಗ್ಯವಾ?" ಎಂದು ಆತನ ಪಕ್ಕದಲ್ಲಿ ಕುಳಿತ.

ತಲೆ ಚುರುಗುಟ್ಟಿದರೂ ಗುಂಡನ ವೇಷಭೂಷಣವನ್ನೂ ನಿರ್ಭಯ ನಡವಳಿಕೆಯನ್ನೂ ಗಮನಿಸಿ ಆತ, "ಕ್ಷಮಿಸಿ ನಾನು ಸುರೇಶನಲ್ಲ. ನೀವು ತಪ್ಪು ಭಾವಿಸಿದಿರಿ," ಎಂದ ತಲೆ ಸವರಿಕೊಳ್ಳುತ್ತಾ.

ಗುಂಡ ಆತನ ಮುಖವನ್ನು ನಂಬದವನಂತೆ ನೋಡಿ, ಎದ್ದು ಬಂದು ತನ್ನ ಗೆಳೆಯನನ್ನು ಕೂಡಿಕೊಂಡು ಭುಜ ಕುಣಿಸಿದ.

ಎಲಾ, ಅನ್ಯಾಯವಾಗಿ ಐದು ರೂಪಾಯಿ ಕಳೆದುಕೊಂಡೆನಲ್ಲವೆಂದು ಹಳಹಳಿಸಿದ ಗೆಳೆಯ ಏನಾದರೂ ಮಾಡಿ ಅದನ್ನು ಹಿಂತಿರುಗಿ ಪಡೆಯಬೇಕೆಂಬ ಛಲದಿಂದ, "ನೋಡು ಈ ಸಲ ಮತ್ತೆ ಆತನ ಬುರುಡೆಗೆ ಹೊಡೆದರೆ ಹತ್ತು ರೂಪಾಯಿ ಕೊಡುತ್ತೇನೆ," ಎಂದ.

ಗುಂಡನ ತಲೆ ಭರ್ರನೆ ಓಡಿತು. "ಮೊದಲು ಹಣ ತೆಗೆ," ಎಂದು ಹಣ ಪಡೆದವನೇ, ಆ ಬೋಳು ತಲೆಯವನ ಬಳಿ ಹೋಗಿ, ಅದೇ ರೀತಿ ಮತ್ತೆ ಬಾರಿಸಿ, "ಲೋ ನನ್ನೇ ಫೂಲ್ ಮಾಡ್ತೀಯಲ್ಲೋ ನೀನು ಸುರೇಶ ಅಲ್ಲ ಅಂತ! ನನ್ನೇನು ಬುದ್ದು ಅಂತ ತಿಳ್ಕೊಂಡ್ಯಾ. ತಿಂಡಿಗಿಂಡಿ ಕೇಳ್ತೀನಿ ಅಂತ ಹೆದರ್ದ್ಯಾ?" ಎಂದ ಗುಂಡ.

ಈ ಬಾರಿ ಆ ವ್ಯಕ್ತಿಗೂ ಸಿಟ್ಟು ಬಂದು, "ಏನ್ರಿ ನಿಮಗೆ ತಲೇ ಸರಿ ಇಲ್ವಾ? ನಾನು ಸುರೇಶ ಅಲ್ಲ, ನಿಮ್ಮ ಪರಿಚಯವೂ ನನಗಿಲ್ಲ," ಎಂದು ರೇಗಿದ.

ಗುಂಡ, "ಐ ಯಾಮ್ ಸೋ ಸಾರಿ ಫ್ರೆಂಡ್, ನನ್ನ ಗೆಳೆಯ ಸುರೇಶ ಥೇಟ್ ನಿಮ್ಮ ಹಾಗೇ ಇದ್ದಾನೆ. ನಾನೂ ಅವನೂ ಭಾರೀ ದೋಸ್ತರು. ಆದುದರಿಂದ ಹೀಗೆ ಹೇಳಿದೆ. ಪ್ಲೀಸ್ ಎಕ್ಸ್‌ಕ್ಯೂಸ್ ಮಿ," ಎಂದು ತನ್ನ ಗೆಳೆಯನ ಬಳಿ ಬಂದು ಪುನಃ ಭುಜ ಕುಣಿಸಿದ.

ಅಷ್ಟರಲ್ಲಿ ಚಿತ್ರ ಆರಂಭವಾಯಿತು. ದೀಪವೂ ಆರಿತು. ಆ ಕತ್ತಲಲ್ಲೂ ಗೆಳೆಯನ ಮುಖ ಕಪ್ಪಿಟ್ಟಿತ್ತು.

ಮುಂದೆ ವಿರಾಮಕಾಲದ ದೀಪಗಳು ಹೊತ್ತಿದಾಗ, ಗುಂಡನ ಗೆಳೆಯ ಬೋಳು ತಲೆಯವನನ್ನು ಹುಡುಕಿದ. ಪಾಪ ಆತ ಗುಂಡನ ಪೆಟ್ಟಿಗೆ ಹೆದರಿ ಮತ್ತೊಂದು ಕಡೆ ದೂರದ ಸೀಟಿನಲ್ಲಿ ಕುಳಿತಿದ್ದ. ಗುಂಡನ ಗೆಳೆಯ ಆತನನ್ನು ತೋರಿಸಿ, "ಈ ಸಲ

ಆದೇ ರೀತಿ ಆತನ ತಲೆಗೆ ಏಟು ಹಾಕಿದರೆ ಹದಿನೈದು ರೂಪಾಯಿ," ಎಂದ.

ತುಸು ಯೋಚಿಸಿದ ಗುಂಡ ಹದಿನೈದು ರೂಪಾಯಿ ಕೈಗೆ ಬಂದ ನಂತರವೇ ಸಿಳ್ಳು ಹಾಕುತ್ತಾ ಹೊರಗೆ ಹೋಗಿ, ಬೀಡಾ ಮೆಲ್ಲುತ್ತಾ ಒಳ ಬಂದು, ಸೀದಾ ಬೋಳು ತಲೆಯವನ ಬಳಿ ಹೋದ, ಹೋದವನೇ ಸರಿಯಾಗಿ ಬುರುಡೆಗೆ ಒಂದು ಏಟು ಹಾಕಿ, "ಲೋ ಸುರೇಶ ಇಲ್ಲಿ ಕುಳಿತಿದ್ದೀಯಾ? ನಾನು ನಿನ್ನ ಹಾಗೆ ಆ ಸೀಟನಲ್ಲಿ ಕುಳಿತವನನ್ನು ಕಂಡು, ನೀನೇ ಎಂದು ಭಾವಿಸಿ ಪಾಪ ಎರಡು ಸಲ, ಈಗ ನಿನಗೆ ಹಾಕಿದ ಹಾಗೇ ಬುರುಡೆಗೆ ಕುಟ್ಟಿದೆ," ಎಂದ ನಗುತ್ತಾ.

-ಮ. ಪ್ರೇಮಕುಮಾರ

ಹೊಟ್ಟೆ ಹರಿಯುವಂತೆ ಪ್ರವಾಸಿಕರನ್ನು ಹೊತ್ತು ಕಸಿವಿಸಿಪಡುತ್ತ ಧಾರವಾಡದ ಮಹಾಳಮಡ್ಡಿಯ ಏರಿ ಹತ್ತಲಾರದೇ ಸಿಟಿ ಬಸ್ ಹೊರಟಿತ್ತು. ಬಸ್ಸಿನ ಥಕಲೋ-ಥಕಲೋ ಸ್ಥಿತಿ ನೋಡಿ ಹಲವು ಪ್ರಯಾಣಿಕರು ಬಿಸಿಲಿನ ಬೇಗುದಿಯ ಜೊತೆಗೆ ಈ ತಾಪವನ್ನು ಅನುಭವಿಸುತ್ತಿದ್ದರು. ಆದರೆ ಇದ್ಯಾವುದರ ಅರಿವಿಲ್ಲದೇ ಬುಡ್ಡಾ ಡ್ರೈವರ್ ಹೊರಟಿದ್ದ.

ಪ್ರಯಾಣಿಕರು ಇನ್ನೂ ಕುದಿದರು. ಮಾತಿನ ಅರ್ಭಟ ಸಿಡುಕಿನ ವರ್ತನೆಗಳೂ ಸೇರಿದುವು. ಏನೇ ಆದರೂ ಬಸ್‌ನಲ್ಲಿ ವ್ಯತ್ಯಾಸವಾಗಲಿಲ್ಲ. ನೀರಸ ವಾತಾವರಣದ ಮಧ್ಯೆ ಒಂದು ವಾಣಿ ತೂರಿಬಂತು: "ಕಂಡಕ್ಟರ್ ಸಾಹೇಬ್ರ, ಡ್ರೈವರ್ ಸಾಹೇಬ್ರಿಗೆ ಹೇಳ್ರಿ, ಹಿಂದ ಎಕ್ಕಾ ಗಾಡಿ ಬರ್ತದ ಸೈಡ್ ಕೊಡಂತ."

ಇದನ್ನು ಕೇಳಿಸಿಕೊಂಡ ಜನ ಗಹಗಹಿಸಿ ನಕ್ಕರೆ, ಡ್ರೈವರ್ ಮಾತ್ರ ಇನ್ನೂ ಬಿಗಿದು ಎಕ್ಸಲೇಟರ್ ಜೋರಾಗಿ ಒತ್ತಿದ.

-ಮನೋಜ ಪಾಟೀಲ

ಎಪ್ರಿಲ್ ತಿಂಗಳಿನ ರಣರಣ ಬಿಸಿಲು. ಟಾರು ರಸ್ತೆ ಬೆಂಕಿಯನ್ನು ಕಾರುತ್ತಿತ್ತು. ನಾನು ಕಾಲೇಜಿನಿಂದ ಮನೆಗೆ ಮರಳುತ್ತಿದ್ದೆ. ಮಧ್ಯಾಹ್ನದ ೧ ಗಂಟೆ. ರಸ್ತೆ ನಿರ್ಜನವಾಗಿತ್ತು. ನನ್ನ ಮುಂದೆಯೇ ೧೦ ರೂಪಾಯಿಯ ನೋಟೊಂದು ಬಿದ್ದಿತ್ತು. ಎತ್ತಿಕೊಂಡೆ. ೧೦ ಅಡಿಗಳ ಅಂತರದಲ್ಲಿ ಮತ್ತೊಂದು ನೋಟು. ಈ ಪ್ರಕಾರ ಒಟ್ಟು ನಾಲ್ಕು ಹತ್ತರ ನೋಟುಗಳು ಸಿಕ್ಕಿದವು. ಯಾರದಿರಬಹುದು ಎನ್ನುವ ವಿಚಾರ ಮನಸ್ಸಿನಲ್ಲಿ ಸುಳಿಯಿತು. ಹೊಸ ನೋಟುಗಳಾದ್ದರಿಂದ ನೋಟಿನ ಮಾಲಕ ಬಹುಶಃ ಬಡವನಿರಲಿಕ್ಕಿಲ್ಲ ಎಂದುಕೊಂಡೆ. ಸ್ವಲ್ಪ ದೂರ ಹೋದ ಕೂಡಲೇ ಲಂಗೋಟಿಯನ್ನು ಮಾತ್ರ ಧರಿಸಿದ ಒಬ್ಬ ಗೌಡ ಓಡೋಡಿ ಬರುತ್ತಿದ್ದ. "ಸೋಮಿ, ದುಡ್ಡೇನಾದ್ರು ನೋಡಿದ್ರ್ಯಾ?" ಎಂದ. "ಯಾರದ್ದು? ಎಷ್ಟು?" ಅಂದೆ. "ನಾಲ್ವತ್ತು ರೂಪಾಯಿಗಳು ಒಡೆಯಾ. ಮಗಳು ತುಂಬು ಕಾಯಿಲೆಯಿಂದ ಬಿದ್ದಾಳೆ. ಔಷಧಕ್ಕಾಗಿ ಸಾಲ ಮಾಡಿದ ದುಡ್ಡು ಒಡೆಯಾ" ಎಂದು ಅಳಲು ಪ್ರಾರಂಭಿಸಿದ. ನಾನು ಆ ಹಣವನ್ನು ಆತನಿಗೆ ಮರಳಿ ನೀಡಿದೆ. "ಟ್ರಕ್ಕಿನಿಂದ ಇಳಿಯುವ ಗಡಿಬಿಡಿಯಲ್ಲಿ ಕೈಯಲ್ಲಿ ಹಿಡಿದುಕೊಂಡ ನೋಟುಗಳು ಗಾಳಿಯ ರಭಸಕ್ಕೆ ದೂರ ಹಾರಿ ಹೋಗಿದ್ದವು. ಒಡೆಯಾ, ನಿಮಗೆ" ಎನ್ನುತ್ತಾ ನನ್ನ ಕಿಸೆಗೆ ೧೦ರ ನೋಟನ್ನು ತುರುಕಲು ನೋಡಿದ. ಬೇಡ ಎಂದರೂ ಕೇಳಲಿಲ್ಲ. ನಾನು ೧೦ರ ನೋಟನ್ನು ತೆಗೆದುಕೊಂಡು ನನ್ನ ೫ ರೂಪಾಯಿಯನ್ನೂ ಸೇರಿಸಿ, "ಗೌಡಪ್ಪಾ, ಈ ೧೫ ರೂಪಾಯಿಯ ಅಂಗಿ ಹೊಲಿಸಿಕೊಳ್ಳು" ಎಂದು ಮರಳಿ ಕೊಟ್ಟೆ. ಮುದುಕನ ಕಣ್ಣಿನಿಂದ ಎರಡು ಅಶ್ರುಬಿಂದುಗಳು ಉದುರಿದವು. ನನ್ನ ಕಣ್ಣುಗಳೂ ತೇವವಾದವು. ಏನೋ ಸತ್ಕಾರ್ಯಮಾಡಿದ ಸಮಾಧಾನದಿಂದ ಮನೆಗೆ ಬಂದೆ.

-ಎಂ. ಡಿ. ರಾಣೆ

ಭವಿಷ್ಯವನ್ನು ಇಂದು
ವೈಜ್ಞಾನಿಕವಾಗಿಯೇ ಗುರುತಿಸಬಹುದು

# ಭವಿಷ್ಯವಿಜ್ಞಾನ

ಜಿ ಟಿ ನಾರಾಯಣರಾವ್

ಭವಿಷ್ಯವಿಜ್ಞಾನ — futurology — ಎಂದರೇನು ?

ಭೂತಕಾಲದಿಂದ ಬೆಳೆದು ಅಭಿವರ್ಧಿಸಿ ಬಂದಿರುವ ಈ ಪ್ರಪಂಚ ಈಗ ವರ್ತಮಾನ ಕಾಲದ ಅಸಿಧಾರೆಯನ್ನು ಅಡ್ಡಹಾಯುತ್ತಿದೆ. ಈ ತನಕ ಪ್ರಪಂಚ ನಡೆದು — ಉರುಳಿ ಎನ್ನಿ ಬೇಕಾದರೆ — ಬಂದಿರುವ ಜಾಡನ್ನು ಶಾಸ್ತ್ರೀಯವಾಗಿ ಅಭ್ಯಸಿಸಿ ಮುಂದೆ ಅದು ಯಾವ ಜಾಡಿನ ಮೇಲೆ ಉರುಳಬಹುದು ಎನ್ನುವುದನ್ನು ಮುನ್ನುಡಿಯುವ ವಿಜ್ಞಾನವೇ ಭವಿಷ್ಯವಿಜ್ಞಾನ. ಪ್ರಪಂಚದ ಸಂಪನ್ಮೂಲಗಳನ್ನು ಆಧರಿಸಿ ಮಾನವ ತನ್ನ ನಾಗರಿಕತೆಯನ್ನು ಅಭಿವರ್ಧಿಸಿಕೊಂಡು ಬಂದಿದ್ದಾನೆ. ಮುಂಬರುವ ದಶಕಗಳಲ್ಲಿ ಈ ನಾಗರಿಕತೆ ಹೇಗೆ ರೂಪುಗೊಂಡೀತು ಎಂಬುದನ್ನು ಈಗ ಕುಂಚಿಸುವ ವಿಜ್ಞಾನವೇ ಭವಿಷ್ಯವಿಜ್ಞಾನ. ಮಾನವ ಮಿದುಳ ಕೂಸು ವಿಜ್ಞಾನ. ವಿಜ್ಞಾನದ ದೂತ ತಂತ್ರವಿದ್ಯೆ– technology. ಮಾನವ–ತಂತ್ರವಿದ್ಯೆ ಅಂತರಕ್ರಿಯೆಯು ಹಾಗೂ ಅಂತರಾವಲಂಬನದ ಪರಿಣಾಮವಾಗಿ ವರ್ತಮಾನಜೀವನ ಅತಿ ಸಂಕೀರ್ಣವಾಗಿದೆ. ಈ ಸಂಕೀರ್ಣ ಜೀವನದ ಭವಿಷ್ಯ ಏನು ಎನ್ನುವುದನ್ನು ಈಗ ಚಿತ್ರಿಸುವ ವಿಜ್ಞಾನವೇ ಭವಿಷ್ಯವಿಜ್ಞಾನ. ಸಂಕ್ಷೇಪವಾಗಿ ಹೇಳುವುದಾದರೆ, ವರ್ತಮಾನಕಾಲದ ಪ್ರಪಂಚದ ಸ್ಥಿತಿಗತಿಗಳನ್ನು ಶಾಸ್ತ್ರೀಯವಾಗಿ ಅಭ್ಯಸಿಸಿ ಭವಿಷ

ಕಾಲದ ಸ್ಥಿತಿಗತಿಗಳನ್ನು ಕಣಿನುಡಿಯುವ ವಿಜ್ಞಾನವೇ ಭವಿಷ್ಯವಿಜ್ಞಾನ.

## ಗಮನ ಸೆಳೆದವರು

ಭವಿಷ್ಯವಿಜ್ಞಾನ ನಾವು ರೂಢಿಯಲ್ಲಿ ತಿಳಿದಿರುವಂಥ — ಉದಾಹರಣೆಗೆ ಖಗೋಳ, ಗಣಿತ, ಭೌತ ಅಥವಾ ರಸಾಯನ ವಿಜ್ಞಾನಗಳಂಥ — ಒಂದು ನಿರ್ದಿಷ್ಟ ವಿಜ್ಞಾನ ಪ್ರಕಾರವಲ್ಲ. ಇದು ಹಲವಾರು ವಿಜ್ಞಾನ ಹಾಗೂ ಮಾನವಿಕ ಪ್ರಕಾರಗಳ ಸಂಗಮದಿಂದ ತೀರ ಈಚೆಗೆ ಹದಗಟ್ಟಿ ಮೈದಳೆದಿರುವ ಒಂದು ಅಧ್ಯಯನ ವಿಭಾಗ. ಬರ್ಲಿನ್ ಸ್ವತಂತ್ರ ವಿಶ್ವವಿದ್ಯಾಲಯದ ರಾಜ್ಯಶಾಸ್ತ್ರ ಪ್ರಾಧ್ಯಾಪಕ ಆಸಿಪ್ ಕೆ. ಫ್ಲೆಕ್‌ಥೀಮ್ ಎಂಬವರು, ೧೯೫೦ರ ಸುಮಾರಿಗೆ, futurology — ಭವಿಷ್ಯವಿಜ್ಞಾನ — ಎಂಬ ಪದವನ್ನು ಟಂಕಿಸಿ ಚಲಾವಣೆಗೆ ತಂದು ಭವಿಷ್ಯದ ಸಮಾಜ ಮತ್ತು ಸಂಸ್ಕೃತಿಗಳನ್ನು ಶಾಸ್ತ್ರೀಯವಾಗಿ ಅಧ್ಯಯಿಸಬೇಕು ಎನ್ನುವ ಸಲಹೆ ನೀಡಿದರು. ಸ್ವತಃ ಇವರೂ ಇವರಂತೆ ಆರ್ನಾಲ್ಡ್ ಟಾಯನ್‌ಬೀ, ಆಲ್ಫ್ರೆಡ್ ವೆಬರ್, ರ್‍ಯಾಶೆಲ್ ಕಾರ್ಸನ್, ರುತ್ ಮೂರ್, ಬಾರ್ಬರ ವಾರ್ಡ್ ಮೊದಲಾದವರೂ ಈ ನಿಟ್ಟಿನಲ್ಲಿ ಮೂಲಭೂತ ಚಿಂತನೆಗಳನ್ನು ನಡೆಸಿ ತಮ್ಮ ಅಧ್ಯಯನ ಫಲಗಳನ್ನು ಪ್ರಕಟಿಸಿ ಪ್ರಪಂಚದ ಗಮನವನ್ನು ಭವಿಷ್ಯವಿಜ್ಞಾನದತ್ತ ಸೆಳೆದ ಮೊದಲಿಗರು.

೧೯೫೦ಕ್ಕೆ ಪೂರ್ವದಲ್ಲಿ ಭವಿಷ್ಯವಿಜ್ಞಾನದ ಪರಿಕಲ್ಪನೆ ಹೊಳೆಯಲಿಲ್ಲವೇಕೆ? ಮುಖ್ಯವಾಗಿ ಎರಡು ಕಾರಣಗಳನ್ನು ಗುರುತಿಸಬಹುದು. ಒಂದನೆಯದಾಗಿ, ಅಂದಿನ ಪ್ರಪಂಚದ ಜನಸಂಖ್ಯೆ ಮತ್ತು ಸಂಪನ್ಮೂಲಗಳ ನಡುವೆ ಗಮನಾರ್ಹ ಕಂದರವೇನೂ ಏರ್ಪಟ್ಟಿರಲಿಲ್ಲ. ನಿಸರ್ಗದ ಸಂಪನ್ಮೂಲಗಳ ಪೂರ್ಣ ಅನ್ವೇಷಣೆಯನ್ನೇ ಆಗಲಿ, ವ್ಯವಸ್ಥಿತ ಉಪಯೋಗವನ್ನೇ ಆಗಲಿ ಮಾನವ ಇನ್ನೂ ಮಾಡಿರಲಿಲ್ಲ. ಕೋರಿದ ವರಗಳನ್ನು ಅನುಗ್ರಹಿಸುವ ಕಲ್ಪತರುವೇ ಧರಿತ್ರೀ ಎಂಬುದು ಅಂದಿನ ಮನೋಧರ್ಮವಾಗಿತ್ತು. ಎರಡನೆಯದಾಗಿ, ಇಪ್ಪತ್ತನೆಯ ಶತಮಾನದ ಪೂರ್ವಾರ್ಧದಲ್ಲಿ ತಂತ್ರವಿದ್ಯೆ ಅಭೂತಪೂರ್ವ ವೇಗೋತ್ಕರ್ಷ ಪಡೆದು ದಾಪಾಯಿಸಿತು. ಅಭಿನವ ಬ್ರಹ್ಮನಾದ ತಂತ್ರವಿದ್ಯಾಪಾರಂಗತ ಮಾನವ ನಿಸರ್ಗದ ಅನೇಕ ನಿಗೂಢ ರಹಸ್ಯಗಳನ್ನು ಭೇದಿಸಿ ಜೀವನವನ್ನು ಹಸನುಗೊಳಿಸುವ ವಿಧಾನವನ್ನು ಶೋಧಿಸಿ ರೂಢಿಸಿದ.

ಅಂಕೆ ಅಂಶಗಳು ಅರುಹುವ ಕತೆ ಕೇಳಿ.

ಕ್ರಿಸ್ತಪೂರ್ವ ೮೦೦೦ದ ಅಂದಾಜಿಗೆ ಅಂದರೆ ಈಗ್ಗೆ ಸುಮಾರು, ೧೦,೦೦೦ ವರ್ಷಗಳ ಹಿಂದೆ ನವಶಿಲಾಯುಗ ಪ್ರಾರಂಭವಾಯಿತು. ಆಗ ಮಾನವ ಕಾಡುಪ್ರಾಣಿಗಿಂತ ತೀರ ಬೇರೆಯವನೇನೂ ಆಗಿರಲಿಲ್ಲ. ನೈಸರ್ಗಿಕವಾಗಿ ದೊರೆತ ಪ್ರಾಣಿ ಹಾಗೂ ಸಸ್ಯಾಹಾರದಿಂದ ಹೊಟ್ಟೆ ಹೊರೆಯುವುದು, ನಿಸರ್ಗದ ಪ್ರತಿಕೂಲ ಬಲಗಳ ಎದುರು ಬದುಕಿ ಉಳಿಯುವುದು ಇವೆರಡೇ ಅವನ ಬಾಳಿನ ಘನೋದ್ದೇಶಗಳಾಗಿದ್ದುವು. ಆಗಿನ ಪ್ರಪಂಚದ ಜನಸಂಖ್ಯೆ ಎಷ್ಟು ಗೊತ್ತೇ? ಸುಮಾರು ಎಂಬತ್ತು ಲಕ್ಷ.

## ಆದಿಮ ತಂತ್ರವಿದ್ಯೆ

ಕ್ರಿಸ್ತಪೂರ್ವ ೩೦೦೦ದ ಅಂದಾಜಿಗೆ ಅಂದರೆ ಈಗ್ಗೆ ಸುಮಾರು ೫೦೦೦ ವರ್ಷಗಳ ಹಿಂದೆ ಮಾನವ ಕಂಚುಯುಗಕ್ಕೆ ಕಾಲಿರಿಸಿದ. ಅಂದು ತಿಳಿದಿದ್ದ ಆದಿಮ ತಂತ್ರವಿದ್ಯೆಯನ್ನು ನಿಸರ್ಗಕ್ಕೆ ಅನ್ವಯಿಸಿ ಚಿನ್ನ, ಬೆಳ್ಳಿ, ತಾಮ್ರ, ತವರ, ಸೀಸ ಎಂಬ ಐದು ಬೇರೆ ಬೇರೆ ಲೋಹಗಳನ್ನು ಸಂಸ್ಕರಿಸಬಲ್ಲವನಾಗಿದ್ದ. ತಾತ್ತ್ವಿಕವಾಗಿ ಈ ಸಿದ್ಧಿಯ ಅರ್ಥವಿಷ್ಟು: ಶಕ್ತಿಯ ಒಂದು ರೂಪವಾದ ಉಷ್ಣವನ್ನು ಅದುರುಗಳ ಮೇಲೆ ಹೇರಿ ಲೋಹವನ್ನು ಸಂಸ್ಕರಿಸಬಹುದಾಗಿತ್ತು. ಹೀಗೆ ಪಡೆದ ಲೋಹ ಮಾನವನಿಗೆ ಅಧಿಕ ತ್ರಾಣ ಕೊಡಬಲ್ಲದಾಗಿತ್ತು; ಇದರ ಪರಿಣಾಮವಾಗಿ ಅವನ ಬದುಕು ಅಷ್ಟರ ಮಟ್ಟಿಗೆ ಸುಗಮವಾಗುತ್ತಿತ್ತು. ಸಹಜವಾಗಿ ಜನಸಂಖ್ಯೆ ಇನ್ನೂ ಕೆಲವು ಲಕ್ಷಗಳಷ್ಟು ವರ್ಧಿಸಿತು. ಅಂದಿನ ಹೆಚ್ಚಳದ ಸರಾಸರಿ ವಾರ್ಷಿಕ ದರ ಶೇಕಡ ೦.೧. ಅಂದರೆ ಯಾವುದೇ ವರ್ಷ ಇದ್ದ ಜನಸಂಖ್ಯೆ ಮುಂದಿನ ೭೫೦ ವರ್ಷಗಳ ತರುವಾಯ ಮಾತ್ರ ದ್ವಿಗುಣಿತವಾಗಬಲ್ಲದಾಗಿತ್ತು.

ಕ್ರಿಸ್ತಶಕ ಆರಂಭವಾಗುವ ವೇಳೆಗೆ ಮಾನವ

ಕಬ್ಬಿಣಯುಗದ ಕೋಡಿ ತಲಪಿದ್ದ. ಒರಟು ಲೋಹವನ್ನು ತಯಾರಿಸಬಲ್ಲವನಾಗಿದ್ದ. ಬಂಗಾರವನ್ನು ಕೃತಕವಾಗಿ ನಿರ್ಮಿಸಲು ರಸವಾದಿಗಳು ಬಗೆಬಗೆಯ ಧಾತು ಕಷಾಯಗಳನ್ನೂ ಮಂತ್ರ ತಂತ್ರಗಳನ್ನೂ ಪ್ರಯೋಗಿಸುತ್ತಿದ್ದರು. ಅವರ ಉದ್ದೇಶವೇನೂ ಕೈಗೂಡಲಿಲ್ಲ; ಆದರೆ ಆ ಪ್ರಯೋಗಗಳ ಉಪೋತ್ಪನ್ನಗಳಾಗಿ ರಸಾಯನವಿಜ್ಞಾನವೂ ಲೋಹತಂತ್ರವಿದ್ಯೆಯೂ ಚೆನ್ನಾಗಿ ಬೆಳೆದು ಅಭಿವರ್ಧಿಸಿದುವು. ಸರಿ, ಯಥಾಪ್ರಕಾರ ನಿಸರ್ಗದ ಮೇಲೆ ಶಕ್ತಿಯ ಅಧಿಕ ಪ್ರಯೋಗದಿಂದ ಅಧಿಕ ತ್ರಾಣ ಗಳಿಸುವ ಮತ್ತು ಹೆಚ್ಚಿನ ಹತೋಟಿ ಸಾಧಿಸುವ ಆಟ ಮುನ್ನಡೆಯಿತು. ಕ್ರಿಸ್ತಶಕ ಒಂದನೆಯ ಇಸವಿಯ ಹೊತ್ತಿಗೆ ಪ್ರಪಂಚದ ಜನಸಂಖ್ಯೆ ಮೂವತ್ತು ಕೋಟಿಗೆ ಏರಿತ್ತು.

ಮುಂದಿನ ೧೭೫೦ ವರ್ಷಗಳಲ್ಲಿ ಜನಸಂಖ್ಯೆ ಅತಿ ಮಂದ ದರದಿಂದ, ವಾರ್ಷಿಕವಾಗಿ ಶೇಕಡ ೦.೦೫೬ ದರದಲ್ಲಿ, ಬೆಳೆದು ಕ್ರಿಸ್ತಶಕ ೧೭೫೦ರ ವೇಳೆಗೆ ಎಂಬತ್ತು ಕೋಟಿ ಆಯಿತು. ಇಷ್ಟಾಗುವಾಗ ಮಾನವನಿಗೆ ಹೊಸತೊಂದು ಶಕ್ತಿಮೂಲ ಲಭಿಸಿತು: ಉನ್ನತ ಸಂಮರ್ದದಲ್ಲಿ ಸಂಗ್ರಹಿಸಿದ ಉಗಿಯನ್ನು ಬಗೆಬಗೆಯ ಕಾರ್ಯ ನಿರ್ವಹಿಸಲು ನಿಯೋಜಿಸಬಹುದು ಎಂಬ ಉಗಿಯಂತ್ರದ ತತ್ತ್ವ ಹದಿನೆಂಟನೆಯ ಶತಮಾನದ ಉತ್ತರಾರ್ಧದಲ್ಲಿ ಕರಗತವಾಯಿತು. ಸಹಜವಾಗಿ ಇದರಿಂದ ವಿಜ್ಞಾನ ಮತ್ತು ತಂತ್ರವಿದ್ಯೆಗೆ ಅತ್ಯಧಿಕ ಕುಮ್ಮಕ್ಕು ದೊರೆಯಿತು. ಉತ್ಪಾದನೆ, ವ್ಯಾಪಾರ, ಸಂಚಾರ, ಜನಾರೋಗ್ಯ, ಸಾಮಾಜಿಕ ವ್ಯವಹಾರ, ಸರಕಾರಗಳ ಕಾರ್ಯಕಲಾಪ, ಯುದ್ಧ ಮುಂತಾದ ವಿವಿಧ ರಂಗಗಳಲ್ಲಿ ತಂತ್ರವಿದ್ಯೆ ತನ್ನ ಖಚಿತ ಮುದ್ರೆ ಒತ್ತಿ ಮಾನವಜೀವನದ ಸಮಸ್ತ ಸ್ತರಗಳನ್ನೂ ವ್ಯಾಪಿಸಿತು. ಇಷ್ಟಾಗುವಾಗ ಇಸವಿ ಪಟ್ಟಿ ೧೮೦೦ನ್ನು ತೋರಿಸುತ್ತಿತ್ತು, ಜನಸಂಖ್ಯೆ ನೂರು ಕೋಟಿಯನ್ನು ದಾಟಿತ್ತು.

## ವ್ಯೋಮ ವಿಸ್ತಾರ ಪ್ರಗತಿ

೧೮೦೦ರಿಂದ ಈಚೆಗಿನ ಸುಮಾರು ನೂರಾಎಂಬತ್ತು ವರ್ಷಗಳಲ್ಲಿ ವಿಜ್ಞಾನ ಮತ್ತು ತಂತ್ರವಿದ್ಯೆಯಲ್ಲಿ ಮಾನವ ಸಾಧಿಸಿರುವ ಪ್ರಗತಿ, ಗಳಿಸಿರುವ ಹಿರಿಮೆ, ಮತ್ತು ಏರಿರುವ ಎತ್ತರ ಎಷ್ಟು ಎಂಬುದನ್ನು ಒಂದೇ ವಾಕ್ಯದಲ್ಲಿ ಹೇಳುವುದಾದರೆ ಆತನ ಜ್ಞಾನವಿಂದು ಪರಮಾಣುವಿನ ಅನಂತಾಲ್ಪ ಹೂರಣದಿಂದ ತೊಡಗಿ ಬ್ರಹ್ಮಾಂಡದ ವ್ಯೋಮ ವಿಸ್ತಾರದ ವರೆಗೂ ಹಬ್ಬಿದೆ. ಜನನ ಮರಣಗಳ ಮೇಲೆ ಹಿಂದೆ ಎಂದೂ ಇದ್ದಿಲ್ಲದಷ್ಟು ಹತೋಟಿಯನ್ನು ಇಂದು ಆತ ಗಳಿಸಿದ್ದಾನೆ. ನವ ಶಕ್ತಿ ಮೂಲಗಳನ್ನು ಕಂಡುಕೊಂಡಿದ್ದಾನೆ. ಸಮಗ್ರವಾಗಿ ಹೇಳುವುದಾದರೆ ಆಧುನಿಕ ಮಾನವ ಶಕ್ತಿಯನ್ನು — ಉದಾಹರಣೆಗೆ ವಿದ್ಯುಚ್ಛಕ್ತಿಯನ್ನು — ತನಗೆ ಬೇಕಾದಂತೆ ಕಾರ್ಯವೆಸಗಲು ವಿಧಿಸಬಲ್ಲವನಾಗಿದ್ದಾನೆ. ಶಕ್ತಿರಹಿತವಾದ ಬಾಳನ್ನು ಊಹಿಸುವುದೂ ಸಾಧ್ಯವಾಗದು. ಎಂದೇ ಆತ ಶಕ್ತಿಯ ಪ್ರಭುವೂ ಹೌದು, ದಾಸನೂ ಹೌದು.

## ಶಕ್ತಿ ವಿನಿಯೋಗ ?

ಜನಸಂಖ್ಯೆ ಏರಿದಂತೆ ತಂತ್ರವಿದ್ಯೆ ಅಭಿವರ್ಧಿಸಿತು, ಒಂದಿಗೇ ಶಕ್ತಿದಾಹ ತೀವ್ರವಾಯಿತು. ಇವು ಹೇಗೆಂದರೆ ಒಂದು ಇನ್ನೆರಡಕ್ಕೆ ಕೊಕ್ಕೊಡುತ್ತ ಒಟ್ಟಾಗಿ ಮೂರೂ ಚಟುಲ ಗತಿಯಿಂದ ಜಿಗಿಯುವ ಸ್ವಭಾವದವು. ಕಲ್ಲಿದ್ದಲು, ಪೆಟ್ರಲ್, ಡೀಸೆಲ್, ನೈಸರ್ಗಿಕಾನಿಲ ಮುಂತಾದ ವಿವಿಧ ರೂಪದ ಫಾಸಿಲ್ ಇಂಧನ ಮಾನವನಿಗೆ ಶಕ್ತಿಯ ಅಕ್ಷಯಪಾತ್ರೆಯಾಗಿ ಒದಗಿದ್ದೊಂದು ಆಕಸ್ಮಿಕ. ಈ ಇಂಧನದ ಅನ್ವೇಷಣೆ, ಸಂಸ್ಕರಣೆ, ಸಂಗ್ರಹಣೆ ಮತ್ತು ಸಾಗಣೆ ಬಲು ಅಗ್ಗವಾಗಿದ್ದುದರಿಂದಲೂ ಇದು ಸಮೃದ್ಧವಾಗಿ ದೊರೆಯುತ್ತಿದ್ದುದರಿಂದಲೂ ಇದರ ದಹನದಿಂದ ಒದಗುತ್ತಿದ್ದ ಶಕ್ತಿ ಅಗಾಧವಾಗಿದ್ದುದರಿಂದಲೂ ತಂತ್ರವಿದ್ಯೆಯು ಅತ್ಯಧಿಕಾಂಶ ಫಾಸಿಲ್ ಇಂಧನಾವಲಂಬಿಯಾಗಿಯೇ ವಿಕಸಿಸಿತು.

ಇಂಥ ತಂತ್ರವಿದ್ಯೆಯ ಕಾರಣವಾಗಿ ನಾವು ಪ್ರಗತಿ ಸಾಧಿಸಿದ್ದೇವೆ. ಪ್ರಗತಿ ಎಂದರೇನು? ಜೀವನ ಮಟ್ಟದ ಏರಿಕೆ ಎಂದು ಸುಲಭವಾಗಿ ಹೇಳುತ್ತೇವೆ. ಹಾಗೆಂದರೇನು? ಹಿರಿಹುದ್ದೆ, ಕೈತುಂಬ ಸಂಬಳ, ಅನುಕೂಲವಾದ ಮನೆ, ಸಾಕಷ್ಟು

ಎಲೆಕ್ಟ್ರಾನಿಕ್ ಸಲಕರಣೆಗಳು, ಸ್ವಂತ ವಾಹನ ಮುಂತಾದವೆಲ್ಲವೂ ಈ [illegible] ಒದಗಿಸಲು ಸಹಕಾರಿಗಳಾಗುತ್ತವೆ ಎಂದು ಪ್ರಾಮಾಣಿಕವಾಗಿ ನಂಬುತ್ತೇವೆ. ಇವೆಲ್ಲ ಪರಿಕರಗಳನ್ನೂ ವಿಘಟಿಸಿದ್ದಾದರೆ ಅಂತಿಮವಾಗಿ ಇವು ನಮ್ಮ ವಿನಿಯೋಗಕ್ಕೆ ದೊರೆಯಲಿರುವ ಶಕ್ತಿಯನ್ನು ಅವಲಂಬಿಸಿರುತ್ತವೆಂದು ತಿಳಿಯುತ್ತದೆ. ಆದ್ದರಿಂದ ತಾತ್ತ್ವಿಕವಾಗಿ, ಶಕ್ತಿವಿನಿಯೋಗದ ಮೊತ್ತವೇ ಪ್ರಗತಿಯ ಮಾನಕ ಎಂದು ಹೇಳಬಹುದು. ಈ ತೆರನಾಗಿ ಪ್ರಗತಿಪಥದಲ್ಲಿ ನಡೆದು ಬಂದಿರುವ ಮಾನವ ಶಕ್ತಿವಿನಿಯೋಗವನ್ನು ಹೇಗೆ ಮಾಡಿಕೊಂಡು ಬಂದಿದ್ದಾನೆ ಗೊತ್ತೇ? ೧೯೪೦ರಲ್ಲಿ ಪ್ರತಿಯೊಬ್ಬ ಅಮೇರಿಕನ್ನನಿಗೂ ದಿನವಹಿ ೧೫೩ ಗುಲಾಮರು ಒದಗಿಸಬಹುದಾದ ಸ್ನಾಯುಸೇವೆಗೆ ಸಮಾನವಾದ ಸೇವೆ ಬೇರೆ ಬೇರೆ ಮೂಲಗಳಲ್ಲಿ ಶಕ್ತಿವಿನಿಯೋಗದಿಂದ ದೊರೆಯುತ್ತಿತ್ತೆಂದು ಅಂದಾಜು ಮಾಡಲಾಗಿದೆ. ೧೯೭೦ರ ವೇಳೆಗೆ ಈ ಸಂಖ್ಯೆ [illegible] ನೆಗೆದಿತ್ತಂತೆ. ಪ್ರಪಂಚದ ಬಹುಸಂಖ್ಯಾತರು ಇಂಥ ಅದೃಷ್ಟವಂತರಲ್ಲ, ನಿಜ. ಆದರೆ ಇವರ ಪೈಕಿ ಹೆಚ್ಚಿನವರ ಹಿರಿ ಆಸೆ ಇರುವುದು ಈ ತೆರನಾದ ಸುಖವನ್ನು ಗಿಟ್ಟಿಸುವುದರತ್ತ, ಅರ್ಥಾತ್ ಅಧಿಕ ಶಕ್ತಿವಿನಿಯೋಗದಿಂದ ಸುಲಭ ಜೀವನ ನಡೆಸುವುದರತ್ತ. ಮಾನವನ ಈ ಸುಪ್ತ ಹಾಗೂ ಅದಮ್ಯ ಪ್ರವೃತ್ತಿಯ ಪರಿಣಾಮವಾಗಿ ಪ್ರಪಂಚದಲ್ಲಿ ಶಕ್ತಿವಿನಿಯೋಗ ವರ್ಷದಿಂದ ವರ್ಷಕ್ಕೆ ಹೆಚ್ಚುತ್ತ ಬಂದಿದೆ.

೧೯೭೮ರ ಪರಿಸ್ಥಿತಿ ಇದು: ಅಗಾಧ ಶಕ್ತಿಯ ನಿರಂತರ ಉತ್ಪಾದನೆ ಮತ್ತು ವಿನಿಯೋಗದಿಂದ ಬದುಕು ಜಟಕಾಬಂಡಿ ಉರುಳುತ್ತಿದೆ. ಬಂಡಿಯೊಳಗಿರುವ ಸವಾರರ ಸಂಖ್ಯೆ ಸುಮಾರು ೪೨೪ ಕೋಟಿ. ಇದೇ ವರ್ಷ ಈ ತಿಮುಕಿಗೆ ಸೇರ್ಪಡೆ ಆಗಲಿರುವ ನಿವ್ವಳ ಜನಸಂಖ್ಯೆ– ಎಂದರೆ ಜನನ ಸಂಖ್ಯೆಯಿಂದ ಮರಣ ಸಂಖ್ಯೆ ವಜಾಜಾತ ಶೇಷ ಸಂಖ್ಯೆ — ಏಳೂಕಾಲು ಕೋಟಿ; ಪ್ರತಿ ಸೆಕೆಂಡಿಗೆ ೨.೩ರಂತೆ. ಜನಸಂಖ್ಯೆಯ ವೃದ್ಧಿ ಈಗಿನಂತೆಯೇ ಮುಂದುವರಿದಿದ್ದಾದರೆ ಕ್ರಿಸ್ತ ಶಕ ೨೦೦೦ ಆಗಮಿಸುವ ವೇಳೆಗೆ — ಅದು ಇನ್ನು ಕೇವಲ ಇಪ್ಪತ್ತೊಂದು ವರ್ಷಗಳಲ್ಲಿ ಸಾಕ್ಷಾತ್ಕರಿಸಿ ಬರುವ ನಮ್ಮ ಕದ ತಟ್ಟಲಿದೆ ಎಂಬುದನ್ನು ಮರೆಯದಿರೋಣ — ಪ್ರಪಂಚದ ಜನಸಂಖ್ಯೆ ೬೪೦ ಕೋಟಿ ಆಗಲಿದೆ. ಜೀವನದ ಪ್ರಾಥಮಿಕಾವಶ್ಯಕತೆಗಳಾದ ಆಹಾರ, ವಸನ, ವಸತಿ, ಆರೋಗ್ಯ, ಶಿಕ್ಷಣ ಇವನ್ನು ಇಷ್ಟು ಮಂದಿಗೂ ಒದಗಿಸಬೇಕಾದದ್ದು ಆದ್ಯ ಕರ್ತವ್ಯವೆಂಬುದನ್ನು ಗಮನಿಸುವಾಗ ಅಂದು ಬೇಕಾಗಬಹುದಾದ ಶಕ್ತಿ ಎಷ್ಟಿರಬಹುದು?

## ಎಷ್ಟು ಬೇಕು?

ಪ್ರಪಂಚದ ಬಹುಸಂಖ್ಯಾತ ಬಡವರ ಬದುಕಿನ ಮಟ್ಟ ಅಲ್ಪಸಂಖ್ಯಾತ ಶ್ರೀಮಂತರ ಹಿರಿಮಟ್ಟದ ಸನಿಹಕ್ಕಾದರೂ ತೆವಳಬೇಕಾದರೆ ಎಷ್ಟು ಶಕ್ತಿ ಬೇಕಾದೀತು ಎಂಬುದನ್ನು ಈಗ ನೋಡೋಣ.

ಕಲ್ಲಿದ್ದಲ ದಹನದಿಂದ ಉತ್ಪಾದನೆ ಆಗುವ ಶಕ್ತಿಯನ್ನು ಇದರ ಮಾನಕವಾಗಿ ಪರಿಗಣಿಸುವುದು ವಾಡಿಕೆ. ೧೯೦೦ರಲ್ಲಿ ಜನಸಂಖ್ಯೆ ೧೭೪ ಕೋಟಿ ಇದ್ದು ಶಕ್ತಿವಿನಿಯೋಗ ೮೦ ಕೋಟಿ ಮೆಟ್ರಿಕ್ ಟನ್ ಕಲ್ಲಿದ್ದಲಿಗೆ ಸಮಾನವಾಗಿತ್ತು. ೧೯೫೦ರಲ್ಲಿ ಜನಸಂಖ್ಯೆ ೨೦೧ ಕೋಟಿಗೆ ಏರಿದ್ದರೆ ಶಕ್ತಿವಿನಿಯೋಗ ೨೬೦ ಕೋಟಿ ಮೆಟ್ರಿಕ್ ಟನ್ ಕಲ್ಲಿದ್ದಲ ಸಮಾನಕ್ಕೆ ನೆಗೆದಿತ್ತು. ೧೯೮೦ರಲ್ಲಿ ಜನಸಂಖ್ಯೆ ೪೩೨ ಕೋಟಿ ಆಗಲಿದ್ದು ಶಕ್ತಿವಿನಿಯೋಗ ೯೮೦ ಕೋಟಿ ಮೆಟ್ರಿಕ್ ಟನ್ ಕಲ್ಲಿದ್ದಲ ಸಮಾನವಾಗಲಿದೆ. ೨೦೦೦ದಲ್ಲಿ ಈ ಸಂಖ್ಯೆಗಳು ಅನುಕ್ರಮವಾಗಿ ೬೪೦ ಕೋಟಿ ಮತ್ತು ೨೨೬೦ ಕೋಟಿ ಆಗಲಿವೆ. ತಲಾ ಶಕ್ತಿವಿನಿಯೋಗ ಇವೇ ಸೂಚೀವರ್ಷಗಳಲ್ಲಿ ಎಷ್ಟು ಎಂದು ಹೇಳಿದರೆ ವಿಷಯ ಇನ್ನೂ ಸ್ಪಷ್ಟವಾದೀತು: ೧೯೦೦ರಲ್ಲಿ ತಲಾ ಶಕ್ತಿವಿನಿಯೋಗ ೦.೪೬ ಮೆಟ್ರಿಕ್ ಟನ್ ಕಲ್ಲಿದ್ದಲಿಗೆ ಸಮಾನವಾಗಿತ್ತು; ೧೯೫೦ರಲ್ಲಿ ಅದು ೧.೨೯ಕ್ಕೆ ಏರಿತ್ತು; ೧೯೮೦ರಲ್ಲಿ ೨.೨೭ ಆಗಲಿದ್ದು ೨೦೦೦ದಲ್ಲಿ ೩.೫೩ಕ್ಕೆ ಜಿಗಿಯುಲಿದೆ.

ಇದರ ಪರಿಣಾಮವೇನು? ಭವಿಷ್ಯವಿಜ್ಞಾನಿಗಳು ಹೇಳುತ್ತಾರೆ — ಮಾನವ ಇಂದು ಅಖಂಡವಾದ ಒಂದೇ ಭೂಮಿಯಲ್ಲಿ ಬಾಳುತ್ತಿಲ್ಲ,

ಬದಲು ತಂತ್ರವಿದ್ಯೆಯು ಕಾರಣವಾಗಿ ವೃದ್ಧಿ ದಿರುವ ತಾಂತ್ರಗೋಳದಲ್ಲಿಯೂ (techno-sphere) ಆತನ ನೈಸರ್ಗಿಕ ನೆಲೆಯಾದ ಜೈವಿಕ ಗೋಳದಲ್ಲಿಯೂ (biosphere) ಏಕಕಾಲದಲ್ಲಿ ಬಾಳುತ್ತಿದ್ದಾನೆ ಎಂಬುದಾಗಿ. ಜೈವಿಕ ಗೋಳವನ್ನು ಅತಿಯಾಗಿ ಶೋಷಿಸಿ ಶಕ್ತಿಯನ್ನು ಚೂಷಿಸಿ, ತಾಂತ್ರಗೋಳ ನೆಲ, ಜಲ, ಬಾನುಗಳಿಗೆ ವ್ಯಾಪಿಸಿ ತ್ರಿವಿಕ್ರಮಾವತಾರ ತಾಳಿದೆ. ಹೀಗಾಗಿ ಮುಖ್ಯತಃ ಮೂರು ದುಷ್ಪರಿಣಾಮಗಳು ಪ್ರಪಂಚವನ್ನು ಕಬಳಿಸುತ್ತಿವೆ: ಪರಿಸರ ಮಾಲಿನ್ಯ, ನೈಸರ್ಗಿಕ ಸಂಪನ್ಮೂಲಗಳ ನಾಶ. ಬಹುಸಂಖ್ಯಾತರ ಬದುಕಿನ ಮಟ್ಟದಲ್ಲಿ ಕ್ರಮಶಃ ಕುಸಿತ.

## ಅದು ಕೊಟ್ಟು ಇದು....

ಪ್ರಪಂಚವಿಂದು ವಿಶಾಲವಾಗಿ ಎರಡು ಬಣಗ ಳಾಗಿ ಒಡೆದುಹೋಗಿದೆ; ಅಭಿವರ್ಧಿತ ರಾಷ್ಟ್ರಗಳು ಅಭಿವೃದ್ಧಿಶೀಲ ರಾಷ್ಟ್ರಗಳು ಅಭಿವರ್ಧಿತ ರಾಷ್ಟ್ರ ಗಳು ತಂತ್ರವಿದ್ಯೆಯಲ್ಲಿ ಅಗಾಧ ಪ್ರಗತಿ ಸಾಧಿಸಿ ತಮ್ಮ ಪ್ರಜೆಗಳ ಜೀವನ ಮಟ್ಟವನ್ನು ಬಲು ಎತ್ತರಕ್ಕೆ ಕೊಂಡೊಯ್ದಿವೆ. ಎಂದೇ ಅವು ಪ್ರಪಂಚದ ಸಂಪನ್ಮೂಲಗಳ ಅಧಿಕ ನಾಶಕ್ಕೂ ಶಕ್ತಿಯ ಅಪಾರ ದುರ್ವಿನಿಯೋಗಕ್ಕೂ ಕಾರಣ ವಾಗಿವೆ. ಇತ್ತ ಅಭಿವೃದ್ಧಿಶೀಲ ರಾಷ್ಟ್ರಗಳಾದರೋ, ಫಾಸಿಲ್ ಇಂಧನವನ್ನೂ ಕಚ್ಚಾಸಾಮಗ್ರಿಗಳನ್ನೂ ಬಿಸಾಡುವ ಬೆಲೆಯೇ ಎನ್ನಬಹುದಾದಷ್ಟು ಅಗ್ಗವಾಗಿ ತಮ್ಮ ಪ್ರಬಲ ಸೋದರ ರಾಷ್ಟ್ರ ಗಳಿಗೆ ನಿರ್ಯಾತ ಮಾಡಿ ಅವುಗಳಲ್ಲಿಂದ ಅವು ವಿಧಿಸಿದ ಬೆಲೆಗೆ ಯಂತ್ರಸ್ಥಾವರ, ಯುದ್ಧಸಾಮಗ್ರಿ, ವೈಜ್ಞಾನಿಕ ಉಪಕರಣ ಗಳು ಮುಂತಾದ ಸಿದ್ಧ ಪದಾರ್ಥಗಳನ್ನೂ ತಂತ್ರವಿದ್ಯೆಯ ಏನು ಎಂತನ್ನೂ ಆಯಾತ ಮಾಡಿಕೊಳ್ಳಬೇಕಾಗಿದೆ. ಹೀಗಾಗಿ ಪ್ರಪಂಚ ಎರಡು ಕೊನೆಗಳಲ್ಲಿಯೂ ಉರಿಯುತ್ತಿರುವ ದೊಂದಿಯಾಗಿ ಎರಡೂ ಬಣಗಳ ನಡುವಿನ ಅಗಲು ಹಿರಿದಾಗಿ ಬಾಯಿ ಅಗಲವಾಗುತ್ತಿದೆ. ಒಟ್ಟಾರೆ ಪ್ರಪಂಚ ಬರಡಾಗಿ ಬತ್ತುತ್ತಿದೆ. ಉಲ್ಬಣಿಸುತ್ತಿರುವ ಈ ಬೇನೆಯನ್ನು ಮಾನವ ಅರಿತು — ಅರಿಯುವಷ್ಟು ಬುದ್ಧಿವಂತಿಕೆ ಖಾತ್ರಿ ಅವನಿಗಿದೆ — ಅತಿ ವೇಗದಿಂದ ವಿಸ್ತರಿಸುತ್ತಿರುವ ಜನಸಂಖ್ಯೆ — ತಂತ್ರವಿದ್ಯೆ — ಶಕ್ತಿವಿನಿಯೋಗ ಈ ತ್ರಿಭುಜವನ್ನು ಈಗಿಂದೀಗಲೇ ನಿಯಂತ್ರಿಸಲು ಪ್ರಯತ್ನಿಸಿದರೆ ಮಾತ್ರ ಆತ ಕ್ರಿಸ್ತಶಕ ೨೦೦೦ವನ್ನು ಉತ್ಸಾಹದಿಂದ ಸ್ವಾಗತಿಸಬಲ್ಲ, ಭವಿಷ್ಯದ ಅನಿರೀಕ್ಷಿತ ಆಘಾತದಿಂದ ಪಾರಾಗಬಲ್ಲ.

ಏನು ಮಾಡಬೇಕು ? ಭವಿಷ್ಯವಿಜ್ಞಾನಿಗಳು ನೀಡಿರುವ ಕೆಲವು ಮುಖ್ಯ ಸೂಚನೆಗಳು ಇಂತಿವೆ:

ಪ್ರತಿಯೊಂದು ರಾಷ್ಟ್ರವೂ ತನ್ನ ಜನಸಂಖ್ಯಾ ವೃದ್ಧಿದರವನ್ನು ಸೊನ್ನೆಗೆ ಇಳಿಸತಕ್ಕದ್ದು. ಅಂದರೆ ಜನಸಂಖ್ಯೆಯೂ ಮರಣಸಂಖ್ಯೆಯೂ ಸಮ ವಾಗಿರಬೇಕು. ಈಗಿನ ಜನಸಂಖ್ಯಾವೃದ್ಧಿದರ ವಾರ್ಷಿಕವಾಗಿ ಶೇಕಡ ೨. ಅಂದರೆ ಕೇವಲ ಮೂವತ್ತೈದು ವರ್ಷಗಳಲ್ಲಿ ಪ್ರಪಂಚದ ಜನ ಸಂಖ್ಯೆ ದುಪ್ಪಟ್ಟು ಆಗಬಲ್ಲದು.

## ತಾಂತ್ರಿಕ ತ್ರಾಣದ ಹುಚ್ಚು

ಫಾಸಿಲ್ ಇಂಧನ ಸದಾಕಾಲ ಸಮೃದ್ಧ ಯಾಗಿಯೂ ಅಗ್ಗವಾಗಿಯೂ ಸಿಕ್ಕದು. ಆದ್ದ ರಿಂದ ಜನಜೀವನವನ್ನು ಸುಗಮವಾಗಿರಿಸಲು ಪರ್ಯಾಯ ಶಕ್ತಿಮೂಲಗಳನ್ನು ಶೋಧಿಸ ಬೇಕು. ವರ್ತಮಾನ ಯುಗದ ನೂತನ ಅಕ್ಷಯ ಪಾತ್ರೆ ಎಂದು ಹೆಸರಾಂತಿರುವ ಪರಮಾಣು ಶಕ್ತಿಗೆ ಈ ಪಟ್ಟ ಗಿಟ್ಟುವುದರ ಬಗ್ಗೆ ಸಂದೇಹ ಉಂಟು. ಮುಖ್ಯ ಕಾರಣಗಳೆಂದರೆ ರಿಯಾ-ಕ್ಟರುಗಳಿಗೆ ಊಡಬೇಕಾದ ವಿಕಿರಣಪಟು ಧಾತುಗಳ ವಿರಳತೆ, ಶೇಷಪದಾರ್ಥಗಳು ಒಡ್ಡುವ ಅಪಾಯ ಮತ್ತು ಖುದ್ದು ರಿಯಾಕ್ಟರುಗಳ ಸುರಕ್ಷತೆ. ಸೌರಶಕ್ತಿ, ಮಾರುತಶಕ್ತಿ, ಕಡಲ ಲೆಗಳ ಶಕ್ತಿ, ಜಲಶಕ್ತಿ ಹಾಗೂ ಜೈವಿಕಾನಿಲ ಶಕ್ತಿ, ಇವನ್ನು ಬಳಗಿಸುವುದರತ್ತ ವ್ಯಾಪಕ ಸಂಶೋಧನೆ ನಡೆಯಬೇಕು. ಹೈಡ್ರೊಜನ್ ಅನಿಲವನ್ನು ಇಂಧನವಾಗಿ ಬಳಸುವುದರ ಬಗ್ಗೆಯೂ ಸಂಶೋಧನೆ ಸಾಗಿದೆ.

ಮಿಥ್ಯಾ ಪ್ರಗತಿಯ ಬೆನ್ನು ಹಿಡಿದು ವೃಥಾ ತಾಂತ್ರಿಕ ಸಲಕರಣೆಗಳ ದಾಸನಾಗುವ ಹುಚ್ಚು ಹಂಬಲವನ್ನು ಮಾನವ ತೊರೆಯಬೇಕು. ಸ್ವಂತ ಸ್ನಾಯು ತ್ರಾಣವನ್ನು ಹೆಚ್ಚು ಹೆಚ್ಚು

ಅವಲಂಬಿಸಿ ಬಾಳಲು ಕಲಿಯಬೇಕು.

ಜೈವಿಕಗೋಳ–ತಾಂತ್ರಗೋಳ ಇವುಗಳ ನಡುವಿನ ಸ್ಪರ್ಧೆಯಲ್ಲಿ ಈಗ ತಾಂತ್ರಗೋಳದ್ದೇ ಮೇಲುಗೈ ಆಗಿದೆ. ಈ ವ್ಯತಿರಿಕ್ತ ಪರಿಸ್ಥಿತಿಯನ್ನು ಒಡನೆ ಪರಾವರ್ತನಗೊಳಿಸಿ ಜೈವಿಕಗೋಳ ಮಾನವನಿಗೂ ಅಂತೆಯೇ ಇತರ ಎಲ್ಲ ಜೀವಿಗಳಿಗೂ ಸದಾ ಜೀವದ ತನಿರಸವನ್ನು ವಿಪುಳವಾಗಿ ಧಾರೆ ಎರೆವ ಅಮೃತಕುಂಭವಾಗುವಂತೆ ಮಾಡಬೇಕು. ತಂತ್ರವಿದ್ಯೆಯ ಅಂಥ ಪ್ರಗತಿಯನ್ನು ತಡೆಯುವುದೂ ನಿಸರ್ಗದ ಪುನರುತ್ಥಾನವನ್ನು ಕೈಗೊಳ್ಳುವುದೂ ಈಗ ಅನುಸರಿಸಬಹುದಾದ ತಿದ್ದುಪಡಿಗಳು.

## ವ್ಯಾಘಾತಗಳು

ಮಾನವವ್ಯಕ್ತಿತ್ವದ ಪ್ರಗತಿಯೂ ತಂತ್ರವಿದ್ಯೆಯ ಪ್ರಗತಿಯೂ ಸಮ ಲಯದಲ್ಲಿ ಇದ್ದಾಗ ಬದುಕು ವಿಶೇಷ ಸಮಸ್ಯೆಗಳನ್ನು ಒಡ್ಡುವುದಿಲ್ಲ. ಹದಿನೆಂಟನೆಯ ಶತಮಾನದಿಂದಲೇ ಈ ಪ್ರಗತಿಯಲ್ಲಿ ಅಲ್ಪಸ್ವಲ್ಪ ತಾಳ ತಪ್ಪಿ ಮಾನವವ್ಯಕ್ತಿತ್ವ ಹಿಂದೆ ಬೀಳತೊಡಗಿತು. ಪ್ರಸಕ್ತ ಶತಮಾನದ ಉತ್ತರಾರ್ಧದಲ್ಲಿ ತಂತ್ರವಿದ್ಯೆಯ ನೆಗೆಜಿಗಿತವೊಡನೆ ಮಾನವವ್ಯಕ್ತಿತ್ವದ ಆಮೆನಡೆತ ಹೊಂದಿಕೊಳ್ಳಲಾಗದೆ ಅಸಂಖ್ಯಾತ ವ್ಯಾಘಾತಗಳು (contradictions) ತಲೆದೋರಿವೆ. ಇವು ಮಾನವನಿಗೆ ಅಪಾಯಕಾರಿಗಳು. ಇವುಗಳಿಂದ ಪಾರಾಗಲು ಇರುವ ಹಾದಿ ಒಂದೇ: ತಂತ್ರವಿದ್ಯೆಯ ಪರಿಣಾಮವಾದ ಬದಲಾವಣೆಯ ದರವನ್ನು ಹತೋಟಿಯಲ್ಲಿಡುವುದು.

ಕೊನೆಯಲ್ಲಿ ಒಂದು ಮಾತು. ಅಮೆರಿಕದಲ್ಲಿ ಆಧುನಿಕ ತಂತ್ರವಿದ್ಯೆ ರಾಷ್ಟ್ರಾದ್ಯಂತ ತನ್ನ ಆಕ್ಟೋಪಸ್ (ಕಬಂಧ) ಅಪ್ಪುಗೆಯನ್ನು ಚಾಚುತ್ತಿದ್ದ ದಿನಗಳವು. ೧೮೫೫ರಲ್ಲಿ, ರೆಡ್ ಇಂಡಿಯನ್ ನಾಯಕ ಸಿಯಾತಲ್ ಎಂಬಾತ ರಾಷ್ಟ್ರಾಧ್ಯಕ್ಷರಿಗೆ ಬರೆದ ಕಾಗದದಿಂದ, ತನ್ನ ನೆತ್ತರಿನಿಂದಲೇ ಬಿತ್ತರಿಸಿದ ಉಯಿಲಿನಿಂದ, ಈ ಮುಂದಿನ ಕೆಲವು ವಾಕ್ಯಗಳನ್ನು ಉದ್ಧರಿಸಿದೆ: "ಭೂಮಂಡಲದ ಪ್ರತಿಯೊಂದು ಅಂಶವೂ ನನ್ನ ಮಂದಿಗೆ ಪವಿತ್ರವಾದದ್ದು. ಒಂದೊಂದು ಮರದ ಕೊಂಬೆರೆಂಬೆಗಳು ಕಡಲ ಕಿನಾರೆಯಲ್ಲಿನ ಬಿಳಿಮರಗಳ ಹಾಸು, ದಟ್ಟ ಕಾಡುಗಳಲ್ಲಿನ ಮಬ್ಬು ಇಬ್ಬನಿಯ ಮುಸುಕು, ಗುಂಯ್ ಗುಡುವ ಕೀಟದ ಸ್ವನ ಎಲ್ಲವೂ ನಮ್ಮ ಬಳಗದವರಿಗೆ ಆತ್ಮೀಯವಾದಂಥವು...... ತಾನು ಶ್ವಸನಿಸುವ ವಾಯುವನ್ನು ಬಿಳಿಮನುಷ್ಯ ಗಮನಿಸಿರುವಂತೆ ತೋರುವುದಿಲ್ಲ. ನವೆದು ನವೆದು ಸಾಯುತ್ತಿರುವ ರೋಗಿಯಂತೆ ಅವನು ಪರಿಮಳಕ್ಕೆ ಮರವಟ್ಟಿದ್ದಾನೆ. ಪ್ರಾಣಿಸಂಗ ಇಲ್ಲದಂಥ ಮನುಷ್ಯನ ಬದುಕು ಬದುಕೇ? ವನ್ಯಪ್ರಾಣಿಗಳೆಲ್ಲವೂ ನಿರ್ನಾಮವಾಗಿ ಹೋದುವೋ, ಮನುಷ್ಯ ಧೃತಿಗುಂದಿದವನಾಗಿ ಏಕಾಂಗಿಯಾಗಿ ಸತ್ತ್ವ ಕಳೆದುಕೊಂಡವನಾಗಿ ನಶಿಸಿಯೇ ಹೋಗುವುದು ನಿಚ್ಚಳ ಸತ್ಯ. ಏಕೆಂದರೆ ಪ್ರಾಣಿಗಳಿಗೆ ಇಂದು ಯಾವ ಗತಿ ಒದಗುವುದೋ ಅದು ಮನುಷ್ಯನಿಗೆ ನಾಳೆ ಒದಗುವುದು ನಿಸರ್ಗ ನಿಯಮ." ✡

(ಭವಿಷ್ಯವಿಜ್ಞಾನಕ್ಕೆ ನೇರವಾಗಿ ಸಂಬಂಧಿಸಿದ ಈ ಕೆಳಗಿನ ಲೇಖನಗಳನ್ನು 'ಕಸ್ತೂರಿ'ಯ ಹಿಂದಿನ ಸಂಚಿಕೆಗಳಲ್ಲಿ ನೋಡಬಹುದು:

೧. ಜಗತ್ತು ಕ್ರಿ. ಶ. ೨೦೦೦ದಲ್ಲಿ ಹೇಗಿದ್ದೀತು? –ಜುಲೈ ೧೯೬೯
೨. ಕುಟುಂಬ ಜೀವನ ಇತಿಶ್ರೀಯಾಗುವುದೇ ? –ಡಿಸೆಂಬರ್ ೧೯೬೯
೩. ಭವಿಷತ್ತಿನಲ್ಲಿ ಜಗತ್ತು ಹೇಗಿದ್ದೀತು? –ಜುಲೈ ೧೯೭೫)



# ಬಿಸ್ರಾ ಗಾದೆಗಳು

ಉಪವಾಸ ಮಾಡಿದರೆ ಅಜೀರ್ಣ ಎಲ್ಲಿ ಬಂತು?

× × ×

ನ್ಯಾಯಪತಿಗೆ ಮೂಲವ್ಯಾಧಿ; ವ್ಯಾಪಾರಿಗೆ ಗೂದಲು ಬಾಧೆ

× × ×

ಜಾತಿ ದ್ವೇಷಕ್ಕೂ, ಪಾರ್ಟಿದ್ವೇಷಕ್ಕೂ ಮದ್ದೇ ಇಲ್ಲ

× × ×

ತೆರಿಗೆ ಹೇರಿದರೆ ಹೆರಿಗೆ ಕಡಿಮೆಯಾಗತ್ತೆ?

× × ×

[illegible] ಯೋಚನೆಯೂ ಕೂಡದು; ಯಾಚನೆಯೂ ಕೂಡದು

× × ×

ದನಕ್ಕೆ ಹಾಕೋ ಹಿಂಡೀನ ಹೋಟ್ಲಲ್ಲಿ ಚಟ್ನಿ ಮಾಡಿದ ಹಾಗೆ

× × ×

ತಾಯಿತಂದೆ ಮಾತು ಕೇಳೊ ಮಕ್ಕಳೂ ಇಲ್ಲಾ; ಅತ್ತೆ ಮಾವನ ಮಾತು ಕೇಳೋ ಸೊಸೇನೂ ಇಲ್ಲಾ!

× × ×

ನಮ್ಮಾಕಿಯೇನೊ ಗ್ರ್ಯಾಜುಯೇಟ್; ಅಡುಗೆ ಮಾಡೋಕೆ ಸರಿಯಾಗಿ ಬರೋಲ್ಲಾ

× × ×

ಫ್ರಿಜ್‌ನಲ್ಲಿಟ್ಟು ಕಾಸಿ ಪಾರ ಗಟ್ಲೆ ಉಂಡ ಹಾಗೆ

× × ×

ಹೋಟಲ ತಿಂಡಿ ದರಾನೂ ಏರಿಸಿದರು; ಗಾತ್ರಾನ್ನೂ ತಗ್ಗಿಸಿದರು

ಬಿ. ಎಸ್. ರಾಮಾಚಾರ್, ಗುಡಿಬಂಡೆ.

# ಯಾಕೆ
# ಏನು
# ಎತ್ತಗಳ
# ಕೌತುಕಲೋಕ

ಪ್ರಶಾಂತ ನಾಡ್ತ

ಮಗುವಿನ ಜಗತ್ತು ಚಿತ್ರಮಯ, ವಿಶಿಷ್ಟ. ತಾನು ಕಲ್ಪಿಸಿಕೊಂಡ ಈ ಜಗತ್ತಿನಲ್ಲಿ ಮಗುವೇ ಕೇಂದ್ರ. ಎಲ್ಲಾ ವ್ಯಕ್ತಿ ಹಾಗೂ ವಸ್ತುಗಳು ಈ ಕೇಂದ್ರ ವ್ಯಕ್ತಿಯ ಸುತ್ತ ತಿರುಗುತ್ತಿರುತ್ತಿವೆ. ಮಗುವಿನ ಈ ಜಗತ್ತನ್ನು, ಮಗುವಿನ ಚಿಂತನಾ ರೀತಿಯನ್ನು, ಎರಿಕ್ ಬರ್ನ್ ಎಂಬ ಮನಶ್ಶಾಸ್ತ್ರಜ್ಞನು ಸುಂದರವಾಗಿ ಚಿತ್ರಮಯವಾಗಿ ಈ ರೀತಿಯಲ್ಲಿ ಕಲ್ಪಿಸಿದ್ದಾನೆ: ಒಂದು ಕುಟುಂಬ. ಈ ಕುಟುಂಬವಲ್ಲಿ ಇರುವವರು ಮೂರು ಮಂದಿ. ದೈತ್ಯ (ತಂದೆ), ಹೆಂಗಸು (ತಾಯಿ) ಹಾಗೂ ಒಬ್ಬ



ಕುಬ್ಜ (ಮಗು). ಹೆಂಗಸು ಕುಬ್ಜನನ್ನು ಬಹುವಾಗಿ ಪ್ರೀತಿಸುತ್ತಾಳೆ. ಆಗಾಗ್ಗೆ ಮೊಲೆಯೂಡಿಸುತ್ತಾಳೆ, ಅತ್ತಾಗ ಎತ್ತಿ ಲಲ್ಲೆಗರೆಯುತ್ತಾಳೆ, ಮಡಿಲಲ್ಲಿ ಅದುಮಿ ಮುತ್ತಿಕ್ಕುತ್ತಾಳೆ, ತೊಟ್ಟಿಲಲ್ಲಿ ಮಲಗಿಸಿ ಜೋಗುಳ ಹಾಡುತ್ತಾಳೆ. ತನ್ನ ಸಮಯವನ್ನೆಲ್ಲಾ ಕುಬ್ಜನಿಗಾಗಿ ವ್ಯಯಿಸುತ್ತಾಳೆ. ಕುಬ್ಜ ಅತ್ತರೆ ಹೆಂಗಸು ಓಡೋಡಿ ಬರುತ್ತಾಳೆ. ಈ ಹೆಂಗಸಿನ ಲಾಲನೆಪಾಲನೆಯಲ್ಲಿ ಕುಬ್ಜ ಸುಖವಾಗಿರುತ್ತಾನೆ. ಅವನು ಏನೂ ಮಾಡಬೇಕಾಗಿಲ್ಲ. ಈ ಹೆಂಗಸು, ಈ ಮನೆಯ ವಸ್ತು

ಗಳೆಲ್ಲಾ ತನಗಾಗಿ, ತನ್ನ ಸುಖಕ್ಕಾಗಿ ಮೀಸಲು ಎಂದು ಕುಬ್ಜನ ಭಾವನೆ. ದಿನವಿಡೀ ಕುಬ್ಜ ಬಹು ಸಂತೋಷದಿಂದ ನಲಿದಾಡುತ್ತಾ, ತನ್ನ ತೊದಲ್ನುಡಿಗಳಿಂದ ಹೆಂಗಸನ್ನು ಸಂತೋಷ ಗೊಳಿಸುತ್ತಾ, ಆಟದ ಸಾಮಾನುಗಳನ್ನು, ಚೆಲ್ಲಾಪಿಲ್ಲಿಗೊಳಿಸುತ್ತಾ ಇರುತ್ತಾನೆ. ಹೆಂಗಸು ಅಡಿಗೆ ಕೋಣೆಯಲ್ಲಿದ್ದಾಗ ಕುಬ್ಜ, ಅಲ್ಲಿಗೂ ಹೋಗಿ ಹೆಂಗಸಿನ ಸೀರೆಯನ್ನು ಹಿಡಿಯಲು ಪ್ರಯತ್ನಿಸುತ್ತಾನೆ. ತಾನು ದಟ್ಟಡಿಯಿಡಲು ಪ್ರಯತ್ನಿಸುವಾಗ ಕೆಳಬಿದ್ದರಂತೂ ತೀರಿತು. ಹೆಂಗಸು ಓಡೋಡಿ ಬಂದು ಕುಬ್ಜನನ್ನು ಮೇಲೆತ್ತಿ ಲಟಲಟ ಮುತ್ತುಗಳನ್ನಿತ್ತು, 'ರಾಜ ನನ್ನ ರಾಜ' ಎಂದು ತೊದಲು ಸವಿಮಾತು ಗಳನ್ನಾಡುತ್ತಾಳೆ. ಇಂತಹ ವಾತಾವರಣದಲ್ಲಿ ಎಲ್ಲವೂ ಇರುವುದು ತನಗಾಗಿ ಎಂಬ ಮನೋ-ಭಾವ ಈ ಕುಬ್ಜನಲ್ಲಿ ಮೂಡುವುದು ಸಹ-ಜವೇ.

ಇಷ್ಟರವರೆಗೆ ಕುಬ್ಜನ ಕಾರ್ಯಕ್ರಮಗಳೆಲ್ಲಾ ಸುಗಮವಾಗಿ ಸಾಗುತ್ತವೆ. ಆದರೆ ಸಂಜೆ ಆರು ಗಂಟೆಗೆ ಕುಬ್ಜನ ಸಮಸ್ಯೆ ಪ್ರಾರಂಭ ವಾಗುತ್ತದೆ. ಪ್ರತಿದಿನ ಸಂಜೆ ಆರು ಗಂಟೆಗೆ, ಮುಂಬಾಗಿಲಿನಲ್ಲಿ ದೈತ್ಯನೊಬ್ಬ ದಡಬಡಿಸಿ ಕೊಂಡು ಒಳ ಪ್ರವೇಶಿಸುತ್ತಾನೆ. ಕುಬ್ಜ ನೋಡುತ್ತಿರುವಾಗಲೇ ಅಡಿಗೆ ಕೋಣೆಯಲ್ಲಿದ್ದ ಈ ಸುಂದರಿ ಹೆಂಗಸು (ಕುಬ್ಜನಿಗೆ ಎಲ್ಲಾ ಹೆಂಗಸರೂ ಸುಂದರಿಯರೇ) ಓಡೋಡಿ ಬಂದು ಈ ಆಗಂತುಕ ದೈತ್ಯನನ್ನು ಸ್ವಾಗತಿಸುತ್ತಾಳೆ, ಕೆಲವೊಮ್ಮೆ ಆಲಿಂಗಿಸಲೂಬಹುದು. ಈ ಕ್ಷಣ ದಿಂದ ಹೆಂಗಸಿನ ಗಮನವೆಲ್ಲಾ ಆ ದೈತ್ಯನತ್ತ. ದೈತ್ಯನೂ ಕುಬ್ಜನೊಡನೆ ಒಂದೆರಡು ಸವಿ ಮಾತುಗಳನ್ನಾಡುತ್ತಾನೆ, ಆದರೂ ತನ್ನ ಹೆಚ್ಚಿನ ಸಮಯವನ್ನೆಲ್ಲಾ ಹೆಂಗಸಿನೊಡನೆ ಮಾತ ನಾಡುವುದರಲ್ಲೇ ಕಳೆಯುತ್ತಾನೆ. ರಾತ್ರಿ ಊಟವಾದ ಕೂಡಲೇ ಕುಬ್ಜನನ್ನು ಮಲಗಿಸ ಲಾಗುವುದು. ಹಾಸಿಗೆಯಲ್ಲಿ ಬಿದ್ದಿರುವ ಕುಬ್ಜ ನಿಗೆ, ದೈತ್ಯ ಹಾಗೂ ಹೆಂಗಸಿನ ಮಾತುಕತೆ ಗಳು, ನಗೆದಾಟಗಳು ನಂತರ ಏನೇನೋ ಸದ್ದುಗಳು ಕೇಳಿಬರುತ್ತವೆ.

## ಸೂಕ್ಷ್ಮ ಮನಸ್ಸು

ಇವರಿಬ್ಬರ ಈ ವರ್ತನೆ ಕುಬ್ಜನಲ್ಲಿ ಹಲವು ವಿಧದ ಪ್ರತಿಕ್ರಿಯೆಗಳನ್ನು ಉಂಟುಮಾಡು ವುದು ಸಹಜ. ಈ ಹೆಂಗಸು ಇರುವುದೇ ತನ-ಗಾಗಿ, ಎಂದು ಭಾವಿಸುತಿದ್ದ ಕುಬ್ಜನಿಗೆ ದೈತ್ಯ-ಎದುರಾಳಿಯಾಗುತ್ತಾನೆ. ದೈತ್ಯನ ಬಗ್ಗೆ ಕುಬ್ಜ ನಿಗೆ ದ್ವೇಷ, ಅಸೂಯೆಗಳು ಪ್ರಾರಂಭ ವಾಗುತ್ತವೆ. ದೈತ್ಯ ಎಂದೂ ಮನೆಗೆ ಮರಳ-ದಿರಲಿ ಎಂದು ಕುಬ್ಜ ಆಶಿಸುವುದೂ ಇದೆ. ದೈತ್ಯನ ಬಗ್ಗೆ ತನ್ನ ಅಸೂಯೆಯನ್ನು ಪ್ರಕ-ಟಿಸಿದರೂ, ಅವರು ಅದನ್ನು ವಿನೋದ ವನ್ನಾಗಿ ನೋಡುತ್ತಾರೆ. ಹೆಂಗಸು ತನ್ನ ಮನೋಭಾವಗಳನ್ನು ಅರ್ಥಮಾಡಿಕೊಳ್ಳುವು ದಿಲ್ಲ ಎಂದು ಅರಿತ ಕುಬ್ಜ ಸಿಟ್ಟಿಗೆದ್ದು, ಆಟದ ಸಾಮಾನುಗಳನ್ನು ಬಿಸಾಡುತ್ತಾನೆ, ಊಟ ಮಾಡಲು ನಿರಾಕರಿಸುತ್ತಾನೆ, ದೈತ್ಯನಿಂದ ದೂರ ಸರಿಯುತ್ತಾನೆ. 'ಈ ಮಗುವಿಗೆ ಏನಾ ಗಿದೆ' ಎಂದು ಹೆಂಗಸು ಆತಂಕಪಡುತ್ತಾಳೆ. ಕುಬ್ಜನಂತೂ ಇನ್ನೂ ಹಟಮಾರಿಯಾಗುತ್ತಾನೆ. ಮೂಲೆಯಲ್ಲಿ ಕುಳಿತು ಚಿಂತಾಕುಲನಾಗಿ ಕೊರಗುತ್ತಾನೆ, ಪ್ರತಿ ದಿನ ಸಂಜೆ ಆರು ಗಂಟೆಗೆ ಅವನಿಗ ಹೊಟ್ಟೆಸೋಪು ಪ್ರಾರಂಭ. ತನ್ನ ಈ ವಿಲಕ್ಷಣ ವರ್ತನೆಯನ್ನು ಹೆಂಗಸು ನಿರ್ಲಕ್ಷಿಸಿದರಂತೂ ಕುಬ್ಜ ಹತಾಶನಾಗಿ ಕಿರುಚಲು, ನೆಲದಲ್ಲಿ ಹೊರಳಾಡಿ ಕೈಕಾಲುಗಳನ್ನು ಬಡಿಯಲು ಪ್ರಾರಂಭಿಸುತ್ತಾನೆ.

ಪ್ರತಿ ಮಗುವಿಗೂ ತನ್ನ ತಂದೆಯೊಬ್ಬ ದೈತ್ಯ, ಎಲ್ಲರಿಗಿಂತಲೂ ಶಕ್ತಿಶಾಲಿ, ಸಮರ್ಥ ವ್ಯಕ್ತಿ. ತನ್ನ ತಾಯಿಗಿಂತ ಸುಂದರಿಯರು ಬೇರಾ-ರೂ ಇಲ್ಲ. ಇವರಿಬ್ಬರೂ ತನ್ನ ಸೇವೆಗಾಗಿಯೇ ಇರುವವರು. ಎಂಬ ಮನೋಭಾವ ಆದರೆ ಮಗು, ತನ್ನ ಸುಖಕ್ಕಾಗಿ ತನ್ನ ತಾಯಿಯನ್ನು ಅವಲಂಬಿಸಿರುವುದು ಅನಿವಾರ್ಯ. ಅವಳ ಮೊಲೆ ಹಾಲು ಅವನ ಬೆಳವಣಿಗೆಗೆ ಎಷ್ಟು ಆವಶ್ಯ-ಕವೋ, ಅವಳ ಮಮತೆಯೂ ಅವನಿಗೆ ಅತ್ಯ-ಗತ್ಯ. ಪ್ರತಿದಿನ ಮನೆಗೆ ಮರಳುವ ತಂದೆ, ಆ ಸಮಯದಲ್ಲಿ ತನ್ನ ತಾಯಿಯ ವರ್ತನೆ

ಮಗುವಿನ ಮೇಲೆ ಗಾಢವಾದ ಪ್ರಭಾವವನ್ನು ಬೀರುತ್ತದೆ ಎನ್ನಬಹುದು.

ತಾನೇ ಈ ಜಗತ್ತಿನ ಕೇಂದ್ರ ಬಿಂದು ಎಂಬ ಭಾವನೆ ನಮ್ಮ ಸುಪ್ತಚೇತನದಲ್ಲಿ ಎಲ್ಲೋ ಹುದುಗಿಕೊಂಡಿರುತ್ತದೆ. ಮಗುವಿನಲ್ಲಂತೂ ಈ ಭಾವನೆ ಅತ್ಯಂತ ಹೆಚ್ಚು. ಕಾಲಕ್ರಮೇಣವಾಗಿ, ಶಿಕ್ಷಣದಿಂದಾಗಿ, ಈ ಮನೋಭಾವ ಇಂದು ಮಿಥ್ಯೆಯೆಂಬ ಕಟುಸತ್ಯದ ಅರಿವು ಮಗುವಿನಲ್ಲಿ ಉಂಟಾಗುತ್ತದೆ. ತಾನೇ ಲೋಕಕೇಂದ್ರವೆಂದು ಭಾವಿಸುವ ಮಗುವಿಗೆ, ತನಗಿಂತ ಬೇರೆಯಾದ ತಾಯಿಯೊಬ್ಬಳು ಇರುವಳೆಂಬ ಅರಿವು ಮೂಡುತ್ತದೆ. ಕೆಲ ದಿನಗಳಲ್ಲೇ ತನ್ನ ಯೋಗಕ್ಷೇಮವನ್ನು ನೋಡಿಕೊಳ್ಳುವವರು ಒಬ್ಬಳಲ್ಲ, ಇಬ್ಬರು, ತಾಯಿಯೊಂದಿಗೆ ತಂದೆಯೆಂಬ ದೈತ್ಯನೂ ಇದ್ದಾನೆ ಎಂಬ ತಿಳಿವು. ಒಂದೆರಡು ವರ್ಷಗಳು ಕಳೆದ ಮೇಲಂತೂ ಇನ್ನೊಂದು ಆಘಾತ, ತಂದೆ ತಾಯಿಗಳ ಮೇಲೆ ತನಗೊಬ್ಬನಿಗೆ ಮಾತ್ರ ಅಧಿಕಾರವಿಲ್ಲ, ಅವರ ಪ್ರೇಮ-ಮಮತೆಯಲ್ಲಿ ಪಾಲುಗೊಳ್ಳಲು ಈ ಕುಟುಂಬದಲ್ಲಿ ಇನ್ನೂ ಕೆಲವು ಇತರ ಮಕ್ಕಳಿದ್ದಾರೆ ಎಂಬ ನೈಜಸ್ಥಿತಿಯ ಅರಿವು. ತಂದೆ ತಾಯಿಗಳ ಪೂರ್ಣ ಪ್ರೇಮವನ್ನು ಅನುಭವಿಸುವುದು ತನ್ನ ಜನ್ಮ-ಸಿದ್ಧ ಹಕ್ಕು ಎಂದು ಭಾವಿಸಿದ ಮಗುವಿಗೆ ಇದೊಂದು ವಿಷಮ ಸ್ಥಿತಿ. ತನ್ನ ಸಹೋದರ-ಸಹೋದರಿಯರೆಲ್ಲಾ ಪ್ರತಿಸ್ಪರ್ಧಿಗಳು ಎಂಬ ಮನೋಭಾವ ಬೆಳೆಯಲು ಪ್ರಾರಂಭವಾಗುತ್ತದೆ. ಇದರ ನಂತರ ಇನ್ನೊಂದು ಕಟುಸತ್ಯದ ಅರಿವು-ಮನೆಯಲ್ಲಿ ತಾನು ಕೇಂದ್ರ ಬಿಂದು ಆಗಿರಬಹುದು, ಎಲ್ಲಾ ಪ್ರೀತಿಯೂ ತನಗೆ ಸಿಗಬಹುದು. ಕುಟುಂಬದಲ್ಲಿ ತಾನು ಪ್ರತಿಯೊಬ್ಬರ ಕಣ್ಮಣಿಯಾಗಿದ್ದರೂ ಸುತ್ತುಮುತ್ತಲಿನ ನೆರೆಹೊರೆಯವರಿಗೆ ತಾನು ಮುಖ್ಯ ವ್ಯಕ್ತಿಯಲ್ಲ. ಅವರಿಂದ ನಾನು ಅನನ್ಯ ಪ್ರೀತಿಯನ್ನು ನಿರೀಕ್ಷಿಸುವಂತಿಲ್ಲ. ಶಾಲೆಯ ಮೊದಲ ದಿನವಂತೂ ಮಗುವಿನ ಭ್ರಮಾ-ಲೋಕವನ್ನು ನುಚ್ಚುನೂರುಗೊಳಿಸುತ್ತದೆ. ತನಗಿಂತಲೂ ಚೆನ್ನಾದ, ಪ್ರೀತಿಪಾತ್ರರಾದ ಇತರರೂ ಇದ್ದಾರೆ, ಇತರ ನೂರು ಮಂದಿಯಲ್ಲಿ ತಾನೂ ಒಬ್ಬ ಎಂಬ ವಾಸ್ತವಸ್ಥಿತಿಯ ಅರಿವು ಉಂಟಾಗುವುದು ಶಾಲಾವಾತಾವರಣದಲ್ಲಿ. ಹೀಗೆ ಮಗು, ಹಂತಹಂತವಾಗಿ ತನ್ನ ಕೇಂದ್ರ ಸ್ಥಾನವನ್ನು ಕಳೆದುಕೊಂಡು ವಾಸ್ತವಸ್ಥಿತಿಯನ್ನು ಅರಿತುಕೊಳ್ಳಬೇಕಾಗುತ್ತದೆ. 'ಸರ್ವ-ಶಕ್ತ' ಭ್ರಮೆಯಿಂದ ಮುಕ್ತವಾಗುವುದು ಮಗುವಿಗಂತೂ ಅತಿ ಹಿಂಸಾತ್ಮಕವಾದ ಪ್ರಕ್ರಿಯೆ.

## ಮಗು ಹಾಗೂ ಪ್ರೌಢವ್ಯಕ್ತಿ ಇವರೊಳಗಣ ವ್ಯತ್ಯಾಸಗಳು

ಮಗುವಿಗೆ ತಾನೇ ಸೃಷ್ಟಿಸಿದ ಕಲ್ಪನಾಲೋಕ ಪ್ರಿಯವಿದೆ. ಮಗುವೊಂದು ಪ್ರೌಢವ್ಯಕ್ತಿಯಂತೆ ಯೋಚಿಸುವ ಸಾಧ್ಯತೆಗಿಂತಲೂ, ಪ್ರೌಢವ್ಯಕ್ತಿ ಮಗುವಿನಂತೆ ವರ್ತಿಸುವ ಸಾಧ್ಯತೆ ಹೆಚ್ಚು ಎಂಬುದನ್ನು ನಾವು ಸುಲಭವಾಗಿ ಅರ್ಥಮಾಡಿಕೊಳ್ಳಬಹುದು. ಮಕ್ಕಳಿಗೆ 'ಲಾರಿ' ಎಂಬ ವಸ್ತು ಬಹು ದೊಡ್ಡ ಕಾರು ಅಷ್ಟೆ. ಲಾರಿಯನ್ನು ಉಪಯೋಗಿಸುವುದು ಸಾಮಗ್ರಿ ಸಾಗಾಣಿಕೆಗೆ, ಜನರನ್ನು ಕೊಂಡೊಯ್ಯಲು ಕಾರಿನ ಬಳಕೆ ಎಂಬ ವಿಷಯವನ್ನು ತಿಳಿದುಕೊಳ್ಳಲು ಮಗುವಿಗೆ ಕೆಲ ಕಾಲ ಬೇಕಾಗುತ್ತದೆ. ತಂದೆ ತಾಯಿಗಳು, ಅಧ್ಯಾಪಕರು ಮಾಡಬಹುದಾದ ದೊಡ್ಡ ತಪ್ಪೆಂದರೆ ಮಕ್ಕಳನ್ನು ಚಿಕ್ಕ ದೇಹದ ಪ್ರೌಢವ್ಯಕ್ತಿಗಳು ಎಂದು ಭಾವಿಸುವುದು. ಮಕ್ಕಳ ಯೋಚನಾ ರೀತಿ, ವಯಸ್ಕರಿಗಿಂತ ಭಿನ್ನ. ಅವರ ಸಮಸ್ಯೆಗಳು ವಿಶಿಷ್ಟ. ಮಕ್ಕಳು ಕೇಳುವ ಪ್ರಶ್ನೆಗಳು ನಮಗೆ ಕೆಲವೊಮ್ಮೆ ಬಾಲಿಶವಾಗಿ ಕಂಡು ಬಂದು, ನಾವು ಅವರನ್ನು ಗದರಿಸುವುದುಂಟು. ಆದರೆ ಈ ಬಾಲಿಶ ಪ್ರಶ್ನೆಗಳೇ, ಮಕ್ಕಳಿಗೆ ಅತ್ಯಂತ ಮುಖ್ಯ ಸಮಸ್ಯೆಗಳಾಗಿ ಕಾಣಿಸುತ್ತವೆ ಎಂದುದನ್ನು ಮರೆಯಬಾರದು. ತನ್ನ ಪ್ರಶ್ನೆಗಳಿಗೆ ತೃಪ್ತಿಕರವಾದ ಉತ್ತರಗಳು ದೊರೆಯದಿದ್ದಾಗ, ಉತ್ತರ ಕೊಡದೆ ತನ್ನನ್ನು ಗೇಲಿ ಮಾಡಿದಾಗ, ಮಕ್ಕಳಲ್ಲಿ ಕೀಳರಿಮೆ ಪ್ರಾರಂಭವಾಗಬಹುದು, ತನ್ನನ್ನು ಯಾರೂ ಗಣನೆಗೆ ತೆಗೆದುಕೊಳ್ಳುವುದಿಲ್ಲ ಎಂದು ಬೇಸರಪಡುವ ಸಾಧ್ಯತೆ ಇದೆ. ಮಕ್ಕಳು ಮಕ್ಕಳಂತೆ ಇದ್ದರೆ ಚೆನ್ನ, ಮಕ್ಕಳನ್ನು ಪ್ರೌಢವ್ಯಕ್ತಿಗಳಂತೆ ಗಣಿ

ಸುವುದು ತರವಲ್ಲ. ಮಗುವೊಂದು, ಚಿಕ್ಕ ದೇಹದ ಮೀಸೆಯಿಲ್ಲದ ಪ್ರೌಢವ್ಯಕ್ತಿಯಲ್ಲ.

ಮಗು ಪರಾವಲಂಬಿ, ಅಸಹಾಯಕ. ಬೆಳೆಯುತ್ತಾ ಸಾಗಿದಂತೆ, ಈ ಅವಲಂಬನ ಅಸಹಾಯಕತೆ ಕಡಿಮೆಯಾಗುತ್ತಾ ಹೋಗುತ್ತದೆಯಾದರೂ ಎಷ್ಟೋ ವಿಷಯಗಳಲ್ಲಿ ಅದು ತನ್ನ ತಂದೆ ತಾಯಿಗಳನ್ನು ಅವಲಂಬಿಸಿ ಇರಬೇಕಾಗುತ್ತದೆ. ಈ ಅವಲಂಬನೆ, ತಾನು ಇತರರಿಗೆ ಬೇಕಾದವನು ಎಂಬ ಭಾವನೆಯನ್ನು ಮಗುವಿನಲ್ಲಿ ಮೂಡಿಸುತ್ತದೆ. ವಯಸ್ಕರು ಅಲ್ಪ ವಿಷಯವೆಂದು ನಿರ್ಲಕ್ಷಿಸಬಹುದಾದ ಸಂಗತಿಗಳು ಮಗುವಿನಲ್ಲಿ ಹಲವು ಪ್ರಶ್ನೆಗಳನ್ನು, ಸಮಸ್ಯೆಗಳನ್ನು ಹುಟ್ಟಿಸಬಹುದು. ವಯಸ್ಕರಿಗೆ ತಮ್ಮ ಮನೋಭಾವಗಳನ್ನು ಹಿಡಿತದಲ್ಲಿರಿಸಲು, ಮುಚ್ಚಿಡಲು ಸಾಧ್ಯ, ಆದರೆ ಮಕ್ಕಳಿಗೆ ಇದು ಅಸಾಧ್ಯ. ಮಕ್ಕಳ ಮನೋಭಾವಗಳೆಲ್ಲಾ ಕೂಡಲೇ ಪ್ರಕಟವಾಗುತ್ತವೆ. ಆದುದರಿಂದ ಮಕ್ಕಳಿಂದ ನಾಗರಿಕ 'ಸಭ್ಯತೆ'ಯನ್ನು ನಿರೀಕ್ಷಿಸುವಂತಿಲ್ಲ. ವಯಸ್ಕರು ಕೋಪದಿಂದ ಕುದಿಯುತ್ತಿದ್ದರೂ, ನಗುಮೊಗದ ಪರದೆಯನ್ನು ಧರಿಸಬಹುದು. ಮಕ್ಕಳಿಗೆ ಇಂತಹ ನಟನೆ, ವಿವಿಧ ವೇಷಗಳು ಅಸಾಧ್ಯ. ಮಕ್ಕಳಿಗೆ ಕೋಪ ಬಂದರೂ ಅದು ಕೆಲವು ಕ್ಷಣಗಳ ತನಕ ಮಾತ್ರ. ಮರುಕ್ಷಣವೇ ಏನೂ ಆಗವಿಲ್ಲವೆಂಬಂತೆ ಅದು ಸಂತೋಷದಿಂದ ಕೇಕೆ ಹಾಕಿ ನಲಿದಾಡುತ್ತಿರುವುದು ಅಪರೂಪವಲ್ಲ. ವಯಸ್ಕರು ಹತ್ತು ದಿನಗಳ ತನಕ ತೊಳಲಾಡ ಬಹುದಾದ ಮಾನಸಿಕ ವಿಕಾರಗಳಿಂದ ಮಕ್ಕಳು ಬಹು ಬೇಗನೇ ಮುಕ್ತರಾಗುತ್ತಾರೆ. ಅದಕ್ಕಾಗಿಯೇ ಮಕ್ಕಳು ಮುಗ್ಧ ಜೀವಿಗಳು, ಅದರಿಂದ ವಯಸ್ಕರು ಕಲಿಯಬೇಕಾದುದು ಬೇಕಾದಷ್ಟಿದೆ.




## ಅಸ್ಪಷ್ಟ ರೀತಿ

ಕೆಲವೊಮ್ಮೆ ತನ್ನ ತಂದೆ ತಾಯಿಗಳ ವರ್ತನೆ ಮಗುವಿಗೆ ಸಮಸ್ಯಾತ್ಮಕ. ತಾನು ಸಂತೋಷದಿಂದ ಕೇಕೆ ಹಾಕಿದಾಗ ಕೆಲವೊಮ್ಮೆ ತಂದೆ ತಾಯಿಗಳಿಗೆ ಆನಂದವಾದರೆ, ಕೆಲವೊಮ್ಮೆ ಮುಖ ಸಿಂಡರಿಸಿ 'ಸುಮ್ಮನೆ ಬಿದ್ದುಕೊ' ಎನ್ನುತ್ತಾರಲ್ಲ ಎಂಬ ಸಂದಿಗ್ಧ ಸಮಸ್ಯೆ ಮಗುವಿಗೆ ಹುಟ್ಟುತ್ತದೆ. ತಾನು ನಲಿದಾಡಿದರೆ ತಂದೆ ತಾಯಿಗೂ ಸಂತೋಷವಾಗುತ್ತದೆ ಎಂದು ಈ ವರೆಗೆ ತಿಳಿದಿದ್ದ ಮಗುವಿಗೆ, ಈ ಪ್ರತಿಕ್ರಿಯೆಯನ್ನು ಅರ್ಥಮಾಡಿಕೊಳ್ಳುವುದು ಕಷ್ಟವಾಗುತ್ತದೆ. ೨-೪ ವರ್ಷಗಳ ವರೆಗೆ ಈ ಸಮಸ್ಯೆಯಲ್ಲಿ ತೊಳಲಾಡಬಹುದು. ತಾನು ಅತ್ತರೂ ಗದರಿಕೆ, ನಕ್ಕು ನಲಿದಾಡಿದರೂ ಗದರಿಕೆ, ಇದೇನು ವಿಚಿತ್ರ ಲೋಕವಪ್ಪಾ ಎಂದು ಮಗು ಭಾವಿಸುತ್ತಿರಬೇಕು. ಮೊದಮೊದಲು ತಾಯಿ ತನ್ನನ್ನು ಅವಿರತವಾಗಿ ಪ್ರೀತಿಸುತ್ತಿದ್ದಳಾದರೂ, ಕಾಲಕ್ರಮೇಣ ಈ ಪ್ರೇಮವೂ ತನ್ನ ವರ್ತನೆಯನ್ನು ಅವಲಂಬಿಸಿರುತ್ತದೆ ಎಂಬುದನ್ನು ಮಗು ಅರಿಯುತ್ತದೆ. ತನ್ನ ಕೆಲವೊಂದು ವರ್ತನೆಗಳು ತಾಯಿಗೆ

ಸರಿಹೋಗುವುದಿಲ್ಲ, ತಾನು ಕೆಲವು ವಸ್ತುಗಳನ್ನು ಮುಟ್ಟಬಾರದು, ಆಟದ ವಸ್ತುಗಳನ್ನು ಚೆಲ್ಲಾಪಿಲ್ಲಿಯಾಗಿಸಬಾರದು ಎಂಬ ತಿಳುವಳಿಕೆಯೂ ಮೂಡುತ್ತದೆ. ತಾಯಿಯನ್ನು ಸಂತೋಷಗೊಳಿಸಲು ತಾನು ಅಳಬಾರದು ಚೆನ್ನಾಗಿ ವರ್ತಿಸಬೇಕು, ಚೂಟಿಯಾಗಿರಬೇಕು ಎಂಬ ಉಪಾಯಗಳನ್ನು ಅರಿತು ಮಗು ಅವುಗಳನ್ನು ಪ್ರಯೋಗಿಸಲು ಪ್ರಾರಂಭಿಸುತ್ತದೆ.

ಅತಿ ಚಿಕ್ಕ ವಯಸ್ಸಿನಲ್ಲಿ ಮಗುವಿನ ಯೋಚನಾ ರೀತಿ ಅಸ್ಪಷ್ಟ. ಕಾಲಕ್ರಮೇಣ ಅದರ ಮಾನಸಿಕ ಚಿತ್ರಗಳು ಸ್ಪಷ್ಟವಾಗುತ್ತಾ ಹೋಗುತ್ತವೆ. ತಮ್ಮಿಂದ ಹೊರತಾದ ವಸ್ತುಗಳನ್ನು ಮಕ್ಕಳು ಹೇಗೆ ಅವಲೋಕಿಸುತ್ತವೆ ಎಂಬುದನ್ನು ವಿವರಿಸಲು ಎರಿಕ್ ಬರ್ನ್ ಉದಾಹರಣೆಯೊಂದನ್ನು ಕೊಟ್ಟಿದ್ದಾನೆ–ನಡೆಯಲು ಕಲಿಯುವ ಮಗುವಿಗೆ, ಸಾಮಾನುಗಳನ್ನು ಅತ್ತಿತ್ತ ಚೆಲ್ಲಾಪಿಲ್ಲಿಗೊಳಿಸುವ ಚಪಲ ಹೆಚ್ಚು. ಈಗ ತಾನೇ ನಾಲ್ಕು ಹೆಜ್ಜೆಗಳನ್ನು ಇಡುವ ಪಪ್ಪುವಿಗೆ ಮೇಜಿನ ಮೇಲಿದ್ದ ನಸುನೀಲಿ ಬಣ್ಣದ ಬೂದಿಕುಂಡ ಆಕರ್ಷಣೀಯವಾಗಿ ಕಾಣುತ್ತದೆ. ಕೂಡಲೇ ಬೂದಿ ಕುಂಡವನ್ನು ಕೆಳಬೀಳಿಸಿ ಅದರೊಡನೆ ಆಟವಾಡುತ್ತಿದೆ. ನೆಲದ ಮೇಲೆ ಹರಡಿದ ಸಿಗರೇಟು ಬೂದಿಯನ್ನು ಕಂಡು ಅಮ್ಮ, ಬೂದಿ ಕುಂಡವನ್ನು ಮುಟ್ಟಬಾರದೆಂದು ಪಪ್ಪುವನ್ನು ಗದರಿಸುತ್ತಾಳೆ. ಬೂದಿ ಕುಂಡದಲ್ಲಿ ಬೂದಿಯಿದೆ, ಆದುದರಿಂದ ಅದನ್ನು ಮಗು ಮುಟ್ಟಬಾರದು ಎಂಬ ವಿಷಯ ತಾಯಿಗೆ ಮುಖ್ಯವಾದರೆ, ಬೂದಿ ಕುಂಡದ ಬಣ್ಣ ಪಪ್ಪುವನ್ನು ಆಕರ್ಷಿಸುತ್ತದೆ. ತಾನು ನಸುನೀಲಿ ಬಣ್ಣದ ವಸ್ತುಗಳನ್ನು ಮುಟ್ಟಿದರೆ ಅಮ್ಮನಿಗೆ ಕೋಪ ಬರುತ್ತದೆ ಎಂದು ಪಪ್ಪು ಭಾವಿಸುತ್ತಾನೆ. ಮರುದಿನ ಪಪ್ಪು ಮೇಜಿನ ಮೇಲಿದ್ದ ಕೆಂಪು ಬಣ್ಣದ ಬೂದಿ ಕುಂಡವನ್ನು ಕೆಳಬೀಳಿಸುತ್ತಾನೆ. ಮಗು ಹಟಮಾರಿಯಾಗುತ್ತಿದ್ದಾನೆ, ಹೇಳಿದ ಮಾತನ್ನು ಕೇಳುವುದಿಲ್ಲ ಎಂಬುದು ಅಮ್ಮನ ಸಮಸ್ಯೆಯಾದರೆ ತಾನು ಆ ನಸು ನೀಲಿ ಬಣ್ಣದ ವಸ್ತುವನ್ನು ಮುಟ್ಟದಿದ್ದರೂ ಅಮ್ಮ ನನ್ನನ್ನು ವಿನಾಕಾರಣವಾಗಿ ಗದರಿಸುತ್ತಿದ್ದಾಳಲ್ಲಾ ಎಂಬುದು ಪಪ್ಪುವಿನ ಸಮಸ್ಯೆ. ಅಮ್ಮನ ಈ ವರ್ತನೆ ವಿಲಕ್ಷಣವಾಗಿ ಕಾಣುವುದು ಸಹಜವೇ. ನೋಡು. ಇದು ಬೂದಿ, ಈ ಆಕಾರದ ಸಾಮಾನುಗಳು ಇರುವುದು ಬೂದಿಯನ್ನು ಹಾಕಲು, ಆದುದರಿಂದ ಇಂತಹ ವಸ್ತುಗಳನ್ನು ಕೆಳಬೀಳಿಸಬಾರದು ಎಂದು ತನ್ನ ಇಂಗಿತವನ್ನು ಮಗುವಿಗೆ ವಿವರಿಸಿದರೆ ತಾನೇ ಮಗುವಿಗೆ ತನ್ನ ತಪ್ಪಿನ ಮನವರಿಕೆಯಾಗಬಹುದು. ಆದುದರಿಂದ ಬೂದಿ ಕುಂಡವೆಂದರೆ ಈ ನಸುನೀಲಿ ಅಥವಾ ಕೆಂಪು ಬಣ್ಣದ ಆಟದ ವಸ್ತುವಲ್ಲ ಎಂಬ ವಿಷಯವನ್ನು ಪಪ್ಪು ಅರಿತು, ನಂತರ ಅದನ್ನು ಮುಟ್ಟಲಾರದು. ತನ್ನ ಸುತ್ತಮುತ್ತ ಇರುವ ವಸ್ತುಗಳನ್ನು ಹಿರಿಯರು ನೋಡುವ ದೃಷ್ಟಿ ಬೇರೆ, ಕಿರಿಯರು ನೋಡುವ ದೃಷ್ಟಿ ಬೇರೆ.

ಆದುದರಿಂದ ಮಗುವಿನ ಈ ಸಂದಿಗ್ಧ ಸ್ಥಿತಿಯನ್ನು ಅರ್ಥಮಾಡಿಕೊಳ್ಳದೆ, ವಿನಾಕಾರಣ ಮಗುವನ್ನು ಶಿಕ್ಷಿಸಿದರೆ, ಗದರಿಸಿದರೆ, ಮಗುವಿಗೆ ಹಿರಿಯರ ವರ್ತನೆಯೇ ಸಮಸ್ಯಾತ್ಮಕವಾಗಬಹುದು. ತಾಯಿಯ ಮನಸ್ಸನ್ನು ಅರ್ಥಮಾಡಿಕೊಳ್ಳದ ಮಗು ಸ್ವೇಚ್ಛೆಯಾಗಿ ವರ್ತಿಸುವ ಸಾಧ್ಯತೆ ಇದೆ. ಇದರೊಂದಿಗೆ ತಾಯಿಯ ಬಗ್ಗೆ ಭಯಮೂಡುವುದು ಅಸಾಧ್ಯವೇನಲ್ಲ. ಭಯದಿಂದ ಕೂಡಿದ ಮಗು ಸ್ವೇಚ್ಛೆಯಾಗಿ ನಲಿದಾಡುವುದಾದರೂ ಹೇಗೆ? ಮಕ್ಕಳಿಗೆ ಬದುಕೆಲ್ಲಾ ಆಶ್ಚರ್ಯಕರ ಘಟನೆಗಳಿಂದ ಕೂಡಿದೆ. ಬರಹವನ್ನು ಪ್ರಥಮ ಬಾರಿಗೆ ನೋಡಿದಾಗ, ಮಗುವಿಗೆ ಅದೆಷ್ಟು ಆಶ್ಚರ್ಯವಾಗಿರಬಹುದು. ತಾಯಿ ಪುಸ್ತಕವನ್ನು ತೆರೆದು 'ಬೆಕ್ಕು' ಎಂಬ ಪದವನ್ನು ತೋರಿಸಿ, "ಇದು ಬೆಕ್ಕು"ಎಂದಾಗ ಪಪ್ಪುವಿಗೆ ಅತ್ಯಾಶ್ಚರ್ಯವಾಗಬಹುದು. ಈ ತನಕ ಬೆಕ್ಕು ಎಂದರೆ ಮಿಯಾಂ, ಮಿಯಾಂ ಎನ್ನುತ್ತಾ ಅತ್ತಿತ್ತ ಓಡಾಡುವ ಒಂದು ವಿಚಿತ್ರ ವಸ್ತು ಎಂದು ತಿಳಿದ ಪಪ್ಪುವಿಗೆ ಬಿಳಿಹಾಳೆಯಲ್ಲಿರುವ ಬರೆದಿರುವ ಕಪ್ಪು ವಕ್ರ ರೇಖೆಗಳು ಬೆಕ್ಕು ಆಗಲು ಹೇಗೆ ಸಾಧ್ಯ ಎಂಬುದು ಒಂದು ಗಂಭೀರ ಪ್ರಶ್ನೆ. ಮಕ್ಕಳು ಸಹ ನಮ್ಮಂತೆಯೇ ಯೋಚಿಸುತ್ತವೆ, ಆದೂ

ನಮ್ಮ ನೈತಿಕಮೌಲ್ಯಗಳನ್ನು, ನಾಗರಿಕ ಸಭ್ಯತೆಯನ್ನು ಅರಿತುಕೊಳ್ಳುತ್ತದೆ ಎಂಬ ಭಾವನೆ, ವಯಸ್ಕರು ಮಾಡಬಹುದಾದ ದೊಡ್ಡ ತಪ್ಪು. ತನ್ನ ಗುಪ್ತಾಂಗಗಳನ್ನು ಮುಟ್ಟಬಾರದು, ತಾನು ಶುಚಿಯಾಗಿರಬೇಕೆಂಬ ಸಭ್ಯತೆಯ ನಿಯಮಗಳ ಅರಿವು ಮಕ್ಕಳಿಗಿರುವುದಿಲ.

## ಮಗುವಿದ್ದಾಗ ಸಿಕ್ಕಿದ್ದನ್ನು ....

ತನ್ನ ಬಾಲ್ಯದಲ್ಲಿ ಮಗು ಪ್ರತಿ ಅಗತ್ಯಗಳಿಗೂ ಇತರರನ್ನು ಅವಲಂಬಿಸಿರಬೇಕಾಗುತ್ತದೆ. ತನ್ನ ಅಗತ್ಯಗಳನ್ನು ತಿಳಿಸುವ ರೀತಿಯೂ ಅದಕ್ಕೆ ತಿಳಿದಿರುವುದಿಲ್ಲ. ತಾನು ಅತ್ತರೆ, ಯಾರಾದರೂ ಬಂದು ತನ್ನ ಅಗತ್ಯಗಳನ್ನು ಪೂರೈಸುತ್ತಾರೆ ಎಂಬ ವಿಷಯ ಅದಕ್ಕೆ ಅನುಭವದಿಂದ ತಿಳಿಯುತ್ತದೆ. ತಾಯಿಯ ಸ್ತನ್ಯಪಾನವೇ ಮಗುವಿನ ಪ್ರಥಮ ಸಾಮಾಜಿಕ ಕಾರ್ಯ, ಅಂದರೆ ತನ್ನ ಹಿತಕ್ಕಾಗಿ ಪರರನ್ನು ಅವಲಂಬಿಸುವ ಸ್ಥಿತಿ. ತಾಯಿಯ ಮೊಲೆಹಾಲು ಮಗುವಿನ ದೈಹಿಕ ಬೆಳವಣಿಗೆಗೆ ಮಾತ್ರವಲ್ಲದೆ, ಅದರ ಮಾನಸಿಕ ಆರೋಗ್ಯಕ್ಕೆ ಅತ್ಯಗತ್ಯ. ತಾಯಿಯ ಮೃದು ಸ್ಪರ್ಶ, ಅಪ್ಪುಗೆ, ಆಕಾಂಕ್ಷೆಯಿಂದ ಕೂಡಿದ ಮಗುವಿನಲ್ಲಿ ಸುರಕ್ಷಿತ ಭಾವವನ್ನು ಹುಟ್ಟಿಸುತ್ತದೆ. ತಾಯಿಯ ಅಪ್ಪುಗೆಯನ್ನು ಅನುಭವಿಸದ ಮಗುವಿನ ಮಾನಸಿಕ ಬೆಳವಣಿಗೆ ಕುಂಠಿತವಾಗಬಹುದು. ತನ್ನ ಶೈಶವ ಸ್ಥಿತಿಯಲ್ಲಿ ತಾಯಿಯ ಮೊಲೆಹಾಲನ್ನು ತೃಪ್ತಿಕರವಾಗಿ ಹೀರಿ ಸುಖಿಸದ ಮಗು, ಬೆಳೆದಾಗ ತನ್ನ ಬೆರಳನ್ನು ಚೀಪುತ್ತಾ, ವಯಸ್ಕನಾದಾಗ ಸಿಗರೇಟನ್ನು, ಶರಾಬು ಬಾಟ್ಲಿಯನ್ನು ಚೀಪುತ್ತಾ, ತನ್ನ ಅತೃಪ್ತ ಆಸೆಗಳನ್ನು ಪರಿಹರಿಸುತ್ತದೆ ಎಂದು ಎರಿಕ್ ಬರ್ನ್ ಅಭಿಪ್ರಾಯ ಪಡುತ್ತಾನೆ. ಚಿಕ್ಕಂದಿನಲ್ಲಿ ತನ್ನ ಬಾಯಿಯನ್ನು ತೃಪ್ತಿಪಡಿಸಲಾಗದ ಮಗು ದೊಡ್ಡವನಾದ ನಂತರವಾದರೂ ತೃಪ್ತಿಯನ್ನು ಪಡೆಯಬೇಕಲ್ಲವೇ?

ತನ್ನ ಕೋಪವನ್ನು ವ್ಯಕ್ತಪಡಿಸಲೂ ಮಗು ಹಲವು ವಿಧಾನಗಳನ್ನು ಉಪಯೋಗಿಸುತ್ತದೆ. ತಾನು ಸೇವಿಸಿದ ಆಹಾರವನ್ನು ಜೀರ್ಣಿಸಿಕೊಳ್ಳಲು ಅದು ನಿರಾಕರಿಸಬಹುದು. ಕೆಲವೊಮ್ಮೆ ತನ್ನ ದೇಹ ನೀಲಿ ಬಣ್ಣಕ್ಕೆ ತಿರುಗುವವರೆಗೆ ಮಗು ಉಸಿರನ್ನು ಕಟ್ಟುತ್ತದೆ. ಸಿಕ್ಕಿದ ವಸ್ತುಗಳನ್ನು ಕಚ್ಚುವುದೂ ಮಗುವಿನಲ್ಲಿರುವ ಸಿಟ್ಟಿನ ಚಿಹ್ನೆಯಾಗಬಹುದು. ತನಗೆ ಅಹಿತವೆಂದು ಕಂಡು ಬರುವ ವಸ್ತುಗಳನ್ನೆಲ್ಲಾ ಮಗು 'ತಿಂದು' ಬಿಡುತ್ತದೆ. ಆದುದರಿಂದಲೇ ವಸ್ತುಗಳನ್ನು ಕಚ್ಚುವ ಹವ್ಯಾಸ.

ಇತರರೊಡನೆ ಹೇಗೆ ವರ್ತಿಸಬೇಕೆಂಬ ರೀತಿ ನಿಯಮಗಳು ಹುಟ್ಟಿನಿಂದಲೇ ಮಗುವಿಗೆ ತಿಳಿದಿರುವುದಿಲ್ಲ, ಬೆಳೆಯುತ್ತಾ ಅವನ್ನು ಕಲಿತುಕೊಳ್ಳಬೇಕಷ್ಟೇ. ಒಂದು ಸನ್ನಿವೇಶದಲ್ಲಿ ಇತರರು ವರ್ತಿಸುವ ರೀತಿಯನ್ನು ತಾನೂ ಅನುಸರಿಸುತ್ತದೆ. ಮೊದಲ ಎರಡು ವರ್ಷಗಳ ಕಾಲ, ಮಗು ತನ್ನ ಶರೀರವನ್ನೇ ಅರಿತುಕೊಳ್ಳುವ ಕಾರ್ಯದಲ್ಲಿ ನಿರತವಾಗಿರುವುದರಿಂದ



ನನಗೂ ನಿನ್ನಷ್ಟೆ ಮಾರ್ಕು ಅಜ್ಜಾ !!

ಬಾಹ್ಯವರ್ತನೆಯ ಬಗ್ಗೆ ಅದು ಗಮನವೀಯು ಲಾರದು. ಇಂತಹ ವಿಷಯಗಳ ಬಗ್ಗೆ ತಲೆ ಕೆಡಿಸಿಕೊಳ್ಳುವ ಅಗತ್ಯವೂ ಅದಕ್ಕಿಲ್ಲ. ಯಾಕೆಂದರೆ ತನಗೆ ಬೇಕಾದ್ದೆಲ್ಲಾ, ತನ್ನ ಅಪೇಕ್ಷೆಯಂತೆ ಆ ಕೂಡಲೆ ದೊರೆಯುತ್ತದೆ, ಆದರೆ ಈ ಸೌಲಭ್ಯ ಗಳು ತನ್ನಿಂದ ತಾನೇ ಒದಗಿಬರಲಾರವು. ತನಗೆ ಬೇಕಾದುದೆಲ್ಲಾ ದೊರೆಯಬೇಕಾದರೆ, ತಂದೆ ತಾಯಿಗಳ ಅಪೇಕ್ಷೆಯಂತೆ ತಾನು ವರ್ತಿಸ ಬೇಕು, ಎಂಬ ವಿಚಾರ ಮಗುವಿಗೆ ಹೊಳೆಯು ತ್ತದೆ. `ತನ್ನ ತಂದೆ ತಾಯಿಗಳು ಪರಸ್ಪರ ವಾಗಿ ಹೇಗೆ ಹೊಂದಿಕೊಳ್ಳುತ್ತಾರೆ ಎಂಬು ದನ್ನು ಮಗು ತನ್ನ ೩–೫ನೇ ವಯಸ್ಸಿನಲ್ಲಿ ಅವಲೋಕಿಸಿ, ಅವರನ್ನೇ ಅನುಸರಿಸುತ್ತದೆ. ತಂದೆ ತಾಯಿಗಳೇ ಮಗುವಿನ ಮೊದಲ ಶಿಕ್ಷಕ ರಾಗಿರುವುದರಿಂದ, ಸಾಮಾಜಿಕ ಸಭ್ಯತೆಯ ಪಾಠಗಳನ್ನು ಮಗು ಅವರಿಂದಲೇ ಕಲಿಯು ತ್ತದೆ. ತಂದೆ ತಾಯಿಗಳು ಸದಾ ಜಗಳ ಮಾಡುತ್ತಾ, ಪರಸ್ಪರ ದೂಷಣೆಯಲ್ಲಿ ನಿರತ ರಾದರೆ, ಬೆಳದಾಗ ಆ ಮಗುವೂ ಜಗಳದಲ್ಲಿ ನಿರತವಾಗುವ ಸಂಭವ ಹೆಚ್ಚು. ಜಗಳದ ಮೂಲಕ ಸ್ವಾರ್ಥಸಾಧನೆಯ ಮೂಲಕ ಇತರರೊಡನೆ ಸಂಬಂಧ ಸಾಧ್ಯ ಎಂಬ ತತ್ವವನ್ನು ಅದು ರೂಪಿಸುತ್ತದೆ. ತಂದೆ ತಾಯಿಗಳು ಸ್ನೇಹ ಸೌಹಾರ್ದದಿಂದ ವರ್ತಿಸಿದರೆ, "ಬದುಕಬೇಕಾದರೆ ಸ್ನೇಹ ಸೌಹಾರ್ದಗಳು ಅತ್ಯಗತ್ಯ" ಎಂದು ಮಗು ಅರಿಯುತ್ತದೆ. ಮಗುವಿನ ಭವಿಷ್ಯ ಅದರ ಒಳಿತು ಕೆಡುಕುಗಳು, ಜೀವನ ದೃಷ್ಟಿ, ತಂದೆ ತಾಯಿಗಳ ವರ್ತನೆಯನ್ನು ಅವಲಂಬಿಸಿದೆ. ಮೂಲಭೂತವಾಗಿ ಮಗು ಸ್ವಾರ್ಥಿ. ಎಲ್ಲರೂ ಎಲ್ಲವೂ ಇರುವುದೇ ತನಗಾಗಿ ಎಂಬ ಮನೋ ಭಾವ ಮಗುವಿನಲ್ಲಿ ಹುದುಗಿರುತ್ತದೆ. ಈ ಪ್ರವೃತ್ತಿಯನ್ನು ತ್ಯಜಿಸದಿದ್ದಲ್ಲಿ, ಮಗು ಬೆಳೆ ದಾಗ ಅದರ ಬಾಳು ನರಕವಾಗುತ್ತದೆ. ಸ್ವಾರ್ಥ ದಿಂದ ಮುಕ್ತವಾಗಿ, ನಿಸ್ವಾರ್ಥಜೀವನವನ್ನು ರೂಢಿಸಿ ಕೊಂಡರೆ ಮಾತ್ರ, ಇಂದಿನ ಮಗು ನಾಳೆಯ ಯೋಗ್ಯ ವ್ಯಕ್ತಿಯಾಗಿ, ಮುಂದೆ ತನ್ನ ಮಕ್ಕಳನ್ನೂ ಯೋಗ್ಯವ್ಯಕ್ತಿಗಳನ್ನಾಗಿ ರೂಪಿಸು ವುದು ಸಾಧ್ಯ. 

ಸುಪ್ರಸಿದ್ಧ ಗಾಂಧೀವಾದಿ ಗುಜರಾತೀ ಕವಿ ಝವೇರಚಂದ ಮೇಘಾಣೀಯವರ ಬಾಲ್ಯದಲ್ಲಿ ನಡೆದ ಘಟನೆ. ಝವೇರಚಂದರ ತಂದೆ ಒಬ್ಬ ಪೋಲೀಸ್ ಅಧಿಕಾರಿ. ಅವರು ಒಮ್ಮೆ ದೊಡ್ಡ ದೊಡ್ಡ ಸರಕಾರೀ ಅಧಿಕಾರಿಗಳ ಸನ್ಮಾನಾರ್ಥವಾಗಿ ಒಂದು ಮೇಜವಾನಿಯನ್ನು ಏರ್ಪಡಿಸಿದರು. ಅದಕ್ಕಾಗಿ ಸುತ್ತುಮುತ್ತ ಇರುವ ಹಳ್ಳಿಗಳಿಂದ ಹಾಲು ಸಂಗ್ರಹಿಸಲು ಆಜ್ಞೆ ಹೊರಡಿಸಿದ್ದರು. ಆಮಂತ್ರಿಸಲ್ಪಟ್ಟ ಅತಿಥಿಗಳು ಬಾಯಿ ಚಪ್ಪರಿಸುತ್ತ, ಹಾಲನ್ನು ಅಟ್ಟಿಸಿ ತಯಾರಿಸಿದ ಖೀರನ್ನು ತಿನ್ನುತ್ತಿದ್ದರು. ಆದರೆ ಬಾಲಕ ಝವೇರಚಂದರು ಖೀರು ತುಂಬಿದ ಬಟ್ಟಲಿಗೆ ಕೈಸಹ ಹಚ್ಚಿರಲಿಲ್ಲ.

ಅದಕ್ಕೆ ಕಾರಣವನ್ನು ಕೇಳಿದಾಗ ಕಣ್ಣಲ್ಲಿ ನೀರು ತಂದುಕೊಂಡ ಅವರು "ಖೀರು ನನ್ನ ಗಂಟಲಿನಲ್ಲಿ ಇಳಿಯುವದಿಲ್ಲ. ಹಾಲನ್ನು ಸಂಗ್ರಹಿಸಿದ ಜನರು ನನಗೆ ಹೇಳಿದುದೇನೆಂದರೆ ಇಂದು ಕರುಗಳಿಗೂ ಸಹ ಹಾಲು ಸಿಗಲಿಲ್ಲ. ಹಳ್ಳಿಗಳಲ್ಲಿಯ ಚಿಕ್ಕಮಕ್ಕಳಿಗೂ ಹಾಲು ಇಲ್ಲ. ಹೀಗಿರುವಾಗ ನಾನು ಈ ಖೀರನ್ನು ಹೇಗೆ ತಿನ್ನಲಿ?'' ಎಂದು ಹೇಳಿದರಂತೆ.

–ಗೋಪಿನಾಥ ಸವಣೂರ

ಒಬ್ಬನ ಕನಸು ಇಂದು
ವಿಶ್ವವಿಶಾಲ ವೃಕ್ಷವಾಗಿ ಬೆಳೆದಿದೆ

# ವೈ. ಎಂ. ಸಿ. ಎ.

**ಟಿ. ಎಂ. ಸುಬ್ಬರಾಯು**

೧೯ನೆಯ ಶತಮಾನದ ಮಧ್ಯಭಾಗದಲ್ಲಿ ಇಂಗ್ಲಂಡಿನಲ್ಲಿ ಸೇವಾಕಿಡಿಯೊಂದು ಹೊತ್ತಿಕೊಂಡು ಪ್ರಜ್ವಲಿಸಿತು. ಕೆಲವೇ ವರುಷಗಳಲ್ಲಿ ಅದರ ಜ್ವಾಲೆ ವಿಶ್ವದಾದ್ಯಂತ ವ್ಯಾಪಿಸಿತು.. ಆ ಸೇವಾ ಕಿಡಿಯೇ YMCA. ಲಂಡನ್ನಿನ ವ್ಯಾಪಾರಿ ಮಳಿಗೆಯೊಂದರಲ್ಲಿ ಜಾರ್ಜ್ ವಿಲಿಯಂ ಓರ್ವ ಸಹಾಯಕ ಜವಳಿ ವ್ಯಾಪಾರಿ. ಸಾತ್ವಿಕ ಸ್ವಭಾವದ ಯುವಕ. ತನ್ನಂತೆಯೇ ನೌಕರಿ ಅರಸಿ ನಗರಕ್ಕೆ ಬರುವ ಯುವಕರಿಗೆ ತಂಗಲು ಸರಿಯಾದ ತಾಣ ಸಿಗದೆ ಪರದಾಡುವ ಹಾಗೂ ಕೆಲಸವಿಲ್ಲದ ಬಿಡುವಿನ ಸಮಯವನ್ನು ನಿಷ್ಪ್ರಯೋಜಕವಾಗಿ ಕಳೆಯುವ ಬಗ್ಗೆ ಆತನಿಗೆ ಕೊರಗು. ಈ ಸಮಸ್ಯೆಯನ್ನು ಆತ ಪರಿಹರಿಸಲು ಕಾತುರನಾದ. ತಾನು ನೌಕರಿ ಮಾಡುತ್ತಿದ್ದ ಎಡೆಯಲ್ಲಿಯ ಕೆಲವು ಯುವ ಉತ್ಸಾಹಿಗಳನ್ನು ಸೇರಿಸಿ ಒಂದು ಪುಟ್ಟ ಗುಂಪು ಕಟ್ಟಿದ. ಆರಂಭದಲ್ಲಿ ಎಲ್ಲರೂ ಒಂದೆಡೆ ಸೇರಿ ಸಮೂಹ ಪ್ರಾರ್ಥನೆ ನಡೆಸುವುದು, ಕ್ರೈಸ್ತ ಧರ್ಮಗ್ರಂಥಗಳ ಅಧ್ಯಯನ ಇವನ್ನು ಮಾತ್ರ ತಂಡ ಸಂಘಟಿತವಾಗಿ ನಡೆಸಲು ಸಮರ್ಥವಾಯಿತು. ಕ್ರಮೇಣ ವಿಲಿಯಂನ ಸತತ ಪರಿಶ್ರಮದ ಪರಿಣಾಮವಾಗಿ ನಗರದ ಬೇರೆ ಬೇರೆ ಕಡೆಗಳಲ್ಲಿಯೂ ಈ ಬಗೆಯ ಪುಟ್ಟ ಪುಟ್ಟ ಸಭೆಗಳು ಅಸ್ತಿತ್ವಕ್ಕೆ ಬರತೊಡಗಿದವು.

ಒಂದು ಯುವ ಸಮಾಜ ನಿರ್ಮಾಣ. ಅದರಲ್ಲಿಯ ಸದಸ್ಯರ ಧಾರ್ಮಿಕ, ಬೌದ್ಧಿಕ ಜೀವನವನ್ನು ಪರಿಶುದ್ಧವಾಗಿಯೂ ಸಮರ್ಥವಾಗಿಯೂ ನಡೆಸಲು ಅನುಕೂಲ ವಾತಾವರಣ ನಿರ್ಮಿಸುವುದು – ಇದು ವಿಲಿಯಂ ಇರಿಸಿಕೊಂಡ ಧ್ಯೇಯ. ಈ ಧ್ಯೆಯ ಸಾಧನೆಗಾಗಿ ತನ್ನ ಕಾರ್ಯರಂಗ ವಿಸ್ತರಿಸಬೇಕೆಂಬುದು ಅವನ ಹಂಬಲ.

೧೮೪೪ ರ ಜೂನ್ ಆರರಂದು ಸಭೆಯೊಂದನ್ನಾತ ಕರೆದ. ಹನ್ನೆರಡು ಮಂದಿ ನೌಕರಸ್ಥರು ಆ ಸಭೆಯಲ್ಲಿ ಪಾಲ್ಗೊಂಡರು. ಹನ್ನೆರಡು ಬೇರೆ ಬೇರೆ ಘಟಕಗಳಿಗೆ ಮುಖ್ಯಸ್ಥರೆಂದು ಅವರನ್ನು ನೇಮಿಸಿದ ವಿಲಿಯಂ, ಆ ಘಟಕಗಳ ಯೋಜನೆಗಳನ್ನು ಕಾರ್ಯಗತಗೊಳಿಸಲು ಶ್ರಮಿಸಬೇಕೆಂದು ಕರೆ ಕೊಟ್ಟ. ಎರಡನೆಯ ಬಾರಿಗೆ ಮತ್ತೊಮ್ಮೆ ಈ ಹನ್ನೆರಡು ಮಂದಿ ಸಭೆ ಸೇರಿದಾಗ ತಮ್ಮ ಪುಟ್ಟ ತಂಡಕ್ಕೆ ಒಂದು ಹೆಸರನ್ನಿಟ್ಟುಕೊಂಡರು. ಯಂಗ್ ಮೆನ್ಸ್ ಕ್ರಿಶ್ಚಿಯನ್ ಅಸೋಸಿಯೇಶನ್

(YMCA). ಹನ್ನೆರಡು ಮಂದಿ ಸ್ಥಾಪಕ ಸದಸ್ಯರಗಳಲ್ಲಿ ಮೂರು ಮಂದಿ ಆಂಗ್ಲಿಕನ್ ಚರ್ಚಿಗೆ ಸೇರಿದವರು, ಮೂರು ಮಂದಿ ಕಾಂಗ್ರೆಗೇಶನಲಿಸ್ಟರು, ಮತ್ತೆ ಮೂರು ಮಂದಿ ಬ್ಯಾಪ್ಟಿಸ್ಟರು. ಉಳಿದ ಮೂವರು ಮೆಥಾಡಿಸ್ಟರು. ಹೀಗೆ ಕ್ರೈಸ್ತ ಧರ್ಮದ ಎಲ್ಲಾ ಒಳ ವರ್ಗಗಳ ವ್ಯಕ್ತಿಗಳಿಗೂ ಪ್ರಾತಿನಿಧ್ಯ ದೊರಕಿದಂತಾಗಿತ್ತು ಆರಂಭದ ಈ ಸಮಿತಿಯ ಘಟಕದಲ್ಲಿ. ಈ ಸ್ಥಾಪಕ ಸದಸ್ಯರ ಅದಮ್ಯ ಉತ್ಸಾಹದಿಂದ ಕೇವಲ ಕೆಲವೇ ವರುಷಗಳಲ್ಲಿ ಲಂಡನ್ನಿನ ವಿವಿಧ ಎಡೆಗಳಲ್ಲಿ ಹಾಗೂ ಇಂಗ್ಲಂಡಿನ ಬೇರೆ ಬೇರೆ ಪ್ರದೇಶಗಳಲ್ಲಿ YMCA ಶಾಖೆಗಳು ಸ್ಥಾಪಿಸಲ್ಪಟ್ಟವು. YMCA ಯುರೋಪ್, ಅಮೇರಿಕದ ಸಂಯುಕ್ತ ಸಂಸ್ಥಾನ, ಹಾಗೂ ಕೆನಡಾಗಳನ್ನು ತಲುಪಲು ವಿಳಂಬವಾಗಲಿಲ್ಲ. YMCA ಸ್ಥಾಪನೆಯಾಗಿ ಹತ್ತು ವರುಷ ಕಳೆಯುತ್ತಿದ್ದಾಗ ಅದನ್ನು ಜಾಗತಿಕ ಸಂಸ್ಥೆಯನ್ನಾಗಿಸುವ ಅಪೇಕ್ಷೆಯನ್ನು YMCA ಸಂಸ್ಥಾಪಕರಲ್ಲೊಬ್ಬರಾದ ಹೆನ್ರಿ ಡ್ಯುನಾಂಟ್ ತಳೆದ. ೧೮೫೫ ರಲ್ಲಿ, ಐದು ದೇಶಗಳ ತೊಂಬತ್ತೊಂದು ಪ್ರತಿನಿಧಿಗಳು ಹಾಗೂ YMCA ಯ ೩೮ ಶಾಖೆಗಳ ಪ್ರತಿನಿಧಿಗಳು ಪ್ಯಾರಿಸ್‌ನಲ್ಲಿ ಸಮಾವೇಶಗೊಂಡು, ಜಾಗತಿಕ YMCA ಸಂಘವನ್ನು ಘೋಷಿಸಿದರು. ಜಿನೇವಾ ಈ ಸಂಸ್ಥೆಯ ಪ್ರಧಾನ ಕೇಂದ್ರವೆಂದು ಅಂಗೀಕರಿಸಲ್ಪಟ್ಟಿತು. ಜಾಗತಿಕ ಒಪ್ಪಂದದ YMCA ಸಂಸ್ಥೆ ತೊಂಬತ್ತು ದೇಶಗಳ ಸುಮಾರು ಹತ್ತು ಸಾವಿರ ಪ್ರಾದೇಶಿಕ ಶಾಖೆಗಳನ್ನು, ಅವುಗಳ ಉಪಶಾಖೆಗಳನ್ನು ಒಳಗೊಂಡಿದೆ. ಈ ಸಂಸ್ಥೆಯಲ್ಲಿ ದಾಖಲಾದ ಹಾಗೂ ಸಂಸ್ಥೆಯ ಚಟುವಟಿಕೆಗಳಲ್ಲಿ ಸಕ್ರಿಯವಾಗಿ ಪಾಲ್ಗೊಳ್ಳುತ್ತಿರುವವರ ಸಂಖ್ಯೆ ಎರಡೂವರೆ ಕೋಟಿಗಿಂತ ಅಧಿಕವಾಗಿದೆ. ಈ ಕೇಂದ್ರದೊಂದಿಗೆ ಸಂಬಂಧವಿರಿಸಿಕೊಂಡ ಕ್ರಿಯಾಶೀಲರ ಸಂಖ್ಯೆಯೋ ೧೦ ಕೋಟಿಗೂ ಮಿಗಿಲಾಗುತ್ತದೆ!

ಜವಳಿ ಮಳಿಗೆಯೊಂದರಲ್ಲಿ ನೌಕರಿ ಮಾಡುತ್ತಿದ್ದ ಒಬ್ಬಾತ ಹಾಕಿದ ಬೀಜ ಪ್ಯಾರಿಸ್‌ನಲ್ಲಿ ಹೆಮ್ಮರವಾಗಿ ಬೆಳೆದು ಆ ವೃಕ್ಷದ ಪುಷ್ಪಗಳ ಸುವಾಸನೆ ಪಾಶ್ಚಾತ್ಯ ದೇಶಗಳಲ್ಲಿ ವ್ಯಾಪಿಸಿದ್ದು ಮಾತ್ರವಲ್ಲದೆ ಭಾರತದತ್ತ ಹರಡಲೂ ವಿಲಂಬವಾಗಲಿಲ್ಲ. ೧೮೫೪ರ ಹೊತ್ತಿಗೆ ಪ್ರಥಮ ಬಾರಿಗೆ ಕಲಕತ್ತಾ ನಗರದಲ್ಲಿ YMCAಯ ಒಂದು ಪುಟ್ಟ ಶಾಖೆ ತಲೆ ಎತ್ತಿತು. ಈ ಮೊದಲು, ೧೮೨೨ ರಲ್ಲಿ ವಿಲಿಯಂ ಕ್ಯಾರಿ ಎಂಬಾತನಿಂದ ಸ್ಥಾಪಿಸಲ್ಪಟ್ಟ ಜುವೆನೈಲ್ ಕ್ರಿಶ್ಚಿಯನ್ ಸೊಸೈಟಿಯೊಂದಿಗೆ ಈ YMCAಯ ಹೊಸ ಶಾಖೆ ವಿಲೀನವಾಗುವುದರೊಂದಿಗೆ (೧೮೫೭) ಎರಡೂ ಒಂದಾಗಿ ಪುನಶ್ಚೇತನ ಪಡೆದವು!

ಆದರೆ ಇದರ ಅವತಾರ ಏಳೆಂಟು ವರುಷಗಳಲ್ಲಿ ಪರಿಸಮಾಪ್ತಿಯಾಗುವ ಸ್ಥಿತಿಗೆ ಇಳಿಯಿತು. ೧೮೬೨ ರಲ್ಲಿ ಇದರ ಸದಸ್ಯ ಸಂಖ್ಯೆ ಕೇವಲ ೨೬. ೧೮೬೫ರ ಹೊತ್ತಿಗೆ ಇಬ್ಬರು ಸದಸ್ಯರು, ಹಾಗೂ ಸಮಾವೇಶಗೊಳ್ಳುವ ಮುನ್ನವೇ ಜುವೆನೈಲ್ ಕ್ರಿಶ್ಚಿಯನ್ ಸೊಸೈಟಿಯ ಭದ್ರ ಆಸ್ತಿಯಂತಿದ್ದ ಚೌಬಜಾರ್ ಸ್ಟ್ರೀಟ್‌ನ ಕಟ್ಟಡ ಇವು ಮಾತ್ರ YMCA ಕಲಕತ್ತಾ ಶಾಖೆಯ ಅಸ್ತಿತ್ವ ಸಾರಲು ಉಳಿದುಕೊಂಡವು! ಈ ಇಬ್ಬರೇ ಆಗಾಗ ಸಭೆಯನ್ನು ಜರುಗಿಸುತ್ತಿದ್ದರು. ಸುಮಾರು ೧೮೭೪-೭೫ ರ ಹೊತ್ತಿಗೆ ಹೊಸ ಅಲೆಯೊಂದು ತೇಲಿ ಬಂತು. ಮುಂಬಯಿ, ಕಲ್ಕತ್ತ, ಲಾಹೋರ್ ಮುಂತಾದ ನಗರಗಳಲ್ಲಿ ಕ್ರೈಸ್ತಮತ ತತ್ವಗಳನ್ನು ಬೋಧಿಸುವ ಸಲುವಾಗಿ ಹಲವು ಸಭೆಗಳನ್ನು ಸಂಘಟಿಸುತ್ತಿದ್ದ ಡಾ. ಎ. ಎ. ಸಮುರ್‌ವಿಲೆ ತನ್ನ ಸಭೆಯ ಮುಕ್ತಾಯ ಹಂತದಲ್ಲಿ YMCAಯಂತಹ ಉತ್ಸಾಹೀ ಸೇವಾಸಂಸ್ಥೆಯನ್ನು ಸೇರಿ ಕಾರ್ಯಪ್ರವೃತ್ತರಾಗುವಂತೆ ಯುವ ಜನರಿಗೆ ಕರೆ ಕೊಡುತ್ತಿದ್ದ. ಪರಿಣಾಮವಾಗಿಯೋ ಏನ್ನುವಂತೆ, ೧೮೭೫ರಲ್ಲಿ YMCA ಯ ಪ್ರಭಾವಶಾಲಿಯಾದ ಶಾಖೆಯೊಂದು ಸಮುರ್‌ವಿಲೆಯ ನೇತೃತ್ವದಲ್ಲಿಯೇ ಮುಂಬಯಿಯಲ್ಲಿ ಸ್ಥಾಪಿಸಲ್ಪಟ್ಟಿತು. ಇದರಲ್ಲಿ ವಾರದ ಸಭೆಗಳೂ, ಧಾರ್ಮಿಕ ಸಭೆಗಳೂ ನಡೆಯತೊಡಗಿದವು. ಇವುಗಳೊಂದಿಗೆ ಸಂಗೀತ ಕಲಿಸುವ, ಶಾರ್ಟ್ ಹ್ಯಾಂಡ್ ತರಬೇತಿ ನೀಡುವ, ಫ್ರೆಂಚ್ ಭಾಷೆ ಬೋಧಿಸುವ ವಿಶೇಷ ವ್ಯವಸ್ಥೆಗಳನ್ನು ಮಾಡಲಾಯಿತು. ಸರಾಸರಿ ಮೂರು ತಿಂಗಳಿಗೊಮ್ಮೆ ಸೋಶಿಯಲ್ ಗ್ಯಾದರಿಂಗ್ ನಡೆಸಲಾಗುತ್ತಿತ್ತು. ಆ ಸಮಯದಲ್ಲಿ

ಧಾರ್ಮಿಕ ಹಾಗೂ ಇನ್ನಿತರ ಸಾಮಾನ್ಯ ವಿಷಯ ಗಳ ಬಗ್ಗೆ ಉಪನ್ಯಾಸಗಳನ್ನೇರ್ಪಡಿಸಲಾಗುತ್ತಿತ್ತು. YMCA ಗೆ ಸೇರಿದ ಸದಸ್ಯರು ರೋಗಿಗಳ ಉಪಚಾರ, ನಿರಾಶ್ರಿತರಿಗೆ ಅಗತ್ಯ ವಸ್ತು ನಿಚಯ ಗಳ ದಾನ, ಮುಂತಾದ ಸೇವಾಕಾರ್ಯ ಗಳಲ್ಲಿಯೂ ಪಾಲ್ಗೊಳ್ಳಬೇಕಾಗಿತ್ತು. ೧೮೭೬ರ ಹೊತ್ತಿಗೆ ಕಟ್ಟಡ ನಿಧಿ ಸಂಗ್ರಹ ಕಾರ್ಯ ಆರಂಭ ವಾಗಿ, ಒಂದೇ ವರುಷದಲ್ಲಿ ಸಾಕಷ್ಟು ಪ್ರಮಾ ಣದ ಹಣ ಸಂಗ್ರಹವಾಯಿತು. ಸರಕಾರ ಕೊಡ ಮಾಡಿದ ಎಸ್‌ಪ್ಲೇನೇಡ್ ಪ್ರದೇಶದಲ್ಲಿ ಕಟ್ಟಡ ನಿರ್ಮಾಣ ಕಾರ್ಯವೂ ಆರಂಭಿಸಲ್ಪಟ್ಟಿತು.

ಕ್ರೈಸ್ತ ಮಿಶನರಿಗಳ ನೇರ ಹಾಗೂ ಪ್ರತ್ಯಕ್ಷ ನೇತೃತ್ವದಲ್ಲಿ ಇಲ್ಲವೇ ಅವರ ಸಲಹೆ ಸೂಚನೆ ಗಳನ್ವಯ ದಕ್ಷಿಣದಲ್ಲಿಯೂ YMCA ಯ ಶಾಖೆಗಳು ತಲೆ ಎತ್ತತೊಡಗಿದವು. ಆದರೆ, ಬಹುತೇಕ ಈ ಎಲ್ಲಾ ಶಾಖೆಗಳಲ್ಲಿಯ ಸದಸ್ಯರು ಪ್ರಾಟೆಸ್ಟಂಟ್ ಕ್ರೈಸ್ತರೋ ಆಂಗ್ಲೋ-ಇಂಡಿಯನ್ನರೋ ಆಗಿರುತ್ತಿದ್ದರು. ಭಾರತೀಯ ಯುವಕರಿಗೆ ಇವುಗಳಲ್ಲಿ ಪ್ರವೇಶಾವಕಾಶವಿರಲಿಲ್ಲ. ಕ್ರೈಸ್ತೇತರ ಸಂಖ್ಯೆಯೇ ಅಧಿಕವಾಗಿರುವ ಭಾರತ ದಂತಹ ದೇಶದಲ್ಲಿ ಅಂಥವರ ಬೆಂಬಲವಿಲ್ಲದೆ ಒಂದು ಸಂಘವನ್ನು ಪ್ರಭಾವಯುತವಾಗಿ ನಡೆಸಿ ಕೊಂಡು ಹೋಗುವುದು ಕಷ್ಟಸಾಧ್ಯವಾದ ಅಂಶ ವಾಗಿತ್ತು. ಇದನ್ನು ಮನಗಂಡೇ ೧೯೭೧ರಲ್ಲಿ ಭಾರತದ YMCA ಶಾಖೆಗಳ ರಾಷ್ಟ್ರೀಯ ಸಭೆ ಸಮಾವೇಶಗೊಂಡಾಗ ಕ್ರೈಸ್ತೇತರರನ್ನು YMCA ಗೆ ಸೇರಿಸಿಕೊಳ್ಳುವ ವಿಚಾರವನ್ನು, ಪ್ರಧಾನವಾಗಿ ಚರ್ಚಿಸಲಾಯಿತು. ಬಹಳ ಬಿರು ಸಿನಿಂದ ಸಾಗಿದ ಚರ್ಚೆಯ ಕೊನೆಯಲ್ಲಿ ಕ್ರೈಸ್ತೇತರರಿಗೂ ಇಲ್ಲಿ ಅವಕಾಶ ಸೌಲಭ್ಯ ನೀಡಲು ನಿರ್ಧರಿಸಿತು. ಮುಖ್ಯವಾಗಿ YMCA ಏಸು ಕ್ರಿಸ್ತನ ಜೀವನ, ಸಾಧನೆ, ಬೋಧನೆಗಳನ್ನು ಕುರಿತು ಒತ್ತು ನೀಡುತ್ತಿದ್ದರೂ ಬದಲಾಗುತ್ತಿರುವ ಪರಿಸರ ಸಮಾಜಗಳ ಆಗುಹೋಗುಗಳಿಗೆ ಅನು ಗುಣವಾಗಿ ಸಮಕಾಲಿನ ಪ್ರಜ್ಞೆಯನ್ನೂ ಅಳವ ಡಿಸಿಕೊಂಡು ಕಾರ್ಯಪ್ರವೃತ್ತವಾಗಿದೆ. ಇಂದು YMCA ಸೇವಾಮನೋಭಾವದ ಜನರನ್ನು ಮುಕ್ತ ಮನಸ್ಸಿನಿಂದ ಆಹ್ವಾನಿಸುತ್ತದೆ.

ಇಂದು YMCA ಶಾಖೆಗಳು ಜಗತ್ತಿ ನಾದ್ಯಂತ ವ್ಯಾಪಿಸಿವೆ. ಈ ಶಾಖೆಗಳು ನಡೆಸುವ ಕಾರ್ಯಗಳೂ ಹಲವು ಬಗೆಯವು. ಮಾತ್ರ ವಲ್ಲ. ಎಲ್ಲರಿಗೂ ಚಿರಪರಿಚಿತವಾಗಿವೆ. ದೈಹಿಕ ಮಾನಸಿಕ, ಆಧ್ಯಾತ್ಮಿಕ ಮತ್ತು ಸಾಮಾಜಿಕ ಬೆಳ ವಣಿಗೆಗೆ ಅನುಕೂಲವಾಗುವಂಥ ಕಾರ್ಯಕ್ರಮ ಗಳನ್ನು ಇವು ಹೊಳಪು ಹಾಕಿಕೊಳ್ಳುತ್ತವೆ. ಆ ಮೂಲಕ ಮಾನವನ ಆತ್ಮ ಮನಸ್ಸು ಮತ್ತು ಶರೀರಗಳ ವಿಕಾಸಕ್ಕೆ ಅವಕಾಶಮಾಡಿಕೊಡುತ್ತವೆ.

YMCAಯ ಒಟ್ಟು ಮುನ್ನೂರು ಶಾಖೆ ಗಳು ಭಾರತದಲ್ಲಿವೆ. ಇವುಗಳಲ್ಲಿಯ ಒಟ್ಟು ಸದಸ್ಯ ಸಂಖ್ಯೆ ೫೦,೦೦೦. YMCA ಸಭೆ ಗಳಲ್ಲಿ ಭಾಗವಹಿಸುವವರ ಸಂಖ್ಯೆ ೬,೭೫,೦೦೦. ಇವರಲ್ಲಿ ಸೇಕಡಾ ಎಪ್ಪತ್ತು ಮಂದಿ ಕ್ರೈಸ್ತೇತರರು!

YMCA ಹೊಂದಿರುವ ಆಸ್ತಿಯು ಸಾಕಷ್ಟು ಗಣನೀಯ ಪ್ರಮಾಣದಲ್ಲಿದೆ. ಇದಕ್ಕೆ ೩೫೦ ಸ್ವಂತ ಕಟ್ಟಡಗಳಿವೆ. ೬೪ ಹಾಸ್ಟೆಲ್‌ಗಳಲ್ಲಿ ೩,೩೩೮ ವಿದ್ಯಾರ್ಥಿಗಳಿಗೆ YMCA ವಸತಿ ಸೌಕರ್ಯ ಕಲ್ಪಿಸಿ ಕೊಟ್ಟಿದೆ. ೧೮೦೦೦ ಪ್ರೇಕ್ಷಕರಿಗೆ ಅವಕಾಶಮಾಡಿ ಕೊಡುವ ೬೮ ಆಡಿಟೋರಿಯ-ಮ್‌ಗಳು ಇವೆ. ೧,೮೮,೭೦೦ ಮಂದಿ ಆಟಗಾರರು ಭಾಗವಹಿಸಲು ಅನುಕೂಲವಾಗುವಂತೆ ಸುಮಾರು ೨೫೦ ಕ್ಕೂ ಹೆಚ್ಚು ಕ್ರೀಡಾಂಗಣಗಳಿವೆ.

YMCA ಯ ಪ್ರತಿ ಶಾಖೆಯೂ ಸ್ವಯಂ ಆಧಿಕಾರವನ್ನು ತನ್ನ ಕಾರ್ಯಕ್ಷೇತ್ರದ ಪರಿಧಿಯಲ್ಲಿ ಹೊಂದಿದ್ದರೂ ರಾಷ್ಟ್ರೀಯ ಸಮಿತಿ ನಿರೂಪಿಸಿದ ಸಾಮಾನ್ಯ ನಿಯಮಗಳಿಗೆ ಅನುಸಾರವಾಗಿ ಸಾಗ ಬೇಕಾಗುತ್ತದೆ. YMCA ಯ ಪ್ರತಿ ಶಾಖೆಗೆ ಒಬ್ಬ ಅಧ್ಯಕ್ಷನಿರುತ್ತಾನೆ, ಓರ್ವ ಕಾರ್ಯದರ್ಶಿ ಹಾಗೂ ಒಂದು ನಿರ್ದೇಶಕ ಮಂಡಳಿ ಇರುತ್ತದೆ. ರಾಷ್ಟ್ರೀಯ ಮಂಡಳಿಯಲ್ಲಿಯೂ ಹೀಗೆಯೇ, ಈ ಮಾದರಿಯಲ್ಲಿಯೇ ಪದಾಧಿಕಾರಿಗಳಿರುತ್ತಾರೆ.

YMCA ಯ ಭಾರತದ ಶಾಖೆಗಳು ಸ್ವಯಂ ಸಹಾಯಕ ಸಂಸ್ಥೆಗಳು, ಇವುಗಳಿಗೆ ಆದಾ ಯವು, ಸದಸ್ಯರ ವಂತಿಗೆ, ಆಸ್ತಿಯಿಂದ ಬರುವ ಲಾಭ, ಟೂರಿಸ್ಟ್ ಹೋಟೆಲ್‌ಗಳಿಂದ ಲಭಿಸುವ ಹಣ ಹಾಗೂ ಕೊಡುಗೆ ಮುಂತಾದ ಮೂಲ ಗಳಿಂದ ಬರುತ್ತವೆ.

YMCAಯು ಕೆಲವೊಮ್ಮೆ ಸರಕಾರದೊಂದಿಗೆ ಇಲ್ಲವೇ ಕೆಲವು ಮುಖ್ಯ ಏಜನ್ಸಿಗಳೊಂದಿಗೆ ಸೇರಿಕೊಂಡು ಕೆಲಸ ಮಾಡುವುದುಂಟು. ವಿದೇಶದಿಂದ ಧನಸಹಾಯ ಒದಗಿ ಬಂದಾಗ ಅದು ಉದ್ದೇಶಿತ ಯೋಜನೆಗಾಗಿಯೇ ಬರುತ್ತದೆ; ಅದಕ್ಕಾಗಿಯೇ ವಿನಿಯೋಗವಾಗುತ್ತದೆ. ಭಾರತದ YMCA ಹಲವು ಪ್ರಥಮಗಳ ಶಾಲೆಗಳನ್ನೂ ಸ್ಥಾಪಿಸಿದೆ. ಕ್ರೀಡಾರಂಗದಲ್ಲಂತೂ ಇದು ಗಳಿಸಿರುವ ಜನಪ್ರಿಯತೆ ಅಪಾರ. ವಾಸ್ತವಿಕವಾಗಿ ಎಲ್ಲೆಲ್ಲಿ YMCA ಗಳಿವೆಯೋ ಅಲ್ಲೆಲ್ಲಾ ಕ್ರೀಡಾ ಸೌಲಭ್ಯಗಳಿವೆ. ಕ್ರೀಡಾ ನಿಯಮಗಳನ್ನೊಳಗೊಂಡ ಒಂದು ಪುಸ್ತಕವನ್ನು YMCA ಪ್ರಕಟಿಸಿದೆ. ಅದು ಆಟಗಾರರ ಪಾಲಿಗೆ ಸದಾ ಕೈದೀವಿಗೆಯಾಗಿದೆ. ಅಮೇರಿಕದಲ್ಲಿ ಕಂಡುಹಿಡಿಯಲ್ಪಟ್ಟ ವಾಲಿಬಾಲ್ ಮತ್ತು ಬಾಸ್ಕೆಟ್‌ಬಾಲ್ ಆಟಗಳನ್ನು ಭಾರತದಲ್ಲಿ ಜಾರಿಗೆ ತಂದು ಪ್ರಚಲಿತಗೊಳಿಸಿದ ಕೀರ್ತಿ YMCA ಗೆ ಸೇರುತ್ತದೆ. ೧೯೨೪ರಲ್ಲಿ ಪ್ರಥಮ ಬಾರಿಗೆ ಒಲಂಪಿಕ್ಸ್‌ನಲ್ಲಿ ಭಾಗವಹಿಸಿದ ತಂಡಕ್ಕೆ ತರಬೇತಿ ನೀಡಿದ್ದು YMCA ! ಹ್ಯಾರಿ ಬಕ್ ಕೋಚ್ ಮತ್ತು ಮ್ಯಾನೇಜರ್. ಇವರೇ ಮುಂದೆ ಇಂಡಿಯನ್ ಒಲಿಂಪಿಕ್ ಅಸೋಸಿಯೇಶನ್ ಸ್ಥಾಪಿಸಿದರು. ೧೯೨೦ ರಲ್ಲಿ ಮದ್ರಾಸಿನಲ್ಲಿ ಸ್ಥಾಪನೆಗೊಂಡ YMCA ಕಾಲೇಜ್ ಆಫ್ ಫಿಸಿಕಲ್ ಎಜ್ಯುಕೇಶನ್ ನಿಜಕ್ಕೂ YMCA ಕ್ರೀಡಾ ರಂಗಕ್ಕೆ ಕೊಟ್ಟ ಅಪೂರ್ವ ಕೊಡುಗೆ. ಇದು ಹ್ಯಾರಿ ಕ್ರೋವ್ ಬಕ್‌ರ ದೂರದೃಷ್ಟಿಯ ಫಲ, ೧೯೧೯ರಲ್ಲಿ ಆತ YMCA ಕೇಂದ್ರ ಮಂಡಳಿಯ ಫಿಸಿಕಲ್ ಇನ್‌ಸ್ಟ್ರಕ್ಟರನಾಗಿ ಬಂದ. ಐವರು ಯುವ ಉತ್ಸಾಹಿಗಳಿಗೆ ದೈಹಿಕ ಶಿಕ್ಷಣ ತರಬೇತಿ ಆರಂಭಿಸಿದ. ಕ್ರಮೇಣ ಆ ಗುಂಪು ಹೆಚ್ಚಿತು. ಕಲಿಯುವ ಉತ್ಸಾಹ ಬಹುತೇಕ ತರುಣರಲ್ಲಿ ಕಂಡು ಬಂತು. ತರಬೇತು ನೀಡುವವರಿಗಾಗಿ ದೈಹಿಕ ಶಿಕ್ಷಣ ಶಾಲೆಯ ಅಗತ್ಯವನ್ನು YMCAಗೆ ಬಿಂಬಿಸಿ ಕಾರ್ಯಪ್ರವೃತ್ತನಾದ.

ಶ್ರೀಮತಿ ಬಕ್‌ರ ಉತ್ಸಾಹ ಹಾಗೂ ಆಸಕ್ತಿಗಳ ಪರಿಣಾಮವಾಗಿ ೧೯೪೦ರಲ್ಲಿ ದೈಹಿಕ ಶಿಕ್ಷಣದ ಮಹಿಳಾ ವಿಭಾಗವೂ ತಲೆ ಎತ್ತಿತು. ಇಂದು, ಮದ್ರಾಸು ವಿಶ್ವವಿದ್ಯಾಲಯಕ್ಕೆ ಅಧೀನವಾಗಿ ನಡೆಯುತ್ತಿರುವ ಈ ಅಂತಾರಾಷ್ಟ್ರೀಯ ಮಟ್ಟದ ಎರಡೂ ದೈಹಿಕ ಕ್ರೀಡಾಸಂಸ್ಥೆಗಳು ಸಹಸ್ರಾವಧಿ ಮಂದಿಗೆ ದೈಹಿಕ ಶಿಕ್ಷಣ ನೀಡುತ್ತಿವೆ ಮಾತ್ರವಲ್ಲ, ಕ್ರೀಡೆಗಾಗಿ ಪದವಿ ಸರ್ಟಿಫಿಕೆಟುಗಳನ್ನೂ ಕೊಡುತ್ತಿವೆ. ಇದು ಈಗಾಗಲೇ ಸುಮಾರು ೧೦,೦೦೦ ದೈಹಿಕ ಶಿಕ್ಷಣ ತರಬೇತು ಶಿಕ್ಷಕರನ್ನು ಸಿದ್ಧಗೊಳಿಸಿದೆ.

ಮದ್ರಾಸಿನಲ್ಲಿ ಆರಂಭವಾದ ಈ ಫಿಸಿಕಲ್ ಎಜ್ಯುಕೇಶನ್ ಮಾದರಿಯಲ್ಲಿಯೇ ಭಾರತದ ೪೧ ಕಾಲೇಜುಗಳು ತಮ್ಮಲ್ಲಿಯೂ ದೈಹಿಕ ಶಿಕ್ಷಣ ತರಬೇತು ರಂಗಗಳನ್ನು ಸ್ಥಾಪಿಸಿದವು. ಹ್ಯಾರಿ ಕ್ರೋವ್ ಈ ದೃಷ್ಟಿಯಿಂದ ಭಾರತೀಯ ಶರೀರ ಶಿಕ್ಷಣದ ಜನತೆಯೆಂದು ಭಾವಿಸಲಾಗುತ್ತದೆ. ಶಾಲಾ ಕಾಲೇಜುಗಳ ಪಠ್ಯಕ್ರಮಗಳಲ್ಲಿ ಇಂದು ಆಟಕ್ಕೇನಾದರೂ ಸಮಯ ನಿಗದಿಯಾಗಿದ್ದರೆ ಅದಕ್ಕೆ ಕಾರಣ ಹ್ಯಾರಿ ಕ್ರೋವ್ ಬಕ್. ನಿಜಕ್ಕೂ ಆತನ




" ನನ್ನ ಮನೇಲಿ ನಾನು ಕಳ್ಳತನ ಮಾಡ್ತೀ-ನೇನೆ sss ? "

ದೂರದೃಷ್ಟಿ ಹಾಗೂ ಉತ್ಸಾಹೀ ನಾಯಕತ್ವ ಭಾರತದಲ್ಲಿ ಕ್ರೀಡಾಶಿಕ್ಷಣ ನೆಲೆಯೂರಿಗಲೂ ಬೆಳೆದುಬರಲೂ ಕಾರಣವಾಯಿತು.

YMCA ಯುವಜನಾಂಗದ ಆಶೋತ್ತರಗಳ ಈಡೇರಿಕೆಗೆ ಸ್ಥಾಪಿಸಲ್ಪಟ್ಟ ಸಂಸ್ಥೆ. ಆದುವೆ ಕಾರಣ, ಸಹಜವಾಗಿ ಅವರ ಸಹಭಾಗಿತ್ವ ವಿದ್ಯಾರ್ಥಿ ಸಮೂಹಕ್ಕೂ ಲಭ್ಯವಾಗಬೇಕಷ್ಟೇ! ಅದಕ್ಕಾಗಿ YMCA ತನ್ನ ಗಮನವನ್ನು ವಿದ್ಯಾರ್ಥಿ ಸಮೂಹದತ್ತ ಕ್ರಮೇಣ ಹರಿಸತೊಡಗಿತು. ಪರಿಣಾಮವಾಗಿ ಸ್ಟೂಡೆಂಟ್ ಡಿಪಾರ್ಟಮೆಂಟಿನ ಉಪಶಾಖೆಗಳು ಉದಯವಾದವು. ೧೯೦೧ ರಲ್ಲಿ YMCA ಯ ೪೪ ವಿದ್ಯಾರ್ಥಿ ಸಂಘಗಳು ಭಾರತ ಮತ್ತು ಶ್ರೀಲಂಕಾದಲ್ಲಿ ಸ್ಥಾಪಿಸಲ್ಪಟ್ಟವು.

YMCA ಯು ಪಟ್ಟಣ ಪ್ರದೇಶದಲ್ಲಿ ಆರಂಭಿಸಲ್ಪಟ್ಟರೂ ನಿಜವಾಗಿಯೂ ಅದು ತವ್ಮು ಸಾಮರ್ಥ್ಯ ತೋರಿ, ಪಣ ಎದುರಿಸಬೇಕಾದದ್ದು ಹಳ್ಳಿಗಳಿಂದ ಈ ಪಣವನ್ನು ಧೈರ್ಯದಿಂದ ಎದುರಿಸಿದ ಕೀರ್ತಿ ಕೆ. ಟಿ. ಪಾಲ್‌ರಿಗೆ ಸಲ್ಲುತ್ತದೆ. YMCA ಯ ರಾಷ್ಟ್ರೀಯ ಸಮಿತಿಯ ಪ್ರಥಮ ಭಾರತೀಯ ಕಾರ್ಯದರ್ಶಿಯಾಗಿದ್ದ ಇವರು ತಮ್ಮ ಅಧಿಕಾರಾವಧಿಯಲ್ಲಿ (೧೯೧೬–೧೯೩೦) ಭಾರತ, ಬರ್ಮಾ, ಸಿಂಹಳ ಮುಂತಾದೆಡೆ YMCA ಬೆಳವಣಿಗೆ ಹಾಗೂ ಪ್ರಗತಿ ಕುರಿತು ತುಂಬಾ ಮುತುವರ್ಜಿಯಿಂದ ಕೆಲಸ ಮಾಡಿದರು.

೧೯೦೭ರ ಹೊತ್ತಿಗೆ ಕೆ. ಟಿ. ಪಾಲ್ ನ್ಯಾಶನಲ್ ಮಿಶನರಿ ಸೊಸೈಟಿಯ ಸಹಾಯಕ ಕಾರ್ಯದರ್ಶಿಯಾಗಿದ್ದರು. ಆ ಸಮಯದಲ್ಲಿ ಅವರು ರಾಷ್ಟ್ರವ್ಯಂತ ಸಂಚಾರ ಕೈಗೊಂಡಿದ್ದರು. ಆ ಮೂಲಕ ಗ್ರಾಮೀಣ ಪ್ರದೇಶಗಳ ಸಮಸ್ಯೆಗಳನ್ನು ಅರಿತುಕೊಳ್ಳಲು ಅವಕಾಶವಾಯಿತು. ಅಲ್ಲಿಯ ಜನರು ಸಾಲ ಶೂಲಗಳಿಂದ ನರಳುವುದನ್ನು ಪ್ರತ್ಯಕ್ಷ ಕಂಡರು ಪಾಲ್. ಈ ಅನುಭವಗಳೆಲ್ಲವೂ YMCA ಯ ಕಾರ್ಯದರ್ಶಿಯಾದಾಗ ಅವರಿಗೆ ಸಹಾಯಕವಾದವು. ಗ್ರಾಮೀಣ ಪ್ರದೇಶದ ಜನರ ಸೇವೆಯ ಉದ್ದೇಶ್ಯದಿಂದಲೇ ಅವರು YMCA ಯ ವತಿಯಿಂದ ಕೋ–ಆಪರೇಟೀವ್ ಕ್ರೆಡಿಟ್ ಸೊಸೈಟಿಗಳನ್ನು ಆರಂಭಿಸಿದರು. ಆದರೆ ಬೇರು ಬಿಟ್ಟು ವ್ಯಾಪಕವಾಗಿರುವ ಈ ಪಿಲ್ಲಾ ಪಿಡುಗುಗಳನ್ನು ಸುಲಭವಾಗಿ ನಿವಾರಿಸುವುದು ಸೊಸೈಟಿಯೊಂದರಿಂದಲೇ ಸಾಧ್ಯವಾಗದು ಎನ್ನುವ ಅಂಶವನ್ನು ಮನಗಂಡ ಪಾಲ್ ಗ್ರಾಮೀಣ ಪುನರ್‌ರಚನೆಯ ಹೊಸ ಯೋಜನೆಯೊಂದನ್ನು ರೂಪಿಸಿದರು.

ಈ ಯೋಜನೆಯನ್ವಯ ಪ್ರಥಮ ಮೂರು ಶಾಖೆಗಳು ದಕ್ಷಿಣ ಭಾರತದಲ್ಲಿ ತೆರೆಯಲ್ಪಟ್ಟವು. ಇವುಗಳಲ್ಲಿ ಒಂದು, ತಿರುವಾಂಕೂರು ಜಿಲ್ಲೆಯ ಮರ್ತಾಂಡಂ ಗ್ರಾಮೀಣ ಪುನರಚನಾ ಕೇಂದ್ರ. ಹಳ್ಳಿಯ ಸರ್ವಾಂಗೀಣ ಅಭಿವೃದ್ಧಿಯನ್ನು ಹೇಗೆ ಸಾಧ್ಯಗೊಳಿಸಬಹುದೆಂಬುವಕ್ಕೆ ಈ ಹಳ್ಳಿ ಇಂದು ಸಾಕ್ಷಿಯಾಗಿದೆ. ಉದಾಹರಣೆಯಾಗಿದೆ. ಇಲ್ಲಿ ಆರಂಭದಲ್ಲಿ ಜೇನು ಸಾಕಣಿಕೆ ಕಾರ್ಯವನ್ನು ಕೈಗೆತ್ತಿಕೊಳ್ಳಲಾಗಿತ್ತು. ಇಂದು ಈ ಮಾರ್ತಾಂಡಂ ಹಳ್ಳಿ ಭಾರತದಲ್ಲಿಯೇ ಹೆಚ್ಚು ಪ್ರಮಾಣದ ಜೇನುತುಪ್ಪ ತಯಾರಿಸುವ ಪ್ರಮುಖ ಕೇಂದ್ರವಾಗಿದೆ. ಅಮೇರಿಕದ ಸಂಯುಕ್ತ ಸಂಸ್ಥಾನಗಳಿಂದ ಆಮದು ಮಾಡಿಕೊಂಡ ಮೊಟ್ಟೆಗಳ ಸಹಾಯದಿಂದ ಇಲ್ಲಿ ಕೋಳಿ ಸಾಕಣಿಕೆ ಆರಂಭಿಸಲಾಯಿತು. ಮಾರ್ತಾಂಡಂ ಇಂದು ಉತ್ಕೃಷ್ಟ ದರ್ಜೆಯ ಮೊಟ್ಟೆಗಳನ್ನು ಒದಗಿಸುತ್ತದೆ; ಇಲ್ಲಿಂದ ಶ್ರೀಲಂಕಾಕ್ಕೂ ಮೊಟ್ಟೆಗಳು ರಫ್ತಾಗುತ್ತಿವೆ.

ಗುಡಿ ಕೈಗಾರಿಕೆಗಳ ಅಭಿವೃದ್ಧಿ, ತೋಟಗಾರಿಕೆ, ಕುರಿ ಸಾಕಣೆ, ಹೊಲಿಗೆ ತರಬೇತಿ, ಆಹಾರ ಸಂರಕ್ಷಣೆಯ ಮಾಹಿತಿ, ತಾಯಿ ಮಕ್ಕಳ ಆರೋಗ್ಯ ವಿಚಾರ, ಪೌಷ್ಟಿಕ ಆಹಾರದ ಜ್ಞಾನ ಒದಗಿಸುವಿಕೆ, ಅಗತ್ಯ ಪೋಷಣೆ ಮುಂತಾದವು ಮಾರ್ತಾಂಡಂ ಹಳ್ಳಿ ಕೈಗೊಂಡ ಇನ್ನಿತರ ಕಾರ್ಯಕ್ರಮಗಳು. ಇವುಗಳೊಂದಿಗೆ, ೩೦ ಮಂದಿಗಾಗಿ ಬಾಯ್ಸ್ ಹೋಮ್ ಹಾಗೂ ಅದಕ್ಕೆ ಪೂರಕವಾದ ಬಾಯ್ಸ್ ಕ್ಲಬ್‌ಗಳನ್ನು ಆರಂಭಿಸಿದೆ YMCA. ಸುಮಾರು ೮೦ ಇನ್ನಿತರ ಹಳ್ಳಿಗಳ YMCA ಶಾಖೆಗಳು ಮಾರ್ತಾಂಡಂನ ನಿರ್ದೇಶನದಲ್ಲಿ ಕಾರ್ಯಪ್ರವೃತ್ತವಾಗಿವೆ. YMCA ಸಾಧಿಸಿದ ಉದ್ದೇಶಿತ ಪ್ರಗತಿ ಕಾಣುವುದಾದರೆ ಮಾರ್ತಾಂಡಂಗೆ ಭೇಟಿ ಕೊಡಬೇಕು.

ಮಾರ್ಟಂಡಂನಂತಹ ಗ್ರಾಮೀಣ ಪ್ರದೇಶದಲ್ಲಿ YMCA ನಡೆಸಿ ಯಶಸ್ವಿಯಾದ ಕಾರ್ಯ ಕ್ರಮಗಳಿಂದ ಉತ್ತೇಜಿತಗೊಂಡ YMCA ಕೇಂದ್ರ ಸಂಸ್ಥೆ ಹತ್ತು ವರುಷಗಳ ಅವಧಿಗಾಗಿ ಹೊಸ ರಾಷ್ಟ್ರೀಯ ಯೋಜನೆಯೊಂದನ್ನು ಸಂ ಯೋಜಿಸಿದೆ. ೧೯೮೫ರ ಅವಧಿಯೊಳಗೆ ಕನಿಷ್ಠ ೧,೦೦೦ ಹಳ್ಳಿಗಳನ್ನು YMCA ಯ ಅಧೀ ನಕ್ಕೊಳಪಡಿಸಿ ಅವುಗಳ ಪುನರುದ್ಧಾರ ಹಾಗೂ ಸರ್ವಾಂಗೀಣ ಪ್ರಗತಿಗಾಗಿ ಶ್ರಮಿಸುವುದು.

ಗ್ರಾಮೀಣ ಜನ ಪಟ್ಟಣ ಪ್ರದೇಶಗಳಿಗೆ ವಲಸೆ ಹೋಗುವುದನ್ನು ತಡೆಗಟ್ಟಲು YMCA ಕೆಲವು ಕ್ರಮಗಳನ್ನು ಹಾಕಿಕೊಂಡಿದೆ. ಮಿಜ್ವಾರಾ ಮತ್ತು ಹರಿಯಾಣಗಳಲ್ಲಿ ರೂರಲ್ ಆಗ್ರೋ ಪಾಲಿ-ಟೆಕ್ನಿಕ್ ಮತ್ತು ಎಕ್ಸ್‌ಟೆನ್‌ಶನ್ ಸೆಂಟರ್‌ಗಳನ್ನು ತೆರೆದು ರೈತರಿಗೆ ಅಗತ್ಯವಾದ ಉಪಕರಣ ಹಾಗೂ ಸಲಕರಣೆಗಳನ್ನು ಪೂರೈಕೆಮಾಡಿ, ಗ್ರಾಮೀಣ ಆಕರ್ಷಣೆ ಹೆಚ್ಚಲು ಅವಕಾಶ ಮಾಡಿಕೊಟ್ಟಿದೆ.

YMCA ಇನ್‌ಸ್ಟಿಟ್ಯೂಟ್ ಆಫ್ ರೂರಲ್ ಡೆವಲಪ್‌ಮೆಂಟ್ ಎನ್ನುವ ಹೆಸರಿನ ಉಪಶಾಲೆಯೊಂದು ೧೯೭೭ರಲ್ಲಿ ತಮಿಳುನಾಡಿನ ಮುರುಘಕೋಡಿನಲ್ಲಿ ಉದ್ಘಾಟಿಸಲ್ಪಟ್ಟಿತು. ಹಳ್ಳಿಗರ ಬೇಸಾಯ ಪದ್ಧತಿ ಸುಧಾರಿಸುವಲ್ಲಿ ಜೀವನ ವಿಧಾನ ನೇರ್ಪಡಿಸಿಕೊಳ್ಳುವಲ್ಲಿ ಸರಿ ಯಾದ ಮಾಹಿತಿ ನೀಡಬೇಕೆಂದು ಯುವಕರಿಗೆ ತರಬೇತಿ ನೀಡಿ ಕಳುಹಿಸಿಕೊಡುತ್ತದೆ ಈ ಸಂಸ್ಥೆ.

ಗ್ರಾಮೀಣ ಅಭಿವೃದ್ಧಿಯ ರಾಷ್ಟ್ರೀಯ ಯೋಜನೆಯನ್ವಯ ದೇಶದಲ್ಲಿ ಐದು ಕೃಷಿ ವಿಜ್ಞಾನ ಕೇಂದ್ರಗಳನ್ನು ಸ್ಥಾಪಿಸುವ ಉದ್ದೇಶ ವನ್ನು YMCA ಹೊಂದಿ ಕಾರ್ಯಗತಗೊಳಿ ಸಲು ಯತ್ನಿಸಿತು. ಪಶ್ಚಿಮ ಬಂಗಾಳದ ನಾದಿಯಾ ಜಿಲ್ಲೆಯ 'ರಣಘಾಟ್ ಹಳ್ಳಿಯ ಅಭಿವೃದ್ಧಿ ಯೋಜನೆ' ಇವುಗಳಲ್ಲಿ ಒಂದು. ಇದೊಂದು ಮಹತ್ವಾಕಾಂಕ್ಷೆಯಿಂದ ಕೂಡಿದ ಯೋಜನೆ. ಕಲಕತ್ತಾದ YMCA ಹಾಗೂ ರಾಷ್ಟ್ರೀಯ YMCA ಎರಡೂ ಪರಸ್ಪರ ಕೂಡಿ ಹಮ್ಮಿ ಕೊಂಡ ಯೋಜನೆ ಇದು. ೭೦,೦೦೦ ಜನರಿಗೆ ನಿಲುಕುವ ಸುಮಾರು ನೂರು ಹಳ್ಳಿಗಳನ್ನಾಯ್ದು ನಾಲ್ಕು ಬಗೆಯ ಕಾರ್ಯಕ್ರಮಗಳನ್ನು ಕೊಡ ಮಾಡಲು ಈ ಯೋಜನೆಯನ್ನು ರೂಪಿಸಲಾ ಗಿದೆ. ಅವು ಕೊಳವೆ ಭಾವಿಗಳಿಂದ ನೀರು ಸರಬ ರಾಜು, ಶಿಕ್ಷಣ ವ್ಯವಸ್ಥೆ ಮತ್ತು ತರಬೇತಿ, ಡೇರಿ ಮತ್ತು ಕೋಳಿ ಸಾಕಣೆಕೆ ಅಭಿವೃದ್ಧಿ ಹಾಗೂ ಒಳನಾಡಿನ ಮೀನುಗಾರಿಕೆಯ ಅಭಿವೃದ್ಧಿ.

ಫರಿದಾಬಾದಿನಲ್ಲಿರುವ, ಹನ್ನೆರಡು ವರುಷ ತುಂಬಿದ YMCA ಇನ್‌ಸ್ಟಿಟ್ಯೂಟ್ ಆಫ್ ಇಂಜನಿಯರಿಂಗ್ ತಾಂತ್ರಿಕ ಅಭ್ಯಾಸಿಗಳ ಪಾಲಿಗೆ ಆದರ್ಶ ಸಂಸ್ಥೆ,

ಅನಾಥ ಮಕ್ಕಳಿಗೆ ಆಶ್ರಯ ನೀಡುವ ಕಾರ್ಯ ದಲ್ಲಿಯೂ YMCA ಹಿಂದೆ ಬಿದ್ದಿಲ್ಲ. ೧೪ ನಗರಗಳಲ್ಲಿ ಬಾಯ್ಸ್ ಹೋಮ್‌ಗಳಿವೆ. ಸುಮಾರು ಐನೂರು ಅನಾಥ ಮಕ್ಕಳಿಗೆ ಇವುಗಳಲ್ಲಿ ಆಶ್ರಯ

---

ಸಾರ್! ಹತ್ರೂಪಾಯಿ ಸಾಲ ಕೊಡ್ತೀರಿ ತಾನೇ?

ನೀಡಿ ಅವರ ಬಾಳು ಹಸನಾಗಲು ಅನುಕೂಲ ಮಾಡಿಕೊಡಲಾಗುತ್ತಿದೆ. ಯುವಕರಲ್ಲಿ ಪೌರತ್ವದ ಕಲ್ಪನೆ ಬಿಂಬಿಸಲು, ಉತ್ತಮ ನಾಗರಿಕರಾಗಿ ಬಾಳಲು ಅವಕಾಶಮಾಡಿಕೊಡುವ ಸಲುವಾಗಿ Uni–Y ಮತ್ತು Uni–Hi (University YMCA, High School YMCA) ಕ್ಲಬ್‌ಗಳು ಭಾರತದಾದ್ಯಂತ ಸ್ಥಾಪಿತವಾಗಿವೆ. ವಿವಿಧ ವಿಷಯಗಳನ್ನು ಕುರಿತು ಉಪನ್ಯಾಸ, ಚರ್ಚೆ, ನಾಟಕ, ಸಾರ್ವಜನಿಕ ಸಂಪರ್ಕ, ವಿಚಾರವಿನಿಮಯ ಮುಂತಾದ ಹಲವು ಉಪ–ಯುಕ್ತ ಕಾರ್ಯಕ್ರಮಗಳನ್ನು ಈ ಕ್ಲಬ್‌ಗಳು ನಡೆಸುತ್ತವೆ. ರೋಟರಿ ಹಾಗೂ ಲಯನ್ಸ್ ಸೇವಾ ಸಂಸ್ಥೆಗಳಂತೆಯೇ YMCA ಯ ಸುಮಾರು ೪೦ ಕ್ಲಬ್‌ಗಳು ದೇಶದಾದ್ಯಂತ ಸೇವಾಕಾರ್ಯದಲ್ಲಿ ಪ್ರವೃತ್ತವಾಗಿವೆ.

YMCA ವಸತಿ ಗೃಹಗಳನ್ನು ನಿರ್ಮಿಸಿ ಕಾರ್ಮಿಕರಿಗೂ ವಿದ್ಯಾರ್ಥಿಗಳಿಗೂ ಸಂದರ್ಶಕರಿಗೂ ಅನುಕೂಲ ಮಾಡಿಕೊಟ್ಟಿದೆ. ಇತ್ತೀಚೆಗೆ ಟೂರಿಸ್ಟ್‌ಗಳಿಗಾಗಿಯೇ ವಸತಿಗೃಹಗಳನ್ನು ನಿರ್ಮಿಸಿ YMCA ಹೊಸ ಹೆಜ್ಜೆ ಇಟ್ಟಿದೆ. ಮುಂಬಯಿಯ ಇಂಟರ್‌ನ್ಯಾಶನಲ್ ಹೌಸ್, ಹೊಸದಿಲ್ಲಿಯ ಟೂರಿಸ್ಟ್ ಹೋಟೆಲ್ ಈ ಮಾದರಿಯವು.

ಲಂಡನ್ನಿನಲ್ಲಿರುವ YMCA ಇಂಡಿಯನ್ ಸ್ಟೂಡೆಂಟ್ ಹೋಟೆಲ್ಲಿನ ಜನಕ ಕೆ. ಟಿ. ಪಾಲ್. ೧೯೨೦ ರಲ್ಲಿ ಇದನ್ನವರು ಸ್ಥಾಪಿಸಿದರು. ಭಾರತ ಹಾಗೂ ನೆರೆಹೊರೆಯ ದೇಶಗಳಿಂದ ಆ ದೇಶಕ್ಕೆ ಹೋಗುವ ನೂರಾರು ಯುವಕರಿಗೆ ಅದು ವಸತಿ ಸೌಲಭ್ಯವನ್ನು ನೀಡಿ ಆ ಕುರಿತ ಸಮಸ್ಯೆಗಳನ್ನು ನಿವಾರಿಸುತ್ತದೆ. ಕೆ. ಟಿ. ಪಾಲ್, ಎಸ್. ಕೆ. ದತ್ತ, ರಾಜಾ ಮಹಾರಾಜಾಸಿಂಗ್, ಸ್ಯಾಮ್ಯುಯೆಲ್ ರಂಗನಾಥನ್ ಬಿ. ಐ. ರಾಲಿಯಾ ರಾಂ, ಕೆ. ಎಂ. ಪಿ, ಲಿಪ್ ಮುಂತಾದ ಹಲವು ಮಂದಿ YMCA ಯಲ್ಲಿ ಸೇವೆ ಸಲ್ಲಿಸಿದ್ದಾರೆ. ಇವರಿಂದ YMCA ಖ್ಯಾತಿಪಡೆದಿದೆ.

YMCA ಇಂದು ನಿಂತಿರುವುದು, ಯಶಸ್ವಿಯಾಗಿ ಕಾರ್ಯ ನಿರ್ವಹಿಸುತ್ತಿರುವುದು ಅದರ ಸದಸ್ಯರಿಂದ ಶುಭಾಕಾಂಕ್ಷಿಗಳಿಂದ, ತಮ್ಮ ಬೌದ್ಧಿಕ ಶಕ್ತಿಯಿಂದ ಸಂಸ್ಥೆಗೆ ಚೇತನ ತುಂಬಿದ ಹಿಂದಿನ, ಇಂದಿನ ಮಹನೀಯರುಗಳಿಂದ. YMCA ಯಿಂದ ನೆರವು ಪಡೆದು ಬದುಕನ್ನು ಹಸನು ಮಾಡಿಕೊಂಡ ಪ್ರದೇಶ, ವ್ಯಕ್ತಿಗಳ ಕೆಲವು ಉದಾಹರಣೆಗಳು ಬೇಕಷ್ಟು ನಮ್ಮ ದೇಶದಲ್ಲೇ ನೋಡಸಿಕ್ಕುತ್ತವೆ. ✫

(ದಿ ಇಲ್‌ಸ್ಟ್ರೇಟೆಡ್ ವೀಕ್ಲಿಯ *The YMCA's Saga of Service in India* ಲೇಖನದ ಭಾವಾನುವಾದ)

---

## ಮಹಾತ್ಯಾಗ

ಕೇರಳದ ಆಧುನಿಕ ಚಿತ್ರಗಾರರ ಸಾಲಿಗೆ ಸೇರಿದ ಕಲಾವಿದ ಕೃಷ್ಣನ್ ಒಂದು ಹಳ್ಳಿಯಲ್ಲಿ ತನ್ನ ತಾಯಿ, ಪತ್ನಿ ಹಾಗೂ ಇಬ್ಬರು ಮಕ್ಕಳೊಂದಿಗೆ ಕಲಾಸೇವೆ ಮಾಡಿಕೊಂಡಿದ್ದರು. ಒಂದು ದಿನ ರಾತ್ರಿ ಅವರ ನೆರೆಯ ಮಾಪಿಳ್ಳೆಯೊಬ್ಬನ ಗುಡಿಸಲಿಗೆ ಬೆಂಕಿ ಹಿಡಿಯಿತು. ಉರಿಯುತ್ತಿದ್ದ ಮನೆಯೊಳಗೆ ಸಿಕ್ಕಿಕೊಂಡು ತನ್ನ ಇಬ್ಬರು ಮಕ್ಕಳನ್ನು ಹೊರತರಲಾರದೆ ಆವನು ಚಡಪಡಿಸತೊಡಗಿದ. ಆಗ ಕೃಷ್ಣನ್ ಧೈರ್ಯದಿಂದ ಒಳಗೆ ಪ್ರವೇಶಿಸಿ, ಆ ಮಕ್ಕಳನ್ನು ಸುರಕ್ಷಿತವಾಗಿ ಪಾರು ಮಾಡಿದರು. ಅವರ ದೇಹ ಮಾತ್ರ ಸುಟ್ಟುಹೋದುದರಿಂದ ಮೂರು ದಿನಗಳಲ್ಲಿ ಪರಲೋಕಕ್ಕೆ ತೆರಳಿದರು.

ಕಲ್ಲಿಕೋಟೆಯ "ಮಾತೃಭೂಮಿ" ಪತ್ರಿಕೆಯು ಕೃಷ್ಣನ್‌ರ ಕುಟುಂಬಕ್ಕೆ ಸಹಾಯ ಮಾಡಲು ತನ್ನ ಓದುಗರಲ್ಲಿ ಮಾಡಿಕೊಂಡ ಮನವಿಯ ಮೇರೆಗೆ ಕೆಲವೇ ಸಮಯದಲ್ಲಿ ರೂ. ೨೪,೦೦೦ ಗಳು ಸೇರಿದುವು. ಪತ್ರಿಕೆಯ ವ್ಯವಸ್ಥಾಪಕರು ಆ ಹಣವನ್ನು ಕೃಷ್ಣನ್‌ರ ಪತ್ನಿಗೆ ಕೊಡಲು ಬಂದಾಗ ಅವಳು "ಈ ಹಣದಿಂದ ಮನೆ ಕಳೆದುಕೊಂಡ ಆ ಮಾಪಿಳ್ಳೆಯ ಮನೆಯನ್ನು ಮೊದಲು ಕಟ್ಟಿಸಿ ಕೊಡಿರಿ. ಮನೆಯಿಲ್ಲದೆ ಅವನ ಬದುಕು ಅಸಹನೀಯವಾಗಿದೆ" ಎಂದಳಂತೆ. –ಹ. ರಾಮಕೃಷ್ಣಶಾಸ್ತ್ರಿ.

ಮುಸ್ತು ಮೂಲ: **ಎಲ್. ಎಲ್. ಕಾವಿಷ್** ಕನ್ನಡಕ್ಕೆ : **ಕುಂ. ವೀರಭದ್ರಪ್ಪ**

"ಹಾಶೀಮ್...ಅರೆ ಓ, ಹಾಶೀಮ್," ಹುಕ್ಕಾದಿಂದ ಹೊಗೆ ಕುಡಿಯುತ್ತ ಸಮುಂದರ್‌ಖಾನ್ ಕೂಗಿದ. ಒಳಗಿನಿಂದ ಓಡುತ್ತ ಬಂದ ಹಾಶೀಮ್.

"ಅಮ್ಮ ಏನ್ಮಾಡ್ತಿದ್ದಾಳೆ?" ಖಾನ್ ಹುಕ್ಕಾ ಪಕ್ಕಕ್ಕೆ ಸರಿಸುತ್ತ ಕೇಳಿದ.

"ಒಳಗೆ ಕೂತ್ಕೊಂಡು ಗುಲ್ನಾರ್‌ಗೆ ಜಡೆ ಹಾಕ್ತಿದ್ದಾಳೆ," ವಿನಯದಿಂದ ಉತ್ತರಿಸಿದ ಹಾಶೀಮ್. ಸಮುಂದರ್‌ಖಾನ್ ಏನೋ ಯೋಚಿಸುತ್ತಿರುವವನಂತೆ ತಲೆ ಹಾಕುತ್ತ ತೋಟದಲ್ಲಿ ಮಾಡಬೇಕಾಗಿರುವ ಕೆಲಸಗಳನ್ನು ಹೇಳಿ ಹಾಶೀಮ್‌ನನ್ನು ಹೊರಗೆ ಕಳಿಸಿದ.

ಹಾಶೀಮ್ ಹದಿನೈದೋ ಹದಿನಾರೋ ವರ್ಷದ ತರುಣ. ಸಮುಂದರ್‌ಖಾನನ ಹತ್ತಿರ ಚಾಕರಿ ಭೋಗುಳಿ ಹೊಟ್ಟೆ ಹೊರೆದು ಕೊಳ್ಳುತ್ತಿರುವ ನಿರ್ಗತಿಕ. ಪಠಾಣ ವಂಶದವನಾಗಿದ್ದರಿಂದ ಕಾಲು ಮೈ ಕೈ ತುಂಬಿಕೊಂಡು ಸೇಬುಹಣ್ಣಿನ ಬಣ್ಣದಿಂದಾಗಿ ಆಕರ್ಷಕವಾಗಿ ಕಾಣಿಸುತ್ತಾನೆ.

ನಲವತ್ತು ದಾಟುತ್ತಿರುವ ಸಮುಂದರ್‌ಖಾನನ ತಲೆಯಲ್ಲಿ ಅಲ್ಲಲ್ಲಿ ಬಿಳಿ ಕೂದಲು ಇಣುಕುತ್ತಿದ್ದರೂ ಠೀವಿ ಠೇಂಕಾರಗಳಿಗೆ ಕೊರತೆ ಇಲ್ಲ. ಆತನ ನೂರಾರು ಎಕರೆ ನಿಂಬೆ ಹಣ್ಣಿನ ತೋಟಗಳು ಬೆಟ್ಟದ ತಪ್ಪಲು ತುಂಬ ಹಚ್ಚಗೆ ಹರಡಿಕೊಂಡಿವೆ. ತೋಟದೊಳಗೆ ಪುರಾತನ 'ಬೈಟಾ' ಪದ್ಧತಿಯಲ್ಲಿ ಕಟ್ಟಿರುವ ಎರಡು ದೊಡ್ಡ ಮನೆಗಳಿವೆ. ತೋಟದ ಅಂಚಿನಲ್ಲಿರುವ ಭವ್ಯ ಮನೆಯಲ್ಲಿ ಅರವತ್ತು ದಾಟಿರುವ ಆತನ ವೃದ್ಧ ತಾಯಿ ಮತ್ತು ಹದಿಮೂರು ವಸಂತಗಳನ್ನು ಕಂಡಿರುವ ಗುಲ್ನಾರ್ ಎಂಬ ಹೆಸರಿನ ಚೆಲುವೆ ವಾಸಿಸುತ್ತಿದ್ದಾರೆ. ತೋಟದ ಮಧ್ಯದಲ್ಲಿರುವ ಮನೆಯಲ್ಲಿಯೇ ಸಮುಂದರ್‌ಖಾನ್ ಇರುವುದು. ಖಾನನ ಸೇವಕನಾಗಿ ಹಾಶೀಮ್ ಆತನ ಜೊತೆಯಲ್ಲಿ ಇರುತ್ತಾನೆ. ಖಾನನ ತಾಯಿಗೆ ಅರವತ್ತು ತುಂಬಿದ್ದರೂ ಮುದುಕಿಯಂತೆ ಕಾಣಿಸುವುದಿಲ್ಲ. ಬಲೂಚಿ ಹೆಂಗಸರಂತೆ ಅವಳೂ ಗಟ್ಟಿಮುಟ್ಟು. ಬದಾಮ್, ಪಿಸ್ತಾ, ಕಿಸ್‌ಮಿಸ್ ಸೇವಿಸುವುದರಿಂದಲೂ ಜನಾನಾದ ಕಠಿಣ ನಿಯಮಗಳನ್ನು ಪರಿಪಾಲಿಸುವುದರಿಂದಲೂ ವಯಸ್ಸು ಮೀರಿದ್ದರೂ ಅವಳಲ್ಲಿ ವೃದ್ಧಾಪ್ಯದ ಚಿಹ್ನೆಗಳು ಕಾಣಬರುವುದಿಲ್ಲ.

ಅಲ್ಲಿನ ಸಂಪ್ರದಾಯದಂತೆ ಸಣ್ಣವಳಿದ್ದಾಗಲೇ ಮದುವೆಯಾದಳು. ಹದಿನೈದರ ವಯಸ್ಸಿನಲ್ಲೆ ಸಮುಂದರ್‌ಖಾನನನ್ನು ಹಡೆದಿಟ್ಟಳು. ಅವಳಿಗೆ ಮಗನೆಂದರೆ ಪಂಚಪ್ರಾಣ. ಅಲ್ಲಲ್ಲಿ ಪ್ರಯತ್ನಿಸಿ ಮಗನಿಗೆ ಮೂರು ಬಾರಿ ಮದುವೆಮಾಡಿದಳು ಆದರೆ ಸೊಸೆಯಂದಿರು ಯಾರೂ ಮಗನ ಜೊತೆ ಕೊನೆವರೆಗೂ ಬಾಳಿ ಬದುಕಲಿಲ್ಲ.

ಒಂದು ಹಳೆ ರೋಗದಿಂದ ನರಳುತ್ತ ಖಾನನ ಮೊದಲ ಹೆಂಡತಿ ಬೆಟ್ಟದ ಕೆಳಗಿರುವ ಹಳ್ಳಿಯ ಒಂದು ಹಾಳುಮನೆಯಲ್ಲಿ ಹೆಣದಂತೆ ಬದುಕಿದ್ದಾಳೆ. ಕೆರ ಹಳೆಯದಾದರೆ ಬಿಸಾಕುತ್ತಾರಲ್ಲ, ಅದೇ ರೀತಿ ಹೆಣ್ಣನ್ನೂ ನೋಡುವುದು. ಎರಡನೆ ಹೆಂಡತಿ ಮದುವೆಯಾದ ಕೆಲವು ದಿನಗಳಲ್ಲಿ ಸತ್ತುಹೋದಳು. ಮೂರನೆಯ ಹೆಂಡತಿ ಪಮೀನಾ ಮದುವೆ ಮಾಡಿ ಮೂರು ವರ್ಷದಲ್ಲೆ ಯಾವನೋ ಒಬ್ಬ ಕಾಮುಕನ ಜೊತೆ ಓಡಿ ಹೋಗಲು ಪ್ರಯತ್ನಿಸಿ ಸಮುಂದರ್‌ಖಾನನ ಬಂದೂಕಿಗೆ ಬಲಿಯಾದಳು.

ಒಂದು ದಿನ ಮಧ್ಯರಾತ್ರಿಯಲ್ಲಿ ಪಮೀನಾ ತನ್ನ ಪ್ರಿಯಕರನೊಡನೆ ಸಪ್ಪಳವಿಲ್ಲದಂತೆ ಹೈದ್ರಾಬಾದ್ ಸಿಂಧ್ (ಪ್ರಾಂತ)ದ ಕಡೆ ನಡೆದಳು. ಅವರಿನ್ನೂ 'ಸಬ್‌ಚೀ' ಪ್ರದೇಶ ದಾಟುವಷ್ಟರಲ್ಲಿಯೇ ಸಮುಂದರ್‌ಖಾನ್ ಬಂದೂಕಿನ ಸಮೇತ ಪ್ರತ್ಯಕ್ಷನಾದ. ಕೋಪದಿಂದ ಕೆಂಡವಾಗಿದ್ದ ಆತ ಅಲ್ಲೇ ಅವರಿಬ್ಬರ ಪ್ರಾಣ ತೆಗೆದ.

ಆಗ ಅಲ್ಲಿ ಇದ್ದುದು ಆಂಗ್ಲರ ಆಳ್ವಿಕೆ. ಸಮುಂದರನ ವಿಚಾರಣೆ ನಡೆಯಿತು. ಸರಕಾರದ ಪರವಾಗಿ ಬಂದಿದ್ದ ಪೊಲಿಟಿಕಲ್ ಏಜೆಂಟ್ ಖಾನನ ಮೇಲಿದ್ದ ಎರಡು ಖೂನಿ ಕೇಸುಗಳ ವಿಚಾರಣೆ ನಡೆಸಿದ. ಆತ ತನ್ನ ಹೆಂಡತಿಯನ್ನು ಮಾತ್ರ ಕೊಂದಿದ್ದಲ್ಲಿ ಅಲ್ಲಿನ ಸಂಪ್ರದಾಯದ ಪ್ರಕಾರ ಕೊಲೆಯಾದವಳ ಒಡಹುಟ್ಟಿದವನಿಗೆ ಏಳೆಂಟುನೂರು ರೂಪಾಯಿ ಪರಿಹಾರ ಕೊಡಬೇಕಾಗಿ ಬರುತ್ತಿತ್ತು. ಅಕ್ಷಮ್ಯ ಅಪರಾಧಿಗಳಾಗಿದ್ದ ಅವರಿಬ್ಬರನ್ನೂ ಕೊಂದಿದ್ದರಿಂದ ಖಾನನನ್ನು ನಿರಪರಾಧಿ ಎಂದು ಘೋಷಿಸಿ ಬಿಡುಗಡೆ ಮಾಡಿದರು.

ಆ ದಿನಗಳಲ್ಲಿ ಸಮುಂದರ್‌ಖಾನ್ ಪರ್ವೀನಾಳನ್ನು ಅವಳ ತಂದೆ ಬಳಿ ಸಾವಿರ ರೂಪಾಯಿಗಳಿಗೆ ಕೊಂಡುಕೊಂಡಿದ್ದ. ಒಂದು ದಿನ ಅವಳ ತಂದೆ ಸ್ವತಃ ಬಂದು ತನ್ನ ಮಗಳ ರೂಪ ಲಾವಣ್ಯವನ್ನೂ ಹೊಗಳಿದ: "ನೀನೊಬ್ಬ ದೊಡ್ಡ ನಿಂಬೆ ತೋಟದ ಒಡೆಯ. ನನ್ನ ಮನೆಯಲ್ಲೊಂದು ಸುಂದರ ನಿಂಬೆ ಹೂ ಅರಳಿದೆ; ನೀನು ಅದರ ಒಡೆಯನೂ ಆಗಿಬಿಡು."

ಅವನ ಮಾತುಗಳನ್ನು ಕೇಳಿ ಆ ಸುಂದರಿಯನ್ನು ಒಂದು ಸಾರಿ ನೋಡಬೇಕೆನಿಸಿತು ಖಾನನಿಗೆ. ಆ ಮುದುಕನೂ ಒಪ್ಪಿದ. ಸಂಪ್ರದಾಯದಂತೆ ಒಂದು ಬೆಳದಿಂಗಳ ರಾತ್ರಿಯಲ್ಲಿ ಸಮುಂದರ್‌ಖಾನನ್ನು 'ಸೆಂವಟಿ'ಗೆ ಕರೆದೊಯ್ದು ತನ್ನ ಮಗಳನ್ನು ತೋರಿಸಿದ. ಗುಲಾಬಿ ಬಣ್ಣದ ಆ ಸುಂದರಿಯನ್ನು ನೋಡಿ ಖಾನ್ ಹುಚ್ಚನಾದ. ಆ ಅನುಪಮ ಸುಂದರಿಯನ್ನು ಅಪ್ಪಿ ಮುದ್ದಾಡಬೇಕೆನಿಸಿದರೂ ಅವಳ ತಂದೆ ಹಿಡಿದಿದ್ದ ಬಂದೂಕಿಗೆ ಹೆದರಿ ಸುಮ್ಮನಾದ. ಪರಸ್ತ್ರೀಯರನ್ನು ನೋಡಬಹುದು, ಮಾತಾಡಿಸಬಹುದು; ಆದರೆ ಮುಟ್ಟುವುದು ಮಾತ್ರ ಅಪರಾಧ. ಇದು ಬಲೂಚಿ ಪಠಾಣರ ಆಚಾರ.

ಅವಳನ್ನು ನೋಡಿದಂದಿನಿಂದ ಸಮುಂದರ್ ಖಾನನ ಮನಸ್ಸಿನಲ್ಲಿ ಸುಂಟರಗಾಳಿ ಎದ್ದಿತು. ಮನೆಗೆ ಬಂದವನೆ ತಾಯಿಗೆ ಹೇಳಿದ. ಆತನ ಎರಡನೆ ಹೆಂಡತಿ ಸತ್ತು ಅಲ್ಲಿಗೆ ನಲವತ್ತು ದಿನಗಳಾಗಿದ್ದವು. ಮಗ ಮೂರನೆ ಮದುವೆ ಮಾಡಿಕೊಳ್ಳುವುದನ್ನು ಕೇಳಿ ಬಹಳ ಸಂತಸಗೊಂಡಳು ಆತನ ತಾಯಿ. ಅವಳ ಮನಸ್ಸಿನಲ್ಲಿಯೂ ಅದೇ ಇತ್ತು. ಎರಡು ಮದುವೆಯಾದರೂ ಆತನಿಗೆ ಮಕ್ಕಳಾಗಿರಲಿಲ್ಲ. ಮೊಮ್ಮಕ್ಕಳನ್ನು ನೋಡದೆ ಕಣ್ಣು ಮುಚ್ಚುವುದೆಂದರೆ ಮುದುಕಿಗೆ ಇಷ್ಟವಿರಲಿಲ್ಲ.

"ನೀನು ಪಠಾಣ ವಂಶದ ಗಂಡಸು, ಎಷ್ಟು ಮದ್ವೆಯಾದ್ರೂ ಅಡ್ಡ ಬರೋರು ಯಾರು? ಜಲ್ದಿ ಮದುವೆಯಾಗು" ಎಂದು ಉತ್ತೇಜನ ನೀಡಿದಳು.

ಕೆಲವು ದಿನಗಳಲ್ಲಿಯೇ ಹೂವಾಗಿ ಆತನ ಮನೆಗೆ ಕಾಲಿಟ್ಟ ಪರ್ವೀನಾ ಹೆಣ್ಣಾಗಿ ಘಮಾಡಿಸಿದಳು. ಅವಳೂ ಖಾನನ ತಾಯಿಯ ಮಡಿಲಿಗೆ ಒಂದು ಮಗುವನ್ನೂ ನೀಡಲಿಲ್ಲ. ಆ ಎರಡು ವರ್ಷದಲ್ಲಿಯೇ ಗಂಡನ ತುಪಾಕಿಗೆ ಬಲಿಯಾಗಿ ಹೋದಳು.

ಆ ಕೇಸಿನಿಂದ ಹೊರಗೆ ಬಂದ ಮೇಲೆ ಆತನ ಮದುವೆ ಬಗ್ಗೆ ಚಿಂತಿಸತೊಡಗಿದಳು ಆತನ ತಾಯಿ. ಆ ಸಮಯದಲ್ಲೆ ಬಹಳ ಪರಿಚಯಸ್ಥನೊಬ್ಬ ಅವಳನ್ನು ಸಂಧಿಸಿದ. ಆತನ ಹಿಂದೆ ಇನ್ನೂ ಹತ್ತು ವರ್ಷ ತುಂಬಿರದಿದ್ದ ಚಿನ್ನದಗೊಂಬೆಯಂಥ ಕಿಶೋರಿ ಬೇರೆ ಇದ್ದಳು. ಸಮುಂದರ್‌ಖಾನನ ತಾಯಿ ಆ ಹುಡುಗಿಯನ್ನು ಬಳಿಗೆ ಕರೆದು ಮುದ್ದಾಡಿ, "ಅವಳು ಬೆಳೆದು ದೊಡ್ಡವಳಾದರೆ ಇವಳನ್ನು ನೋಡಲಿಕ್ಕೆ ಎರಡು ಕಣ್ಣು ಸಾಲವು. ಬೆಳದಿಂಗಳಿನಂತಿರ್ತಾಳೆ," ಅಂದಳು.

ಆತ ಹಿಂದೆಯೇ ಹೇಳಿದ: "ಅದಕ್ಕೇನು, ನೀನೇ ಸಾಕಿಕೊ, ನಿನ್ನ ಮಗ ಸಮುಂದರನಿಗಾಗಿ" ಮುದುಕಿ ಆತನ ಮಾತಿಗೆ ಒಪ್ಪಿ ಆ ಹುಡುಗಿಯನ್ನು ಆರುನೂರಕ್ಕೆ ಕೊಂಡುಬಿಟ್ಟಳು. ಅವಳ ಹತ್ತಿರ ದಿನಕ್ಕೊಂದು ಚಂದದಲ್ಲಿ ಬೆಳೆಯುತ್ತಿರುವುದು ಅದೇ ಹುಡುಗಿ ಗುಲ್ನಾರ್; ಇವಳಿಗೀಗ ಹದಿಮೂರು.

ನಲವತ್ತು ವರ್ಷದ ತನ್ನ ಮಗನಿಗೆ ಹೆಂಡತಿಯಾಗಲು ಈ ಹುಡುಗಿ ಎಂದು ಋತುಮತಿಯಾಗುವಳೋ ಎಂದು ಎದುರು ನೋಡುತ್ತಿದೆ ಮುದುಕಿ. ಗುಲ್ನಾರ್ ಬೇಗನೇ ಋತುಮತಿಯಾದಲ್ಲಿ ಅವರಿಗೆ ಜಲ್ದಿ ನಿಕಾ ಮಾಡಿ ಅವರ ಪ್ರೇಮಜೀವನವನ್ನು ಕಣ್ತುಂಬ ನೋಡಿ 'ಹಜ್' ಯಾತ್ರೆಗೆ ಹೋಗಬೇಕೆಂಬುದು ಅವಳ ಕೊನೆಯ ಆಸೆ.

೨

ದಿನಗಳು ಉರುಳಿದಂತೆ ಗುಲ್ನಾರಳ ಮೈ ಒಂದೊಂದು ಚೆಂದ ಪಡೆಯತೊಡಗಿತು. ಆದರೆ ಆ ಚೆಲುವೆ ಪ್ರೌಢೆಯಾಗುವ ಲಕ್ಷಣ ಕಾಣಿಸಲಿಲ್ಲ. ತಾಯಿಯ ಕೋರಿಕೆ ನೆರವೇರಿಸಲು ಸಮುಂದರ್ ಖಾನ್ ಹುಡುಗಿಯರು ಜಲ್ದಿ ಪುಷ್ಪವತಿಯಾಗುವಂತೆ ಮಾಡುವ ಉಷ್ಣಯುಕ್ತ ಆಹಾರಗಳಾದ ಪೋಬಾನಿ, ಅಖ್‌ರೋಟ, ಬದಾಮ್, ಪಿಸ್ತಾ. ಇವೆಲ್ಲವನ್ನು ಒತ್ತಾಯದಿಂದ ಗುಲ್ನಾರಳಿಗೆ ತಿನ್ನಿಸತೊಡಗಿದ. ಇವೆಲ್ಲವುಗಳಿಗಿಂತ ಗುಲ್ನಾರಳಿಗೆ ನಿಂಬೆಹಣ್ಣೆಂದರೆ ಬಹಳ ಇಷ್ಟ. ಈ ಸಿಹಿ ಹುಳಿ ಮಿಶ್ರಿತ ಹಣ್ಣಿನಿಂದ ಮೈ ಶೀತವಾಗಬಹುದೆಂದು ಭಾವಿಸಿ ಖಾನನೂ ಅವನ ತಾಯಿಯೂ ಅವುಗಳನ್ನು ಮುಟ್ಟಲೂ ಬಿಡುತ್ತಿರಲಿಲ್ಲ.

ಕನಿಷ್ಟಪಕ್ಷ ಪುರುಷ ಸ್ಪರ್ಶದಿಂದಾದರೂ ಬಾಲೆ ಪ್ರೌಢೆಯಾಗಬಹುದೆಂಬ ಆಸೆಯಿಂದ ತನ್ನ ಮಗ ಸ್ನಾನ ಮಾಡುವಾಗ ಬೇಕೆಂದೇ ಗುಲ್ನಾರಳನ್ನು ಬಚ್ಚಲು ಮನೆಗೆ ಕಳುಹಿಸತೊಡಗಿದಳು. ಸಮುಂದರ್‌ಖಾನ್ ಆ ಕಿಶೋರಿಯ ಮೈ ನಜ್ಜುಗಜ್ಜುಮಾಡಿ ಮತ್ತೊಮ್ಮೆ ಸ್ನಾನ ಮಾಡಿಸಿ ಕಳಿಸತೊಡಗಿದ. ಗುಲ್ನಾರ್ ಮುದ್ದು ಮುದ್ದಾಗಿ ಸಂಕೋಚ ಪ್ರದರ್ಶಿಸಿ ಮೀನಿನ ಮರಿಯಂತೆ ಆತನ ಕೈಯಿಂದ ಜಾರಿಕೊಳ್ಳುವುದೂ ನಗುವುದೂ ಮುನಿಸಿಸುವುದೂ ಮಾಡುತ್ತಿದ್ದಳು.

ಆದರೆ ಮುದುಕಿಯ ಈ ಪ್ರಯೋಗ ಕೂಡ ನಿಷ್ಪ್ರಯೋಜಕವಾಯಿತು. ಹುಡುಗಿ ಇನ್ನೂ ರಜಸ್ವಲೆಯಾಗಲಿಲ್ಲ. ಅಲ್ಲಾನ ಮೇಲೆ ಎಲ್ಲ ಭಾರ ಹಾಕಿ ಎದುರು ನೋಡತೊಡಗಿದಳು ಸಮುಂದರ್‌ಖಾನನ ತಾಯಿ.

ಖಾನನ ಸೇವಕ ಹಾಶೀಮ್ ಮತ್ತು ಗುಲ್ನಾರ್ ಸಾಧಾರಣ ಸಮವಯಸ್ಕರಾದ್ದರಿಂದ ಸಮಯ ಸಿಕ್ಕಾಗಲೆಲ್ಲ ಜೊತೆ ಜೊತೆಯಾಗಿ ತಿರುಗುವುದು, ಆಡುವುದು ಮಾಡತೊಡಗಿದರು. ನಿಂಬೆಹಣ್ಣು ತಿನ್ನಬಾರದೆಂದು ಕಟ್ಟಳೆ ವಿಧಿಸಿದ ಮೇಲಂತೂ ಗುಲ್ನಾರ್ ಕಳ್ಳಿಯಂತೆ ತೋಟದೊಳೆಕ್ಕೆ ನುಗ್ಗಿ ತನಗಿಷ್ಟವಾದ ಹಣ್ಣನ್ನು ತಿಂದು ಬರುತ್ತಿದ್ದಳು. ಒಮ್ಮೊಮ್ಮೆ ಈ ದಿಸೆಯಲ್ಲಿ ಹಾಶೀಮ್ ಸಹಕರಿಸುತ್ತಿದ್ದ ಕೂಡ.

ಒಂದು ದಿನ ಅವಳ ಕಳ್ಳತನ ಮುದುಕಿಯ ಕಣ್ಣಿಗೆ ಬಿತ್ತು. ಗುಲ್ನಾರಳ ಜುಟ್ಟು ಹಿಡಿದು ಕೇಳಿದಳು, "ನಿಂಬೆಹಣ್ಣು ಕಳ್ಳತನದಿಂದ ತಿಂದೆ ಅಲ್ವಾ?" ಆ ಹುಡುಗಿ ಏನು ಉತ್ತರಿಸಬೇಕೆಂದು ತಿಳಿಯದೆ ಕಕ್ಕಾಬಿಕ್ಕಿಯಾದಾಗ ಹಾಶೀಮ್ ಮುಂದಕ್ಕೆ ಬಂದು ಆ ತಪ್ಪು ತನ್ನದು ಅಂದ. ಆ ಮುದುಕಿ ಮೊದಲೇ ಮುಂಗೋಪಿ. ಬೆತ್ತ ತೆಗೆದುಕೊಂಡು ಆತನ ಮೈ ಚರ್ಮ ಸುಲಿಯುವಂತೆ ಬಾರಿಸಿದಳು. ಏಟು ತಿಂದ ಹಾಶೀಮ್ ತುಟಿ ಬಿಚ್ಚಿ ದುಃಖ ಪ್ರಕಟಿಸಲಿಲ್ಲ. ಆ ದೃಶ್ಯ ನೋಡಿದ ಗುಲ್ನಾರಳ ತುಂಬುಗಣ್ಣುಗಳು ತೇವಗೊಂಡವು. ಆಗಲೆ ಆತನ ಮೇಲೆ ಅಭಿಮಾನ ಪ್ರೀತಿಗಳನ್ನು ಅವಳ ಎಳೆ ಹೃದಯ ತುಂಬಿಕೊಂಡಿತು.

ಇತ್ತೀಚೆಗೆ ಸಮುಂದರ್‌ಖಾನನ ತಲೆಯಲ್ಲೊಂದೇ ಅಲ್ಲ, ಗಡ್ಡ ಮೀಸೆಯಲ್ಲೂ ಅಲ್ಲಲ್ಲಿ ಬಿಳಿ ಕೂದಲು ಕಾಣಿಸಿಕೊಳ್ಳತೊಡಗಿದವು. ಮಧ್ಯಾಹ್ನ ನಮಾಜು ಮಾಡಿದ ನಂತರ ಮನೆಯ ಅಂಗಳದ ಮರದ ನೆರಳಿನಲ್ಲಿ ಮಂಚದ ಮೇಲೆ ಮಲಗಿಕೊಂಡು ಗುಲ್ನಾರಳನ್ನು ಕೇಕೆ ಹಾಕಿ ಕರೆದು ಅವಳ ಕೈಯಿಂದ ಆ ಬಿಳಿಕೂದಲುಗಳನ್ನು ಕೀಳಿಸಿಕೊಳ್ಳುವ ಪರಿಪಾಠ ಇಟ್ಟುಕೊಂಡ. ಗುಲ್ನಾರ್ ಕಿಮುಕ್ ಎನ್ನದೆ ಆ ಕೂದಲುಗಳನ್ನು ಕೀಳುತ್ತಿದ್ದಳು.

ಈಗೀಗ ಗುಲ್ನಾರಳ ಮೈಯಲ್ಲಿ ಪಿಸ್ತಾ ಬದಾಮ್ ಹಣ್ಣುಗಳ ಪ್ರಭಾವ ಕಾಣಬರತೊಡಗಿತು. ಅವಳ ರಂಗುರಂಗಿನ ಮೈಯೊಳಗೆ ಸೊಬಗು ಕೊನರಿತು. ಅವಳ ಬೊಗಸೆಗಣ್ಣುಗಳಲ್ಲಿ ನಾಚಿಕೆಯ ಛಾಯೆ ಕಾಣಿಸತೊಡಗಿತು. ನಿಜ ಹೇಳಬೇಕೆಂದರೆ ಪ್ರಪಂಚದ ಸೌಂದರ್ಯವೆಲ್ಲ ಗುಲ್ನಾರಳ ದೇಹದಲ್ಲಿ ಮನೆಮಾಡಿದಂತೆ ತೋರತೊಡಗಿತು. ಅರಣ್ಯದಲ್ಲಿ ದಾರಿ ತಪ್ಪಿದ ಜಿಂಕೆ ಅವಳ ಸೌಂದರ್ಯ ನೋಡಿ ತನ್ನೆರಡು ಕಣ್ಣುಗಳನ್ನು ಕಾಣಿಕೆ ರೂಪದಲ್ಲಿ ನೀಡಿ ಹೋಗಿದೆ ಅನ್ನಿಸುತ್ತಿದೆ ಅವಳ ಕಣ್ಣುಗಳನ್ನು ನೋಡಿದರೆ. ಅಪ್ಪಿತಪ್ಪಿ ಈಗ ಆ ಕಣ್ಣುಗಳಿಗೇನಾದರೂ ಹಾಶೀಮ್ ಬಿದ್ದಲ್ಲಿ ನಾಚಿಕೆಯಿಂದ ಮುಚ್ಚಿಕೊಂಡು ಬಿಡುತ್ತವೆ. ಅವನ ಮಧುರ ಸ್ವರ ಕೇಳಿಸಿಕೊಳ್ಳ

ತೊಡಗುತ್ತಲೆ ಅವಳ ಎಳೆ ಹೃದಯ ಡವಗುಟ್ಟ ತೊಡಗುತ್ತದೆ.

೩

ಒಂದು ದಿನ ಮಧ್ಯಾಹ್ನ ಸಮಂದರ್‌ಖಾನ್ ಮರದ ಕೆಳಗೆ ಮಂಚದ ಮೇಲೆ ಮಲಗಿಕೊಂಡು "ಗುಲ್ನಾರ್" ಎಂದು ಕೂಗಿದ. ಆತನ ಧ್ವನಿ ಕೇಳಿಯೂ ಕೇಳದವಳಂತೆ ಕೂತಲ್ಲಿಂದ ಕದಲದೆ ದೂರದಲ್ಲಿ ಹೂ ಪೋಣಿಸತೊಡಗಿದಳು. ಖಾನನ ತಾಯಿ ಬಿಸಿಲಿನಲ್ಲಿ ಕೂತುಕೊಂಡು ಕೂದಲು ಉದುರುತ್ತಿದ್ದ ತಲೆಗೆ ಅದಾವುದೋ ಎಣ್ಣೆ ಹಚ್ಚಿಕೊಳ್ಳುತ್ತಿದ್ದಳು. ಅಷ್ಟರಲ್ಲಿ ಖಾನ್ ಮತ್ತೊಂದು ಬಾರಿ ಕೇಕೆಹಾಕಿದ. ಗುಲ್ನಾರ್ ತಲೆಯನ್ನೆತ್ತಿ ಆತನ ಕಡೆಗೊಮ್ಮೆ ನೋಡಿ ತಗ್ಗಿಸಿದಳು. ತನ್ನ ಮಗ ಕರೆದರೂ ಅವಳು ಸುಮ್ಮನೆ ಕುಳಿತಿರುವುದನ್ನು ಕಂಡು ಮುದುಕಿ ಪ್ರೀತಿಯಿಂದ ಕೂಗಿ ಹೇಳಿದಳು, ಯಾತಕ್ಕೊ "ಕರೀತಿದ್ದಾನೆ, ಹೋಗಮ್ಮಾ ಹೋಗು."

"ಊಹೊಂ......ನಾನು ಹೋಗುವುದಿಲ್ಲ" ಅಂದಳು ಗುಲ್ನಾರ್ ತಲೆ ಅಲ್ಲಾಡಿಸುತ್ತ.

ಮುದುಕಿ ಆಶ್ಚರ್ಯದಿಂದ ಗುಲ್ನಾರ್ ಕಡೆ ನೋಡಿದಳು. ಗುಲ್ನಾರ್ ನಾಚಿಕೆಯಿಂದ ಸೆರಗನ್ನು ಉಬ್ಬಿದ ಎದೆ ಮೇಲೆ ಎಳೆದುಕೊಂಡು ಪಕಪಕ ನಕ್ಕಳು. ಮುದುಕಿ ಎಣ್ಣೆ ಬಟ್ಟಲನ್ನು ಎತ್ತಿಕೊಂಡು ಗುಲ್ನಾರಳ ಬಳಿ ಬಂದು ಅವಳನ್ನು ಒಂದು ಬಾರಿ ಚುಂಬಿಸಿ, "ಯಾಕೆ ನಾಚಿಕೆ? ಹೇಳು" ಎಂದು ಪೀಡಿಸತೊಡಗಿದಳು. "ಗುಲ್ನಾರ್" ಎಂದು ಖಾನ್ ಮತ್ತೊಮ್ಮೆ ಕೂಗಿದ. "ಇನ್ನು ನೀನು ಹೋಗು...ಇಲ್ಲದಿದ್ದರೆ ಅವನೇ ಬಂದು ನಿನ್ನ ಹೊತ್ಕೊಂಡು ಹೋದಾನು, ಹೋಗು ನಾಚ್ಕೋಬೇಡ...ಹೋಗು" ಎಂದು ಖಾನನ ತಾಯಿ ರಮಿಸಿ ಹೇಳಿದಳು.

ಹಾಗೇ ಮಲಗಿಕೊಂಡಿದ್ದ ಖಾನ್ ರೆಪ್ಪೆ ಮಿಟುಕಿಸದಂತೆ ಅವರ ಕಡೆಗೇ ನೋಡುತ್ತಿದ್ದ. ಅಷ್ಟರಲ್ಲಿ ಯುವಕ ಹಾಶೀಮ್ ಆತನ ಹತ್ತಿರ ಬಂದು, "ಕತ್ತರಿ ಕೊಡಿ ಧಣಿ, ಹೆಕ್ಕಿಗೆ ಬೆಳೆದಿರುವ ಜುಟ್ಟು ಕತ್ತರಿಸು ಎಂದು ಅಮ್ಮ ಹೇಳಿದ್ದಾರೆ...ಆ ಜುಟ್ಟು ನಿಮಗೆ ಚಂದ ಕಾಣಿಸುವುದಿಲ್ಲವಂತೆ." ಎಂದು ಹೇಳಿದ. ಸಮಂದರ್‌ಖಾನನ ಕಣ್ಣುಗಳು ಆ ಯುವಕನ ದೇಹದ ಮೇಲೆಲ್ಲಾ ಅಡ್ಡಾಡಿ ಏನೋ ಬೆದಕಿನೋಡಿದವು. "ಮಂಜು ಸರಿಯುವ ಚಳಿ ದಿನಗಳು ಬಂದವು, ಬರುವ ತಿಂಗಳೇ ಚಳಿಗಾಲ...ನೀನು ಹಾಕಿಕೊಂಡಿರುವ ಕೋಟು ಬೇರೆ ಹರಿದುಹೋಗಿವೆ. ಆ ಚಳಿ ತಡೆದುಕೊಳ್ಳಲಾರೆ... ಈ ಹೊಸ ಕೋಟನ್ನು ನೀನೇ ತೆಗೆದುಕೊ" ಎಂದು ಹೇಳಿ ಸಮಂದರ್‌ಖಾನ್ ದಿಂಬಿನ ಕೆಳಗಿದ್ದ ಕತ್ತರಿ ತೆಗೆದುಕೊಟ್ಟ.

"ನಂಗೆ ಚಳಿ ಆಗೋದಿಲ್ಲ...ನನ್ನ ಮೈ ಯಾವಾಗ್ಲೂ ಬೆಚ್ಚಗಿರ್ತದೆ; ಆ ಕೋಟನ್ನು ನೀವೇ ಇಟ್ಕೊಳ್ಳಿ" ಎಂದು ಬೆವೆತ ಎದೆ ಹಣೆ ಒರಸಿಕೊಳ್ಳುತ್ತ ಹೊರಟುಹೋದ ಹಾಶೀಮ್. ಖಾನ್ ಬಾಯಿ ತೆರೆದುಕೊಂಡು ಅವನ ಕಡೆಗೆ ನೋಡಿದ. ಇಂಥ ಚಳಿಯಲ್ಲೂ ಇವನು ಬೆವೆತನಲ್ಲಾ ಎಂದು ಅಚ್ಚರಿಪಟ್ಟ. ತಾನು ಮಲಗಿಕೊಳ್ಳುವಾಗ ಮಂಚದ ಕೆಳಗೆ ಬೆಂಕಿ ಕುಂಡ ಇಟ್ಟುಕೊಂಕೊಂಡು ನಾಲ್ಕು ಉಣ್ಣೆ ಶಾಲು ಹೊದ್ದುಡರೂ ಚಳಿ ಕಡಿಮೆಯಾದಂತೆನಿಸದು. ತಾನು ಮೊಟ್ಟೆ-ಮಾಂಸ ತಿಂದರೂ ಎಲುಬಿನ ಸೂಪ್ ಕುಡಿದರೂ ತನ್ನ ದೇಹ ಯಾವಾಗಲೂ ತಣ್ಣಗೆ ಇರುತ್ತದೆ. ಈರುಳ್ಳಿ ರೊಟ್ಟಿ ತಿನ್ನೋ ಇವನು ಯಾಕೆ ಬೆಚ್ಚಗಿರೋದೊ? ಎಂದೆಲ್ಲಾ ಆಲೋಚಿಸುತ್ತಿದ್ದ ಸಮಂದರ್‌ಖಾನ್‌ಗೆ ನಿಜಸ್ಥಿತಿ ಅರ್ಥವಾಗಿ ಸಣ್ಣಗೆ ಮುಗುಳ್ನಕ್ಕ. ಅವನಿ'ಗ ಯೌವನಾವಸ್ಥೆಯಲ್ಲಿ ಕಾಲಿರಿಸುತ್ತಿರುವ ಬಿಸಿ ರಕ್ತದ ತರುಣ, ತಾನೋ ತಂಪು ರಕ್ತದ ಮಧ್ಯವಯಸ್ಕ, ಇದೇ ತನ್ನ ಮತ್ತು ಅವನ ಮಧ್ಯೆ ಇರುವ ವ್ಯತ್ಯಾಸ. ತಾನು ಇನ್ನು ಮೇಲೆ ಯೌವನ ಮರಳಿ ಪಡೆಯಲು ಪ್ರಯತ್ನ ನಡೆಸಬೇ-ಕೆಂದುಕೊಂಡ ಮನಸ್ಸಿನಲ್ಲಿ.

*

ಚುಮು ಚುಮು ಬೆಳಕಿನಲ್ಲಿ ಎದ್ದು ಗುಲ್ನಾರ್ ಖಾನನ ತಾಯಿಗೆ ನಮಾಜಿಗಾಗಿ ನೀರು ಕೊಡ ಹೋದಳು.

"ಈ ದಿನ ನಾನು ಕೆಳಗಿನ ಊರಿಗೆ ಹೋಗಿ ಆಗಾ ಪೀರ್ ಬಾಬಾ ದರಗಾದಲ್ಲಿ ಪ್ರಾರ್ಥನೆ ಮಾಡ್ತೇನೆ. ಹಾಗೆಯೆ ನಿನಗೂ ಆತನ ಆಶೀರ್ವಾದ

ತೆಗೆದುಕೊಂಡು ಬರ್‍ತೇನೆ. ಮದುವೆಯ ಮುಹೂರ್ತ ಆತನಿಂದ್ಲೆ ಇಡಿಸ್ಬೇಕು..." ಎಂದು ಹೇಳುತ್ತಾ ಅವಳು ನಗನಾಣ್ಯಗಳಿದ್ದ ಚಿಕ್ಕ ಪೆಟ್ಟಿಗೆ ತೆರೆದು ತೋರಿಸಿದಳು.

ಅದರಲ್ಲಿದ್ದ ಕೆಲವು ಆಭರಣಗಳು ಕಣ್ಣು ಕೋರೈಸಿದವು. ಆಕೆ ಕೆಲವು ಕಾಸು ತೆಗೆದುಕೊಂಡು ಬೀಗ ಹಾಕಿ ಕೀಲಿಯನ್ನು ಗುಲ್ನಾರಳಿಗೆ ಕೊಡುತ್ತ, "ಇದನ್ನು ನಿನ್ನತ್ರ ಇಟ್ಕೊ, ಸಮುಂದರ್ ಕೇಳಿದ್ರೆ ಕೊಡುವಿಯಂತೆ...ನಾನು ದರಗಾಕ್ಕೆ ಹೋದೆ ಅಂತ ಹೇಳು. ಮದ್ವೆ ಮುಗಿಸೋವರ್ಗ ನಂಗೆಲ್ಲಿದೆ ವಿಶ್ರಾಂತಿ!" ಅಂದಿತು ಮುದುಕಿ ನಗುತ್ತ.

ಗುಲ್ನಾರಳ ಕಣ್ಣುಗಳಲ್ಲಿ ಅಚ್ಚರಿ ಮಿನುಗಿತು. "ಮದುವೆ? ಯಾರ್‍ಗೆ!" ಎಂದು ಕೇಳಿದಳು, ಅರ್ಥವಾಗದೆ.

"ಇನ್ನಾರ್‍ಗೆ? ನನ್ನ ಮಗನಿಗೆ," ಎನ್ನುತ್ತ ಎದ್ದಳು ಮುದುಕಿ.




"...ಬಾಮ್ಮ. ಪಾಪ್ಪಾನೂ ಕೂತ್ಕೊಳ್ಳಿ..."

ಗುಲ್ನಾರಳ ಕಣ್ಣುಗಳು ಅಚ್ಚರಿಯಿಂದ ಮತ್ತಷ್ಟು ಅಗಲವಾದವು. 'ಈ ಇಳಿವಯಸ್ಸಿನ ಸಮುಂದರ್‌ಖಾನನಿಗೆ ಮದುವೆಯೂ?' ಅಂದು ಕೊಂಡು ಮುದುಕಿಗೆ 'ಅಮ್ಮಾ ಈಗಾಗ್ಲೆ ಆತನಿಗೆ ಮೂರ್ ಮದ್ವೆ ಮಾಡಿರುವೆ...ಈಗ ಆತನಿಗೆ ಮತ್ತೆ ಮದ್ವೆ ಮಾಡ್ತೀಯಾ...?ಪಾಪ ಆ ಹಾಶೀಮ್‌ಗೆ ಒಂದು ಸಾರಿ ಕೂಡ ಮದುವೆಯಾಗಲಿಲ್ವಲ್ಲಾ' ಎಂದು ಕೇಳಬೇಕೆಂದುಕೊಂಡಳು. ಗಂಟಲ ವರೆಗೆ ಬಂದ ಮಾತುಗಳು ನಾಲಿಗೆಗೆ ಬಾರದೇ ಹೋದವು. ಮುದುಕಿ ಮೈ ತುಂಬ ಶಾಲು ಹೊದ್ದುಕೊಂಡು ಮನೆಯಿಂದ ಹೊರಗೆ ನಡೆದಳು. ಹೊರಗೆ ಮಂಜು ಕುಪ್ಪೆ ಕುಪ್ಪೆಯಾಗಿ ಬಿದ್ದಿದೆ, ಗಿಡಮರಗಳು ಮಂಜಿನ ಹೊಗೆಯಲ್ಲಿ ಮುಳುಗಿಹೋಗಿವೆ. ಇನ್ನೂ ಬೆಳಗಾಗಿರಲಿಲ್ಲ. ಮುದುಕಿ ಅಲ್ಲಿಂದ ಕದಲಿದ ಮೇಲೆ ಗುಲ್ನಾರ್ ಕದ ಮುಚ್ಚಿ ಕಟ್ಟೆ ಮೇಲೆ ಒರಗಿ ಹಾಶೀಮ್‌ಗೆ ಒಂದು ಸಾರೆಯೂ ಮದುವೆಯಾಗಲಿಲ್ಲವಲ್ಲ ಎಂದು ಯೋಚಿಸಿದಳು.

*

ದೂರದಲ್ಲಿದ್ದ ಮಸೀದೆಯಿಂದ ಕೇಳಿಬರುತ್ತಿದ್ದ ಸುಶ್ರಾವ್ಯ ಪ್ರಾರ್ಥನೆಯಿಂದ ಖಾನನ ಮಬ್ಬು ನಿದ್ದೆ ಓಡಿಹೋಯಿತು. ಆಕಳಿಸುತ್ತಾ ಕೂತು ಕೊಂಡ. ನೆಲದ ಮೇಲೆ ಮಲಗಿಕೊಂಡು ಇನ್ನೂ ಗಾಢ ನಿದ್ರೆಯಲ್ಲಿದ್ದ ಹಾಶೀಮ್. ಅವನು ಹೊದ್ದು ಕೊಂಡಿದ್ದ ದುಪ್ಪಟ್ಟಿ ಕಾಲಿನವರೆಗೆ ಸರಿದು ಹೋಗಿತ್ತು. ಹರಿದಿದ್ದ ಕೋಟನ್ನು ಮಡಿಸಿ ತಲೆ ದಿಂಬಿಗಿಟ್ಟುಕೊಂಡಿದ್ದ.

'ಹುಡುಗನಿಗೆ ಚಳಿ ಆಗ್ತಾ ಇಲ್ವಾ!' ಹೊಟ್ಟೆ ಕಿಚ್ಚಿನಿಂದ ಬೆಂದುಹೋದ ಸಮುಂದರ್‌ಖಾನ್ ಚಳಿಯಿಂದಾಗಿ ರಾತ್ರಿಯಲ್ಲಾ ತಾನು ನಡುಗುತ್ತಿದ್ದುದನ್ನು ಜ್ಞಾಪಿಸಿಕೊಂಡ.

ತಾನು ಯೌವನದ ಹೂದೋಟದಿಂದ ಹೊರಗೆ ಬಂದೆನೇ? ತನ್ನ ಜೀವನದಲ್ಲಿ ಇನ್ನು ಮುಂದೆ ಮಂಜು ಕವಿದಿರುವ ಮಬ್ಬು ಮೈದಾನ ಮಾತ್ರ ಉಳಿದಿದೆಯೇ? ಕಳೆದುಹೋದ ತಾರುಣ್ಯ ಅದೊಂದು ಸುಂದರ ಕನಸೇ?'

'ಸಾಧ್ಯವಿಲ್ಲ! ಸಾಧ್ಯವೇ ಇಲ್ಲ' ಅಂದುಕೊಂಡ ಖಾನ್.

ತನ್ನ ಮುಂದೆ ಗುಲ್ನಾರ್ ಇದ್ದಾಳೆ. ತುಂಬ ಯೌವನದಿಂದ ಥಳಥಳಿಸುತ್ತಿರುವ ಗುಲ್ನಾರ್ ಮುದಿಹಾವು ಪೊರೆ ಕಳಚಿ ಮತ್ತೆ ಯೌವನ ಪಡೆಯುವಂತೆ ತಾನು ಈ ವೃದ್ಧಾಪ್ಯವನ್ನು ಕಿತ್ತೊಗೆದು ಯೌವನವನ್ನು ಹೊದ್ದುಕೊಳ್ಳಬೇಕು. ದಿನಾಲು ಹುಟ್ಟಿ ಮುಳುಗುತ್ತಿರುವ ಸೂರ್ಯ ಮುದುಕನಲ್ಲವಾ! ಎಷ್ಟೋ ವರ್ಷಗಳಿಂದ ಸೌಂದರ್ಯದ ಮುದ್ದೆಯಾಗಿ ಉಳಿದಿರುವ ಚಂದ್ರನನ್ನು ಯಾರೂ ಮುದುಕನೆನ್ನುವದಿಲ್ಲವಲ್ಲಾ! ಮತ್ತೆ ಯಾಕೆ ಮನುಷ್ಯನನ್ನು ಮುದುಕನೆಂದು ಜರಿಯುವುದು!

ತಾನು ಯೌವನವನ್ನು ಪಡೆಯಬೇಕು, ಪಡೆದೇ ತೀರಬೇಕು ಎಂದು ಒಂದು ದೃಢನಿಶ್ಚಯಕ್ಕೆ ಬಂದು ಕೆಳಗೆ ಮಲಗಿಕೊಂಡಿದ್ದ ಹಾಶೀಮನನ್ನು ಗುದ್ದಿ ಎಬ್ಬಿಸಿದ. ಖಾನನ ಗುದ್ದಿಗೆ ಬೆಚ್ಚಿ ಎದ್ದು ಹಾಶೀಮ್ ತಲೆದಿಂಬಿಗಿದ್ದ ಕೋಟು ತೊಟ್ಟುಕೊಂಡ.

"ಊರೊಳಕ್ಕೆ ಹೋಗಿ ಕೋಳಿ ಮರಿಗಳನ್ನು ಕೊಂಡು ಮಧ್ಯಾಹ್ನಕ್ಕೆ ಬರ್ತೇನೆ. ದಿಲ್‌ದಾರ್ ಖಾನ್ ಬಂದ್ರೆ ಆತನ ಹತ್ರ ಹಣ ಇಸ್ಕೊಂಡು ನಿಂಬೆ ಹಣ್ಣಿನ ಬುಟ್ಟಿಗಳನ್ನು ಕೊಡು. ಹಾಗೆ ಹಣವನ್ನು ಅಮ್ಮನಿಗೆ ಕೊಡಲು ಮರೆಯಬೇಡ," ದುಪ್ಪಟ್ಟಿಯನ್ನು ಮೈ ತುಂಬ ಹೊದ್ದುಕೊಳ್ಳುತ್ತಾ ಸಮಂದರ್‌ಖಾನ್ ಹೇಳಿದ.

"ಕೋಳಿ ಮರಿಗಳಿಗಾಗಿ ಅಷ್ಟು ದೂರ ಯಾಕೆ ಹೋಗ್ತೀರಿ? ಕೆಳಗಿನ ಹಟ್ಟಿಗಳಲ್ಲೆ ಸಿಗ್ತಾವೆ" ಅಂದ ಹಾಶೀಮ್ ಆಶ್ಚರ್ಯದಿಂದ.

"ದಡ್ಡ...ನಂಗೆ ಬೇಕಾಗಿರೋವು ಸಾಮಾನ್ಯ ಕೋಳಿಗಳಲ್ಲ...ಕುಲಂಗೀರ್ ಜಾತಿ ಕೋಳಿಮರಿಗಳು..." ಎನ್ನುತ್ತ ಹೊರಗೆ ನಡೆದ ಖಾನ್.

ಚಪ್ಪರದಲ್ಲೆ ನಿಂತು ದೂರದಲ್ಲಿ ಹೊಗೆ ಮಬ್ಬಿನಲ್ಲಿ ಕರಗಿ ಹೋಗುತ್ತಿದ್ದ ಆತನನ್ನೆ ನೋಡುತ್ತ ನಿಂತ ಹಶೀಮ್, ಖಾನನ ಆಕೃತಿ ಕಣ್ಣಿಗೆ ಕಾಣದಾದ ಮೇಲೆ ಆ ವಿಷಯವನ್ನು ಆತನ ತಾಯಿಗೆ ಹೇಳೋಣವೆಂದು ಆ ಮನೆ ಕಡೆ ಕಾಲು ಹಾಕಿದ.

ಬಾಗಿಲು ತಟ್ಟಿದ ಕೂಡಲೆ ಕಣ್ಣೆದುರಿಗೆ ಗುಲ್ನಾರ್ ಪ್ರತ್ಯಕ್ಷಳಾದಳು. "ಅಮ್ಮಾಜಾನ್... ನಮಾಜ್ ಮಾಡುತ್ತಿದ್ದಾಳೋ?" ಕೇಳಿದ ಹಾಶೀಮ್.

"ಇಲ್ಲ. ಸ್ವಲ್ಪ ಹೊತ್ತಿನ ಕೆಳಗೆ ಊರಿನೊಳಕ್ಕೆ ಹೋದಳು. ದರಗಾದಲ್ಲಿ ನಮಾಜ್ ಮಾಡ್ತಾಳಂತೆ."

"ಖಾನ್ ಕೂಡ ಹೋದ ಕುಲಂಗೀರ್ ಜಾತಿ ಕೋಳಿಮರಿ ತರಲಿಕ್ಕೆ."

ಗುಲ್ನಾರ್ ತಲೆ ಅಲ್ಲಾಡಿಸುತ್ತ, "ಆತನ ಮದುವೆ ಇದೆಯಲ್ಲ ...... ಅದಕ್ಕಾಗಿ ಇರ್ಬೇಕು ಆ ಕೋಳಿಗಳು," ಅಂದಳು.

"ಮದುವ್ಯಾ!" ಹಾಶೀಮ್ ಆಶ್ಚರ್ಯದಿಂದ ಬಾಯಿ ತೆರೆದ.

"ಹೌದು! ನಿಂಗೆ ಗೊತ್ತಿಲ್ವಾ...ಅಲ್ಲೆ ನಿಂತೀಯಲ್ಲಾ...ಒಳಗೆ ಬಾ ಚಹಾ ಕುಡಿಯೋಣ" ಗುಲ್ನಾರ್ ಒಳಗೆ ನಡೆಯುತ್ತ ಅಂದಳು.

ಇಬ್ಬರೂ ಕೆಂಡಗಳಿದ್ದ ಅಗ್ಗಿಷ್ಟಿಕೆಯ ಮುಂದೆ ಕುಳಿತರು. ಸಣ್ಣ ಚರಕಲಿಯಲ್ಲಿ ನೀರು ಕಾಯಿಸಿ ಅದರಲ್ಲಿ ಚಹಾ ಪುಡಿ ಹಾಕಿದಳು ಗುಲ್ನಾರ್.

"ಹಾಶೀಮ್...ನಿನ್ನೊಂದು ಮಾತು ಕೇಳ್ತೀನೆ... ಮದುವೆ ಅಂದ್ರೆ ಏನು?" ಕಪ್ಪಿಗೆ ಸಕ್ಕರೆ ಹಾಕುತ್ತ ಕೇಳಿದಳು.

"ಮದ್ವೆ ಅಂದ್ರೆ...ಶೋಭನ..." ಎನ್ನುವಾಗ ತೊದಲಿದ ಹಾಶೀಮ್.

"ಶೋಭನದಲ್ಲೇನು ಮಾಡ್ತಾರೆ?" ಗುಲ್ನಾರಳ ಕಂಠದಲ್ಲಿ ಕುತೂಹಲ ಇತ್ತು.

"ನಂಗೊತ್ತಿಲ್ಲ. ಖಾನ್ ಬಂದನಂತ್ರ ಕೇಳಿ ಹೇಳ್ತೀನಿ," ಅಮಾಯಕ ಹಾಶೀಮ್ ಅಂದ.

"ನೀನ್ಯಾಕೆ ಮದ್ವೆ ಮಾಡ್ಕೊಳ್ಳಿಲ್ಲ?"

"ನಂಗೆ!? ...ಮದ್ವೆ!?" ಹಾಶಿಮ್ ನಕ್ಕ.

"ಏನು! ನಮ್ಮ ಖಾನ್ ಮೂರು ಸಾರಿ ಮದ್ವೆ ಮಾಡಿಕೊಂಡಿದ್ದಾನೆ?"

"ಆತನೋ ನಿಂಬೆ ತೋಟದ ಯಜಮಾನ... ನನ್ನ ಹತ್ರ ಏನಿದೆ ಅಂತ ಮದ್ವೆಯಾಗೋದು!"

ಗುಲ್ನಾರ್ ಆತನ ಕಡೆ ಮನಸ್ಸು ಕರಗಿ ನೋಡಿದಳು. ಹಾಶೀಮ್ ನಾಚಿಕೆಯಿಂದ ಹರಿದಿದ್ದ ಕೋಟಿನಲ್ಲಿ ಮುಖ ಮುದುಗಿಸಿಕೊಂಡ. ಗುಲ್ನಾರ್ ನಗುತ್ತ ಚಹಾವನ್ನು ಕಪ್ಪಿಗೆ ಸುರುವಿ ಆತನ ಕಡೆ ಚಾಚಿದಳು. ಹಾಶೀಮ್ ತೆಗೆದುಕೊಳ್ಳುವಾಗ ಆತನ ಬೆರಳುಗಳು ಆಕೆಯ ಬೆರಳಿಗೆ ತಗುಲಿ ಇಬ್ಬರ ದೇಹಗಳಲ್ಲೂ ರಕ್ತ ಕಾದು ಉಕ್ಕಿತು.

ಗುಲ್ನಾರಳ ಕಣ್ಣುಗಳು ನಾಚಿಕೆಯಿಂದ ಮುಚ್ಚಿಕೊಂಡವು.

ಹೊರಗೆ ಮಂಜನ್ನು ಸೀಳುತ್ತ ಸೂರ್ಯ ಉದಯಿಸುತ್ತಿದ್ದಾನೆ. ಮಂಜು ಕರಗಿ ನೀರಾಗಿ ಹರಿಯುತ್ತಿದೆ. ಈಗ ಆ ದೊಡ್ಡ ನಿಂಬೆ ತೋಟಕ್ಕೆ ಅವರೇ ಯಜಮಾನರು. ಇಬ್ಬರೂ ತೋಟದಲ್ಲಿ ನುಗ್ಗಿ ಬೇಕಾದ ಹಣ್ಣುಗಳನ್ನು ಕಿತ್ತು ಒಬ್ಬರ ಬಾಯಿಯಿಂದ ಒಬ್ಬರು ಕಿತ್ತು ತಿನ್ನತೊಡಗಿದರು. ಆಲದಲ್ಲಿ ಆ ಎರಡು ಹೃದಯಗಳು ಒಂದಾದವು. ಸೂರ್ಯಕಿರಣಗಳು ಮಂಜಿನ ಹನಿಯಲ್ಲಿ ಕಲೆತು ನೀಲಾಗಸದಲ್ಲಿ ಇಂದ್ರಧನಸ್ಸು ಸೃಷ್ಟಿಸಿದಂತೆ ಅವರ ಹೃದಯದಲ್ಲಿ ಪ್ರೇಮವೆಂಬ ಮಳೆಬಿಲ್ಲು ರೂಪಗೊಂಡಿತು.

ಆಡುತ್ತ ಹಾಡುತ್ತ ಇಬ್ಬರೂ ಪಕ್ಕದಲ್ಲಿದ್ದ ಬೆಟ್ಟವೇರಿದಾಗ ಕೆಳಗ ದೂರದಲ್ಲಿ ನರಗಳಂತೆ ಹಬ್ಬಿದ್ದ ದಾರಿಗಳು ಕಾಣಿಸಿದವು ಗುಲ್ನಾರಳಿಗೆ.

"ಹಾಶೀಮ್ ಆ ದಾರಿಗಳು ಎಲ್ಲಿಗೆ ಹೋಗುತ್ತವೆ?" ಕೇಳಿದಳು. ಕುತೂಹಲದಿಂದ.

ಆತ ಹಾದಿಗಳ ಕಡೆ ಪರೀಕ್ಷಾತ್ಮಕವಾಗಿ ನೋಡಿ, "ಆ ತುದಿಯಲ್ಲಿ ಬೆಳ್ಳಗೆ ಕಾಣಿಸುವ ಹಾದಿ ಅಫಘಾನಿಸ್ತಾನದ ಕಡೆ ಹೋಗ್ತದೆ...ಎಡಕ್ಕಿರುವ ಹಾದಿ ಭಾರತದ ಕಡೆ ಹೋಗ್ತದೆ...ಮಧ್ಯ ಕಾಣಿಸ್ತದಲ್ಲಾ ಆ ದಾರಿ ಕಾಫರಿಸ್ತಾನದ ಕಡೆ ಹೋಗ್ತದೆ...ಬಹಳ ವರ್ಷಗಳ ಹಿಂದೆ ನಮ್ಮ ಅಜ್ಜನ ಜೊತೆ ನಾನು ಆ ಕಡೆ ಹೋಗಿದ್ದೆ" ಎಂದ ಅನುಭವಿಕನಂತೆ.

೪

ಖಾನನ ಮನೆಗೆ ನಲವತ್ತು ಕುಲಂಗೀರ್ ಕೋಳಿ ಮರಿಗಳು ಬಂದವು. ದಿನಾಲು ಬೆಳಿಗ್ಗೆ ಜೋಳದ ಕಾಳುಗಳನ್ನೂ ಗೋದಿ ಹಿಟ್ಟನ್ನೂ ತಿನ್ನಿಸುತ್ತ ಕಾಪಿತುಕೊಳ್ಳುತ್ತಾನೆ ಹಾಶೀಮ್. ಸಮುಂದರ್ ಖಾನ ಬಂದು ಅದರಲ್ಲಿ ಯಾವುದೋ ಒಂದು ದ್ರವ ಹಾಕುತ್ತಾನೆ. ತಕ್ಷಣ ಆ ಹಿಟ್ಟು ಕೆಂಪಗಾಗುತ್ತದೆ. ಕುತೂಹಲ ಅದುಮಿಟ್ಟುಕೊಳ್ಳಲಾಗದೆ ಒಂದು ದಿನ ಹಾಶೀಮ್ ಕೇಳಿಯೇ ಬಿಟ್ಟ: "ದಿನಾಲು ಹಿಟ್ಟಿನಲ್ಲಿ ಏನೋ ಹಾಕ್ತೀರಲ್ಲಾ?"

"ಅದರ ಹೆಸರು ಷಂಗರಫ್ ಆ ಹಿಟ್ಟಿನಿಂದ ಮಾಡಿದ ರೊಟ್ಟಿ ತಿಂದ್ರೆ ಹಣ್ಣು ಹಣ್ಣು ಮುದುಕ ಕೂಡ ಇಪ್ಪತ್ತು ವರ್ಷದ ಯುವಕನಾಗ್ತಾನೆ," ಖಾನ್ ನಗುತ್ತಾ ಅಂದ.

ಮಧ್ಯರಾತ್ರಿಯಾಗುತ್ತಿರುವಾಗ ನಿಶ್ಯಬ್ಧ ಆವರಿಸುತ್ತಿರುವಾಗ, ಸಮುಂದರ್‌ಖಾನ್ ಮೈಮರೆತು ನಿದ್ದೆ ಮಾಡುತ್ತಿರುವಾಗ ಕಳ್ಳ ಹೆಜ್ಜೆ ಇಡುತ್ತ ಮೆಲ್ಲನೆ ಹೊರಗೆ ಬರುತ್ತಾನೆ ಹಾಶೀಮ್. ಸರಿಯಾಗಿ ಅದೇ ಸಮಯದಲ್ಲಿ ಮುದುಕಿ ನಿದ್ದೆಯಲ್ಲಿ ಕರಗಿಹೋಗಿರುವುದನ್ನು ನೋಡಿ ಗುಲ್ನಾರ್ ಸಪ್ಪಳಮಾಡದೆ ಹೊರಗೆ ಬರುತ್ತಾಳೆ...ಆಕೆಯ ದುಂಡು ಮುಖವನ್ನು ಎದೆಗೆ ಅವುಚಿಕೊಂಡು ಅವಳ ಕೆಂದುಟಿಗಳ ನಡುವೆ ನಿಂಬೆಹಣ್ಣಿನ ರಸವನ್ನು ಹನಿಹನಿಯಾಗಿ ಇನುಕಿಸುತ್ತಾನೆ ಹಾಶೀಮ್. ಎಲುಬು ಕೊರೆಯುವ ಚಳಿ ಅವರ ಬಳಿ ಸುಳಿಯುವುದಿಲ್ಲ. ತಾರುಣ್ಯದ ಹಸಿಹಸಿ ಆಸೆಗಳನ್ನು ಈಡೇರಿಸುವಲ್ಲಿ ಪ್ರಕೃತಿಯೂ ಸಹಕರಿಸುತ್ತದೆ, ಅಲ್ಲವೆ!

ಸಮುಂದರ್‌ಖಾನನ ತಾಯಿ ಮದುವೆ ಮುಹೂರ್ತ ಇಡಿಸಿದಳು. ಆಕೆಯ ಲೆಕ್ಕದ ಪ್ರಕಾರ ಆವೊತ್ತಿಗೆ ಸರಿಯಾಗಿ ಮದುವೆಗೆ ನಲವತ್ತೆರಡು ದಿನಗಳೇ ಉಳಿದಿರುವುದು. ಒಂದು ದಿನ ಮುಂಚಿತವಾಗಿ ಆಗಾಪೀರ್ ಅಲ್ಲಿಗೆ ಬರುತ್ತಾರೆ. ಅವರ ಪವಿತ್ರ ಹಸ್ತದಿಂದಲೇ ನಿಖಾತತಂಗ ನಡೆಯುವುದು. ಆ ನಿಖಾತತಂಗಕ್ಕೆ ಮೊದಲೇ ಸಮುಂದರ್ ನಲವತ್ತು ಕೋಳಿಗಳನ್ನು ದಿನಕ್ಕೊಂದರಂತೆ ತಿಂದು ಕಳೆದುಹೋದ ತಾರುಣ್ಯವನ್ನು ಪುನಃ ಮೈಗೂಡಿಸಿಕೊಳ್ಳಬೇಕಿದೆ.

*

ಆ ದಿನ ಬೆಳಿಗ್ಗೆ ನಿದ್ದೆಯಿಂದೆದ್ದು ಕೋಳಿಗಳಿಗೆ ಜೋಳ ತಿನ್ನಿಸುವ ಮಾಮೂಲು ಕೆಲಸ ಮಾಡುತ್ತಿದ್ದಾನೆ ಹಾಶೀಮ್. ಅಷ್ಟರಲ್ಲಿ ಅಲ್ಲಿಗೆ ಬಂದ ಸಮುಂದರ್‌ಖಾನ್ "ಈ ದಿನ ಇವುಗಳಿಗೆ ಜೋಳ ತಿನ್ನಿಸಬೇಡ," ಅಂದ ಕತ್ತಿ ಸವರುತ್ತ.

"ಮತ್ತೇನು ತಿನ್ನಿಸಬೇಕು?" ಕೇಳಿದ ಹಾಶೀಮ್.

"ನೋಡ್ತಾ ಇರು," ಎಂದು ಅದರಲ್ಲಿಂದ ಒಂದು ಕೋಳಿ ಮರಿ ಹಿಡಿದು ಯಾವುದೋ ಒಂದು ಮಂತ್ರ ಗುಣುಗಿ ಅದರ ಕೊರಳು ಕತ್ತರಿಸಿದ ನಂತರ ಆ ಮರಿಯಿಂದ ಖೈಮಾ ಮಾಡಿ

ಉಳಿದ ಕೋಳಿಮರಿಗಳ ಮುಂದೆ ಹಾಕಿದ. ಕೂಡಲೆ ಅವೆಲ್ಲ ಮಾಂಸದ ಮೇಲೆ ಮುಗಿ ಬಿದ್ದು ತಿಂದು ಮುಗಿಸಿದವು.

ಅದೇ ರೀತಿ ಪ್ರತಿದಿನ ಒಂದು ಕೋಳಿ ಮರಿ ಖೈಮಾದ ರೂಪದಲ್ಲಿ ಉಳಿದ ಕೋಳಿಗಳಿಗೆ ಆಹಾರವಾಗುತ್ತ ಹೋಯಿತು. ಕೊನೆಗೆ ಉಳಿದ ಕೋಳಿ ಮೂವತ್ತೊಂಬತ್ತು ಮರಿಗಳನ್ನು ತಿಂದು ಬಲಿತು ಹೆಮ್ಮೆಯಿಂದ ಠೇಂಕರಿಸುತ್ತಿತ್ತು.

ನಲವತ್ತನೇ ದಿನ ಸಮಂದರ್‌ಖಾನ್ ಅದನ್ನು ಕೂಡ ಅಲ್ಲಾನ ಹೆಸರಿನಲ್ಲಿ ಹಲಾಲ್ ಮಾಡಿ ಸ್ವಲ್ಪ ಹೊತ್ತು ಜೇನುತುಪ್ಪದ ಪಾತ್ರೆಯಲ್ಲಿ ನೆನೆಯಿಟ್ಟು, ನಂತರ ತುಂಡು ತುಂಡುಮಾಡಿ ನುಂಗಿಬಿಟ್ಟ ಅಷ್ಟೇ. ಅಷ್ಟು ಭಯಂಕರ ಚಳಿ ಯಲ್ಲೂ ಆತನ ದೇಹ ಬಿಸಿಯಾಯಿತು.

ಇತ್ತೀಚೆಗೆ ಯುವಕನಾದ ಖಾನನ ಮದುವೆಗೆ ಕೇವಲ ಇನ್ನು ಎರಡು ದಿನಗಳು ಮಾತ್ರ ಬಾಕಿ ಉಳಿದಿರುವುದು.

ಆ ರಾತ್ರಿ ಗುಲ್ನಾರ್ ನಿದ್ದೆ ಮಾಡದೆ ಒದ್ದಾಡಿ ದಳು. ಸಮಂದರ್‌ಖಾನನ ತಾಯಿಗೆ ನಿದ್ದೆ ಹತ್ತಿ ಗೊರಕೆ ಹೊಡೆಯುವರೆಗೆ ಕಾದಿದ್ದು ಬೆಕ್ಕಿನಂತೆ ಕಳ್ಳಹೆಜ್ಜೆ ಇಡುತ್ತ ಮನೆಯಿಂದ ಹೊರಗೆ ನಡೆ ದಳು. ಹೊರಗೆ ಹಿಟ್ಟು ಚಲ್ಲಿದಂತೆ ಬೆಳದಿಂಗಳು. ತೋಟದಲ್ಲಿ ಎಡವುತ್ತ ಹಾಶೀಮ್ ಮಲಗಿ ಕೊಳ್ಳುವ ಖಾನನ ಮನೆಗೆ ನಡೆದಳು.

ಕಿಟಕಿಯಿಂದ ಒಳಗೆ ಇಣುಕಿದಳು. ಖಾನನ ಗೊರಕೆ ಹುಲಿಯ ಗರ್ಜನೆಯಂತೆ ಕಿವಿಗೆ ಬಿತ್ತು. ನೆಲದ ಮೇಲೆ ಹಾಶೀಮ್ ಮುದುಡಿ ಮಲಗಿ ಕೊಂಡಿರುವುದು ಕಂಡು ನಾಲ್ಕೈದು ಚಿಟಿಕೆ ಹೊಡೆದಳು. ಆ ಪ್ರೇಮಸಂಕೇತಕ್ಕೆ ಹಾಶೀಮ್ ಮೆಲ್ಲನೆ ಮುಖ ಹೊರಳಿಸಿ ನೋಡಿದ. ಕಿಟಕಿಯ ಪಕ್ಕದಲ್ಲಿ ನಿಂತಿರುವ ಗುಲ್ನಾರಳನ್ನು ಕಂಡು ಆತನ ಮನಸ್ಸಿನಲ್ಲಿ ಕೋಟಿ ಕೋಟಿ ಬಯಕೆಗಳು ಗರಿ ಬಿಚ್ಚಿದವು. ಕೋಟು ತೊಟ್ಟುಕೊಂಡು ಹೊರಗೆ ನಡೆದ. ಅವರಿಬ್ಬರ ಹೃದಯಗಳ ಡವಡವ ಹೆಚ್ಚಾಯಿತು. ಅವನ ಕಿವಿಯಲ್ಲಿ ಗುಲ್ನಾರ್ ಉಸುರಿ ಸಿದಳು, "ಹಾಶೀಮ್...ನನ್ನ ಜೊತೆ ಬರ್ತೀಯಾ?"

"ಎಲ್ಲಿ! ತೋಟಕ್ಕೊ?"

"ಅಲ್ಲ...ಇವೊತ್ತು ನೀನೂ ಖಾನ್ ಆಗ್ಬೇಕು."

"ಅದು ಹೇಗೆ ಸಾಧ್ಯ? ನನ್ನ ಹತ್ರ ತೋಟ, ಮನೆ ಏನಿದೆ?"

ಮುಖದಲ್ಲಿ ಗಂಭೀರತೆ ತಂದುಕೊಂಡು ಗುಲ್ನಾರ್, "ಈ ಭೂಮಿಯೆಲ್ಲಾ ಇನ್ನು ಮೇಲೆ ನಮ್ಮದೆ! ಎಲ್ಲಾದ್ರೂ ಓಡಿಹೋಗೋಣ ಬಾ."

ಹಾಶೀಮ್ ಅಚ್ಚರಿಯಿಂದ ಆಕೆಯತ್ತ ನೋಡಿದ, "ನಾಳೆ ನಿನ್ನ ಮದ್ವೆ ಇದೆ ಮರೆತು ಹೋಯಿತೆ?"

"ಅದಕ್ಕೇ ಈ ಜಾಗ ಬಿಡ್ಬೇಕು...ನೀನು ನನ್ನೊತೆ ಬಾರದೇ ಇದ್ರೂನು ನಾನು ಮಾತ್ರ ಇಲ್ಲಿರ ಲಾರೆ," ಅಂದು ಹಿಂತಿರುಗಿ ನೋಡದೆ ಮುಂದೆ ನಡೆದಳು ಗುಲ್ನಾರ್. ಸ್ವಲ್ಪ ಹೊತ್ತು ಅವಳ ಕಡೆ ನೋಡುತ್ತ ಯೋಚಿಸಿದ ಹಾಶೀಮ್ ಅವಳ ಹಿಂದೆಯೇ ನಡೆದ. ಬೆಟ್ಟ ಇಳಿಯುತ್ತಿದ್ದ ಗುಲ್ನಾರ್ ಹಿಂತಿರುಗಿ ನೋಡಿದಳು, "ಈಗ ಯಾಕೆ ಬಂದೆ?"

"ಸಂಗೊತ್ತಿಲ್ಲ ಯಾಕ ಬರ್ತಿನಂತೆ. ಸಮಂದರ ಖಾನ್ಗೆ ಗೊತ್ತಾದ್ರೆ ಬಂದೂಕು ತಗೊಂಡು ಬರ್ತಾನೆ ನಮ್ಮ ಹಿಂದೆ."

"ಬಂದ್ರೆ ಏನ್ಮಾಡ್ತಾನೆ?"

"ಸುಟ್ಟುಬಿಡ್ತಾನೆ."

"ಯಾರ್ನ? ನನ್ನಾ?"

"ನಿನ್ನಲ್ಲ! ನನ್ನ."

ಗುಲ್ನಾರ್ ಆತನನ್ನು ಗಟ್ಟಿಯಾಗಿ ಅಪ್ಪಿಕೊಂಡು, "ಆ ಬಂದೂಕಿನ ಗುಂಡು ನಿನ್ನೇನೂ ಮಾಡಲಾರದು. ನಾನಡ್ಡ ನಿಲ್ತೇನೆ...ಆ ಗುಂಡಿಗೆ ನನ್ನ ಬಲಿ ಕೊಡ್ತೇನೆ," ಅಂದಳು.

"ಆ ಪರಿಸ್ಥಿತಿ ಬರೋದ್ಕಿಂತ ಮೊದ್ಲು ನಾವಿ ಲ್ಲಿಂದ ಹೋಗೋಣ...ನಡೆ...ಓಡು..." ಎನ್ನುತ್ತ ಅವಳ ಕೈ ಹಿಡಿದುಕೊಂಡು ಓಡತೊಡಗಿದ ಹಾಶೀಮ್.

ಬೆಳ್ಳಿ ರಸದಂತೆ ಬಿದ್ದಿದ್ದ ಬೆಳದಿಂಗಳಿನಲ್ಲಿ ಇಬ್ಬರೂ ಬೆಟ್ಟ ಇಳಿಯತೊಡಗಿದರು. ಆ ಕಡೆ ತಾಯಿ ಯ ಧ್ವನಿ ಕಿವಿಗೆ ಬಿದ್ದು ಬೆಚ್ಚಿ ಕಣ್ಣು ತೆರೆದ ಖಾನ್.

"ಏನ್ ನಡೀತವ್ಮಾ?...ಯಾಕೆ ಹಾಗೆ ಅರಚ್ತಿ-ದ್ದೀಯಾ?" ಅಂದ ಖಾನ್ ಮಂಚದಿಂದ ಇಳಿ ಯುತ್ತ. ಗಾಯಗೊಂಡ ಹುಲಿಯಂತೆ ಮುದುಕಿ ಆವೇಶದಿಂದ ಏದುಸಿರು ಬಿಡುತ್ತಿದ್ದಾಳೆ.

# ಶಬ್ದಾರ್ಥ ಚಿಂತಾಮಣಿ

— ೭ —

ಜಗತ್ತಿನ ಜನಸಂಖ್ಯೆಯ ಬಹು ದೊಡ್ಡ ಭಾಗದ ಮುಖ್ಯ ಆಹಾರ ಅಕ್ಕಿ. ಪೂರ್ವ ಅಥವಾ ದಕ್ಷಿಣ ಭಾರತವೇ ಅಕ್ಕಿಯ ಮೂಲ ಸ್ಥಾನವೆಂದು ಸಸ್ಯಶಾಸ್ತ್ರಜ್ಞರು ಗುರುತಿಸಿದ್ದಾರೆ. ಎಲ್ಲ ದಕ್ಷಿಣ ದ್ರಾವಿಡ ಭಾಷೆಗಳಲ್ಲಿ ಅದಕ್ಕೆ ಒಂದನ್ನೊಂದು ಹೋಲುವ ಪದಗಳಿವೆ. ಮೂಲ ದ್ರಾವಿಡದಲ್ಲಿ ಅದು **ಅರಿಶಿ** ಎಂದು ನಿರ್ಧರಿಸಬಹುದೆಂದು ಶಬ್ದಶಾಸ್ತ್ರಜ್ಞರ ಊಹೆ. ಇಲ್ಲಿಂದ ಅಕ್ಕಿ ಜಗತ್ತಿನ ಎಲ್ಲ ಕಡೆ ಯಾತ್ರೆ ಮಾಡಿತು. ಅದರೊಡನೆ ಅದರ ಹೆಸರು ಕೂಡ. ಇಂಗ್ಲೀಷಿನ **ರೈಸ್** (rice) ಫ್ರೆಂಚಿನ **ರೈಜ್** (riz) ಎಂಬ ಅಕ್ಕಿಯ ಹೆಸರುಗಳು ಗ್ರೀಕ್ ಮತ್ತು ಲ್ಯಾಟಿನ್ ಭಾಷೆಗಳ **ಒರೈಜಾ ಒರೈಜಾನ್** (oryza, oryzon) ಇಂದ ಹುಟ್ಟಿದವು; ಗ್ರೀಕು ಆ ಶಬ್ದವನ್ನು ಅರಬರ **ರುಜ್**, **ಅರುಜ್**‌ನಿಂದ ಎರವಲು ತೆಗೆದುಕೊಂಡಿತ್ತು. ಅರಬ್ಬಿ ಭಾಷೆ ಅದನ್ನು ದ್ರಾವಿಡ **ಅಕ್ಕಿಯ** ತಮಿಳು ರೂಪವಾದ **ಅರಿಶಿ(ಚಿ)**ಯಿಂದ ತೆಗೆದುಕೊಂಡಿತ್ತು. ಅಕ್ಕಿಯನ್ನು ಯುರೋಪಿಗೆ ಪರಿಚಯ ಮಾಡಿಕೊಟ್ಟವರು ಪ್ರಾಚೀನ ಕಾಲದಿಂದ ಇಲ್ಲಿಗೆ ವ್ಯಾಪಾರಕ್ಕೆ ಬರುತ್ತಿದ್ದ ಅರಬರೆಂಬ ಕಥೆಯನ್ನು ಈ ನಾಮಯಾತ್ರೆ ಹೇಳುತ್ತದೆ.

**ಅಕ್ಕಿ**ಯನ್ನು ೧೬ ನೇ ಶತಮಾನದಲ್ಲಿ ದ್ರಾವಿಡದಿಂದ ಅರಬ್ಬಿ ಮೂಲಕ ತೆಗೆದುಕೊಂಡ ಯುರೋಪಿಯನ್ ಭಾಷೆಗಳು ಭತ್ತದ ಹೆಸರನ್ನು ತೆಗೆದುಕೊಳ್ಳಲಿಲ್ಲ. ಭತ್ತಕ್ಕೆ ದ್ರಾವಿಡದಲ್ಲಿರುವುದು **ನೆಲ್ಲು** ಎಂಬ ಶಬ್ದ. ಆದರೆ ಇಂಗ್ಲೀಷಿನಲ್ಲಿ ಭತ್ತಕ್ಕಿರುವ **ಪ್ಯಾಡಿ** (paddy) ಎಂಬ ಹೆಸರು ಮಲಯ ಭಾಷೆಯಿಂದ ಬಂದದ್ದು. ಆ ಭಾಷೆಯಲ್ಲಿ ಭತ್ತಕ್ಕೆ **ಪಾದಿ** ಎಂದು ಅಭಿಧಾನ.

ಹಲಸಿಗೆ ಇಂಗ್ಲೀಷಿನಲ್ಲಿ **ಜ್ಯಾಕ್** (jack) ಎಂದು ಹೆಸರು ತಾನೆ. ಮಲೆಯಾಳ ಭಾಷೆಯಲ್ಲಿ ಹಲಸಿನ ಹಣ್ಣಿಗೆ **ಚಕ್ಕಪಳಂ** (ಪಳಂ=ಹಣ್ಣು) ಎಂದು ಹೆಸರು. ಪೋರ್ಚುಗೀಸ್ ವ್ಯಾಪಾರಿಗಳು ೧೬ನೇ ಶತಮಾನದಲ್ಲಿ ಚಕ್ಕವನ್ನು ತಮ್ಮ ಭಾಷೆಗೆ ಸರಿಯಾಗಿ **ಜಾಕ** ಮಾಡಿಕೊಂಡು ಯುರೋಪಿಗೆ ಒಯ್ದರು. ಇಂಗ್ಲೀಷರು ಅದನ್ನು ತಮ್ಮ ಭಾಷೆಗೆ ಹೊಂದುವಂತೆ **ಜ್ಯಾಕ್** ಮಾಡಿಕೊಂಡರು.

ಮಾವಿನ ಹಣ್ಣಿನ ಕಥೆಯೂ ಹಾಗೆಯೇ. ಕನ್ನಡ, ಮಲೆಯಾಳಿ, ತಮಿಳು ಎಲ್ಲದರಲ್ಲಿಯೂ **ಮಾಂಗಾಯಿ** ಎಂದು ಕರೆಯುವುದನ್ನು ಮಲಯ ಭಾಷೆಯಲ್ಲಿ **ಮಾಂಗಾ** ಅನ್ನುತ್ತಾರೆ. ಪೋರ್ಚುಗೀಸರು ೧೬ ನೇ ಶತಮಾನದಲ್ಲಿ ಅದನ್ನು **ಮಾಂಗಾ** ಎಂಬ ಹೆಸರಿನೊಡನೆ ತಮ್ಮಲ್ಲಿಗೆ ಒಯ್ದುದನ್ನು ಇಂಗ್ಲೀಷರು **ಮ್ಯಾಂಗೋ** ಎಂದು ಬದಲಿಸಿಕೊಂಡರು.

**ಹುಣಸೇಹಣ್ಣಿನ** ವಿಚಾರ ಮಾತ್ರ ಸ್ವಲ್ಪ ಬೇರೆ. ಅದೂ ಈ ದೇಶದಿಂದಲೇ ಪಶ್ಚಿಮಕ್ಕೆ ಹೋದದ್ದು. ಒಯ್ದವರೂ ಅರಬರೇ. ಆದರೆ ಹುಣಸೇಹಣ್ಣು ನೋಡುವುದಕ್ಕೆ ಅವರ ದೇಶದ **ಖರ್ಜೂರದ** ಹಣ್ಣಿನ ಹಾಗೇ ಇದೆ. ಖರ್ಜೂರಕ್ಕೆ ಅರಬ್ಬೀ ಭಾಷೆಯಲ್ಲಿ **ತಮರ್** ಎಂದು ಹೆಸರು. ಅವರು ಹುಣಸೇ ಹಣ್ಣನ್ನು **ತಮರ್ - ಹಿಂದೀ** — ಹಿಂದುಸ್ತಾನದ ಖರ್ಜೂರ ಎಂದು ಕರೆದರು. ಅದು ಇಂಗ್ಲೀಷರ ಬಾಯಲ್ಲಿ **ಟೆಮರಿಂಡ್** ಆಯಿತು.

ವಿದೇಶದಿಂದ ಬಂದ ಒಂದು ಪದಾರ್ಥವನ್ನು ಹೋಲುವಂಥಾದ್ದು ನಮ್ಮ ದೇಶದಲ್ಲಿ ಇದ್ದರೆ ಹುಣಸೇ ಹಣ್ಣಿಗೆ ಅರಬರು ನಾಮಕರಣ ಮಾಡಿದಂತೆ ನಮ್ಮ ದೇಶದ ಪದಾರ್ಥದ ಹೆಸರನ್ನು ಇಡುವುದು ಭಾಷೆಗಳಲ್ಲಿ ಕಂಡುಬರುವ ಒಂದು ಲಕ್ಷಣ. ಅಮೇರಿಕದ ಮೂಲ ನಿವಾಸಿಯಾದ **ಗೋಡಂಬಿ**ಯನ್ನು ಪೋರ್ಚುಗೀಸರು ಪಶ್ಚಿಮ ಕರಾವಳಿಗೆ ತಂದರು. ಅದಿಲ್ಲಿ ಬಹು ಬೇಗ ಹಬ್ಬಿತು. ಅದಕ್ಕೆ ಅಮೇರಿಕದ **ತುಪಿ** ಮೂಲ ನಿವಾಸಿ ಭಾಷೆಯಲ್ಲಿ **ಕಾಜು** ಎಂದು ಹೆಸರು (ಅದೇ ಇಂಗ್ಲೀಷಿನ ಕ್ಯಾಶ್ಯು (Cashew). ಆದರೆ ಕರಾವಳಿ ಕನ್ನಡಿಗರು ಮೊದಲಿಂದ ನಮ್ಮ ಮಲೆಗಳಲ್ಲಿ ಬೆಳೆಯುತ್ತಿದ್ದ **ಕೇರು** ಎಂಬ ಬೀಜದ ಮರವನ್ನು ಈ ವಿದೇಶಿ ಫಲ ಹೋಲುವುದೆಂದು ಗಮನಿಸಿ ಅದಕ್ಕೆ **ಗೇರು** ಎಂದು ಹೆಸರು ಕೊಟ್ಟರು. ಅಂಥ ದೇಶಿ ಫಲ ಅರಿಯದ ಪ್ರದೇಶದವರು **ಕಾಜು** ಎಂಬ ಹೆಸರನ್ನೇ ಎರವಲು ಪಡೆದರು. ಉದಾಹರಣೆಗೆ ಹಿಂದಿಯವರು. ಮರಾಠಿಯವರು ತಮ್ಮಲ್ಲಿ ಸಿಗುವ ಮಾವಿನಹಣ್ಣನ್ನು — **ಅಂಬೆ** — ನೆನೆಸಿಕೊಂಡು ಇದಕ್ಕೆ ಸಿಹಿ ಅಂಬೆ ಎಂಬರ್ಥದಲ್ಲಿ **ಗೋಡ + ಅಂಬೆ = ಗೋಡಂಬೆ** ಎಂದು ನಾಮಕರಣ ಮಾಡಿದರು. **— ಶಾವೆಂ.**

# ಧೂಮಕೇತುಗಳು ಮತ್ತು ಜೀವೋತ್ಪಾದನೆ

ಮೂಲ : ಜಯಂತ ವಿಷ್ಣು ನಾರಳೀಕರ
ಕನ್ನಡಕ್ಕೆ : ಉಡುಪಿ ಅನಂತೇಶರಾವ್

ಕ್ರೈಸ್ತರ ಧರ್ಮಗ್ರಂಥವಾದ ಬೈಬಲ್‌ಲು ಅಣುಜೀವಿಗಳಿಂದ ಸಸ್ಯ ಜೀವಿಗಳೂ, ತನ್ಮೂಲಕ ಪ್ರಾಣಿ ಜೀವಿಗಳೂ ಉದ್ಭವವಾದವು ಎಂಬುದಾಗಿ ಈ ಪೃಥ್ವಿಯಮೇಲೆ ಜರುಗಿದ ಜೀವ ವಿಕಸನ ಕ್ರಮವನ್ನು ವರ್ಣಿಸುತ್ತದೆ. ವಿಷ್ಣುವಿನ ದಶಾವತಾರಗಳು–ಮತ್ಸ್ಯ, ಕೂರ್ಮ, ವರಾಹ, ನರಸಿಂಹ, ವಾಮನ, ಪರಶುರಾಮ, ಶ್ರೀರಾಮ, ಶ್ರೀಕೃಷ್ಣ, ಬುದ್ಧ ಮತ್ತು ಕಲ್ಕಿ ಹೀಗೆ–ನಿಯಮ ಬದ್ಧವಾಗಿ ಸಾಗಿರುವುದನ್ನು ಗಮನಿಸಿದರೆ, ಭಾರತೀಯ ಪುರಾಣಗ್ರಂಥಗಳಲ್ಲೂ ಪೃಥ್ವಿಯಲ್ಲಿ ಸಂಭವಿಸಿದ ಜೀವ ವಿಕಸನ ಕ್ರಮ ಉಪಲಬ್ಧವಿರಬಹುದೆನಿಸುತ್ತದೆ. ಇದೇ ರೀತಿಯಲ್ಲಿ ಇಂದಿನ ಜನರಲ್ಲಿ ವಾಡಿಕೆಯಿರುವ ವಿವಿಧ ಧರ್ಮಗಳ ಪುರಾಣಗ್ರಂಥಗಳು ಭೂಮಿಯಲ್ಲಿ ಜೀವವಿಕಸನ ಕ್ರಮವು ನಡೆದು ಬಂದ ದಾರಿಯನ್ನು ವಿವರಿಸುತ್ತವೆ. ಆದರೆ, ಪೃಥ್ವಿಯಲ್ಲಿ ಜೀವೋತ್ಪತ್ತಿ ಹೇಗಾಯಿತೆಂಬ ಬಗ್ಗೆ ಅವುಗಳಲ್ಲಿ ಉತ್ತರವಿಲ್ಲ. ದೇವರ ಕಡೆ ಕೈ ತೋರಿಸಿ ಅವು ಮೌನವಹಿಸುತ್ತವೆ.

ಧರ್ಮಗ್ರಂಥಗಳು ಸಾರುವಂತೆ, ಈ ಪೃಥ್ವಿಯಲ್ಲಿ ಜೀವೋತ್ಪಾದನೆಯನ್ನು ದೇವರು ಮಾಡಿರಬಹುದೆ ಅಥವಾ ಈ ಘಟನೆಯು ಆಕಸ್ಮಿಕವಾಗಿ ತನ್ನಷ್ಟಕ್ಕೆ ತಾನೇ ಜರುಗಿತೆ? ಹಾಗಲ್ಲದೆ, ಜೀವದ್ರೂಪತಾಳಲು ಅಗತ್ಯವಾದ ಸೃಜನ ಘಟಕಗಳು ಧೂಮಕೇತುಗಳ ಕೇತುನಾಭಿ(Nucleus)ಯಿಂದ ದೊರೆತಿರಬಹುದೆ? ಇದೇನು ಹುಚ್ಚು ಕಲ್ಪನೆ ಎಂದು ಹಾಸ್ಯಿಸುವಿರಾ?

ನಮ್ಮ ದೃಢ ವಿಶ್ವಾಸಗಳ ಆಧಾರ ಸ್ತಂಭ ಅದೆಷ್ಟು ಸಲ ಕುಸಿದುಬಿದ್ದಿಲ್ಲ? ಭೂಮಿಯು ಚಪ್ಪಟೆಯಾಗಿರುವುದಾಗಿ ನಂಬಿದ್ದ ನೂರಾರು ಜನಾಂಗಗಳ ನಿದರ್ಶನಗಳಿವೆ. ಸೂರ್ಯನು ಭೂಮಿಯ ಸುತ್ತ ಪರಿಭ್ರಮಿಸುತ್ತಾನೆಂಬ ವೊಂದು ವಾದ ಇಂದು ಹೇಳಹೆಸರಿಲ್ಲದಂತಾಗಿದೆ. ನಮ್ಮ ಪೃಥ್ವಿಯು ನಮ್ಮದೇ ತಾರಾಪುಂಜವಾದ ಆಕಾಶ ಗಂಗೆಯ ಕೇಂದ್ರಸ್ಥಲದಿಂದ ಮೂವತ್ತು ಸಾವಿರ ಪ್ರಕಾಶ ವರ್ಷಗಳಷ್ಟು ದೂರವಿರುವ ಯಕಃಶ್ಚಿತ ಚಿಕ್ಕ ಗ್ರಹ ಎಂಬ ವೈಜ್ಞಾನಿಕ ತಥ್ಯವನ್ನು ನಂಬಲು ಹಿಂದೇಟು ಹಾಕುವ ಜನರು ಇಂದಿಗೂ ಅದೆಷ್ಟೋ?

ನೀಲಾಕಾಶದಲ್ಲಿ ಧೂಮಕೇತುವು ಪ್ರತ್ಯಕ್ಷವಾಯಿತೆಂದರೆ ಮಹಾವ್ಯಕ್ತಿಗಳ ಮರಣವನ್ನು ನಿರೀಕ್ಷಿಸುವ ನಂಬಿಕೆ ಇಂದಿನ ಜನರಲ್ಲಿ ಬೆಳೆದು ಬಂದಿದೆ. ಇದು ಕೇವಲ ಮೂಢನಂಬಿಕೆಯೆ? ಈ ನಂಬಿಕೆಯ ಸತ್ಯಾಸತ್ಯತೆಯನ್ನು ವೈಜ್ಞಾನಿಕವಾಗಿ ನಿರ್ಣಯಿಸಬಹುದೇ ? ಈ ಪ್ರಶ್ನೆಗಳಿಗೆ ಉತ್ತರ ನೀಡುವುದರೊಂದಿಗೆ ಪೃಥ್ವಿಯಲ್ಲಿ ಸಂಭವಿಸಿದ ಜೀವೋತ್ಪಾದನೆಯ ಕ್ರಮವನ್ನೂ ವಿವರಿಸುವ ಪ್ರಯತ್ನವನ್ನು ಇಲ್ಲಿ ಮಾಡಲಾಗಿದೆ.

## ಸಾಂಪ್ರದಾಯಿಕ ಸಿದ್ಧಾಂತ

ನೀರು, ಅಮೋನಿಯಾ, ಮಿಥೇನ್ ಮೊದಲಾದ ನಿರಿಂದ್ರಿಯ ವಸ್ತುಗಳ ಅಣುಗಳು ಕಾಲಕ್ರಮೇಣ ಸೇಂದ್ರಿಯಾಣುಗಳಾಗಿ ಎಂದರೆ, ಜೀವೋತ್ಪತ್ತಿಗೆ ನಾಂದಿ ಹಾಡುವ ಸೃಜನ ಘಟಕಗಳನ್ನು ನಿರೂಪಿಸುವ ಅಣುಗಳಾಗಿ ಪರಿವರ್ತನೆಗೊಂಡವೆಂಬುದಾಗಿ ಭೂಮಿಯಲ್ಲಿ ಜೀವೋತ್ಪತ್ತಿಯಾದ ಬಗೆಯನ್ನು ವಿವರಿಸಿ ಎ. ಐ. ಒಪಾರಿನ್ ಹಾಗೂ ಜೆ. ಬಿ. ಎಸ್. ಹಾಲ್ಡೇನ್‌ರವರು ತಮ್ಮ ಸಾಂಪ್ರದಾಯಿಕ ಸಿದ್ಧಾಂತವನ್ನು ಮಂಡಿಸಿದರು.

ಗುಡುಗು, ಸಿಡಿಲು ಇತ್ಯಾದಿ ಪ್ರಕೃತಿದತ್ತ ಬಲ ಸಂವರ್ಧಕ ಘಟನೆಗಳು ಈ ವಿಧದ ಪರಿವರ್ತನೆಯ ಕಾರ್ಯದಲ್ಲಿ ಪ್ರಮುಖ ಪಾತ್ರವಹಿಸುತ್ತವೆಂದೂ ಪೃಥ್ವಿಯ ವಾತಾವರಣವು ಪ್ರಥಮತಃ ಜಲಜನಕದಿಂದ ಸಂಯೋಜಿತವಾಗಿದ್ದು, ಅಂದಿನ ಹವಾಗುಣವು ಜೀವಾಣುಗಳ ಬೆಳವಣಿಗೆಗೆ ಅವಶ್ಯವಾದ ಪ್ರತ್ಯಾಮ್ಲೀಯ ಗುಣಗಳನ್ನು ಹೊಂದಿತ್ತೆಂದೂ ಊಹಿಸಿ, ಒಪಾರಿನ್ ಹಾಗೂ ಹಾಲ್ಡೇನ್‌ರವರು ತಮ್ಮ ಸಿದ್ಧಾಂತವನ್ನು ಸ್ಥಾಪಿಸಿದರು.

## 'ಹಾ–ವಿ' ಸಿದ್ಧಾಂತ:

ಖ್ಯಾತ ಭೌತಶಾಸ್ತ್ರಜ್ಞರಾದ ಸರ್ ಫ್ರೆಡ್ ಹಾಯ್ಲ್ ಹಾಗೂ ಪ್ರೊಫೆಸರ್ ನಳಿನಚಂದ್ರ ವಿಕ್ರಮಸಿಂಘೆ ಅವರು ಈ ನಿಟ್ಟಿನಲ್ಲಿ ಪರಿಶ್ರಮ ವಹಿಸಿ ತಮ್ಮದೇ ಆದ 'ಹಾ–ವಿ' ಸಿದ್ಧಾಂತವನ್ನು (ಹಾಯ್ಲ್–ವಿಕ್ರಮಸಿಂಘೆ ಸಿದ್ಧಾಂತ) ಇತ್ತೀಚೆಗೆ ಪ್ರತಿಪಾದಿಸಿದ್ದಾರೆ.

ಪೃಥ್ವಿಯಲ್ಲಿ ಜರಗುವ ಮಾರಣಾಂತಿಕ ಅನಾಹುತಗಳಿಗೆ ಧೂಮಕೇತುಗಳ ಸಂಬಂಧ ಕಲ್ಪಿಸಿ, ತತ್ಫಲವನ್ನು ವೈಜ್ಞಾನಿಕವಾಗಿ ನಿಷ್ಕರ್ಷೆಗೊಳಿಸುವುದಕ್ಕಷ್ಟೇ ಈ 'ಹಾ–ವಿ' ಸಿದ್ಧಾಂತವು ಸೀಮಿತವಾಗಿರದೆ, ಧೂಮಕೇತುಗಳನ್ನು ಕುರಿತು ಒಂದು ವಿನೂತನ ಚಿಂತನೆಯನ್ನೇ ಅದು ಪ್ರಸ್ತುತಪಡಿಸುತ್ತದೆ. ಪೃಥ್ವಿಯಲ್ಲಿ ಜೀವೋತ್ಪಾದನೆ ಯಾವ ಬಾಹ್ಯ ಶಕ್ತಿಯಿಂದಲೂ ಪ್ರೇರಿತವಾದುದಲ್ಲ– ಎಂಬ ಈವರೆಗಿನ ನಂಬಿಕೆ ಈ ಸಿದ್ಧಾಂತದ ಪರಿಣಾಮವಾಗಿ ಕುಸಿದುಬೀಳುತ್ತದೆ.

ಪೃಥ್ವಿಯಲ್ಲಿ ಜೀವೋತ್ಪಾದನೆಯನ್ನು ಸಾಧಿಸಲು ಅವಶ್ಯಕವಾದ ಸೃಜನ ಘಟಕಗಳು ಧೂಮಕೇತುಗಳ ಭಗ್ನಾವಶೇಷಗಳಿಂದ ಲಬ್ಧವಾದವು ಎಂಬುದೇ ಹಾಯ್ಲ್-ವಿಕ್ರಮಸಿಂಘೆ ಸಿದ್ಧಾಂತದ ತಿರುಳು.

ಒಪಾರಿನ್ ಮತ್ತು ಹಾಲ್ಡೇನ್‌ರವರ ಸಾಂಪ್ರದಾಯಿಕ ಸಿದ್ಧಾಂತದ ಮೇರೆಗೆ ಭೂಮಿಯ ವಾತಾವರಣವು ಪ್ರಾಥಮಿಕವಾಗಿ ಜಲಜನಕದಿಂದ ದಟ್ಟೈಸಿಕೊಂಡಿತ್ತೆಂದು ತಿಳಿದುಬರುತ್ತದೆ. ಆದರೆ ಈ ತರ್ಕಕ್ಕೆ ಖಗೋಲಿಕ ಅಥವಾ ಭೌಗೋಲಿಕ ಆಧಾರಗಳು ದೊರೆತಿಲ್ಲ. ಈ ಕಾರಣದಿಂದಾಗಿ ಫ್ರೆಡ್ ಹಾಯ್ಲ್ ಹಾಗೂ ವಿಕ್ರಮಸಿಂಘೆಯವರು ಒಪಾರಿನ್–ಹಾಲ್ಡೇನ್‌ರವರ ಮೂಲಭೂತ ಕಲ್ಪನೆಯನ್ನೇ ಪ್ರಶ್ನಿಸಿ, ಅವರ ತಾತ್ತ್ವಿಕ ತರ್ಕವನ್ನು ವಿದ್ಯುಕ್ತವಾಗಿ ಪರಿಶೀಲಿಸಲು ಹಲವಾರು ಪ್ರಯೋಗಗಳನ್ನು ಕೈಗೊಂಡರು. ಜಗತ್ತು ಜನಿಸಿದಾಗ ಅದರ ವಾತಾವರಣವನ್ನು ಜಲಜನಕವಲ್ಲ– ಆಮ್ಲಜನಕವು ಆವರಿಸಿಕೊಂಡಿತ್ತೆಂಬ ಅಭಿಪ್ರಾಯವು ಈ ಪರಿಶೀಲನೆಯ ಮೂಲಕ ಹುಸಿಯಾಯಿತಾಗಿ ಫ್ರೆಡ್ ಹಾಯ್ಲ್‌ರವರಿಂದ ಪ್ರಕಟವಾಯಿತು. ಇಲ್ಲಿ ಕೂಡಾ ಹಲವಾರಿ ಪ್ರಶ್ನೆಯೊಂದು ಉದ್ಭವಿಸುತ್ತದೆ.

ಜೀವಕಣಗಳು ವೃತ್ಪನ್ನವಾಗಲು ಸೃಜನ ಘಟಕಗಳು ಅಗತ್ಯವೆಂದೂ ಸೃಜನ ಘಟಕಗಳು ಸೇಂದ್ರಿಯಾಣುಗಳಿಂದ ರೂಪತಾಳುವುವೆಂದೂ ಸೇಂದ್ರಿಯಾಣುಗಳು ಅಸ್ತಿತ್ವದಲ್ಲಿರಲು ಪ್ರತ್ಯಾಮ್ಲೀಯ ವಾತಾವರಣ ಅವಶ್ಯಕವೆಂದೂ ಪ್ರತ್ಯಾಮ್ಲೀಯ ವಾತಾವರಣವು ಜಲಜನಕದ ದಿಸೆಯಿಂದ ಮಾತ್ರವೇ ಸಾಧ್ಯವೆಂದೂ ಈ ಹಿಂದೆ ಓದಿದ್ದೇವೆ. 'ಹಾ–ವಿ' ಸಿದ್ಧಾಂತಕ್ಕೆ ಅನುಸಾರವಾಗಿ ಭೂಮಿಯಲ್ಲಿ ಪ್ರಥಮತಃ ಆಮ್ಲಜನಕಯುಕ್ತ ವಾತಾವರಣ

[illegible] ಉಂಟಾಗುತ್ತದೆ. ಹೀಗಾಗಿ ಇಂತಹ ಪ್ರತಿಕೂಲ ವಾತಾವರಣದಲ್ಲಿ ಸೇಂದ್ರಿಯಾಣುಗಳು ಉತ್ಪತ್ತಿಯಾಗುವುದೂ ತನ್ಮೂಲಕ ಸೃಜನ ಘಟಕಗಳು ಉದ್ಭವಿಸುವುದೂ, ತತ್ಪರಿಣಾಮವಾಗಿ ಜೀವೋತ್ಪತ್ತಿಯ ಕಾರ್ಯ ಆರಂಭವಾಗುವುದೂ ಸತ್ಯಕ್ಕೆ ದೂರವಾದ ಮಾತು ಎಂಬುದು ಸ್ವಯಂ ವೇದ್ಯವಾಗುತ್ತದೆ. ಹಾಗಾದರೆ ಪೃಥ್ವಿಯಲ್ಲಿ ಜೀವೋತ್ಪನ್ನವಾದ ಬಗೆ ಹೇಗೆ? ಸರ್ ಫ್ರೆಡ್ ಹಾಯ್ಲ್ ಹಾಗೂ ಪ್ರೊಫೆಸರ್ ನಳಿನಚಂದ್ರ ವಿಕ್ರಮಸಿಂಘೆ ಅವರು ತಮ್ಮ ಸಿದ್ಧಾಂತವನ್ನು ನಮ್ಮ ನೆರವಿಗೆ ನೀಡಿದ್ದಾರೆ. ಅವರ ತರ್ಕ ಹೀಗೆ ಮುಂದುವರಿಯುತ್ತದೆ.

## ಧೂಮಕೇತುಗಳಲ್ಲೇನಿದೆ ?

ಮಿಥೈಲ್ ಸಯನೈಡ್ ಜಲಜನಕದ ಸಯನೈಡ್ ಎಂಬಿವೇ ಮೊದಲಾದ ಸಂಯುಕ್ತ ವಸ್ತುಗಳ ಸೇಂದ್ರಿಯಾಣುಗಳು ಧೂಮಕೇತುಗಳ ಕೇತುನಾಭಿಯಲ್ಲಿ ಅಸ್ತಿತ್ವ ಪಡೆದಿವೆ. ಅಲ್ಲದೆ ಪಾಲಿ-ಫಾರ್ಮಾಲ್ಡಿಹೈಡ್ ಅಥವಾ ಪಾಲಿಸಾಕರೈಡ್ಸ್‌ಗಳು ಪದಾರ್ಥಗಳು ಧೂಮಕೇತುಗಳ ಧೂಳಿನ ಪೃತ ಭಾಗಗಳಲ್ಲಿ ಉಪಲಬ್ಧವಿರುವ ಬಗ್ಗೆ ಪರೋಕ್ಷ ಕುರುಹುಗಳು ದೊರೆತಿವೆ.

ಕ್ಷುದ್ರವೆಂದು ತಿರಸ್ಕಾರಕ್ಕೊಳಗಾದ ಧೂಮಕೇತುಗಳು ಜೀವೋತ್ಪತ್ತಿಗೆ ಪ್ರಾರಂಭಿಕ ಅಗತ್ಯಗಳಾದ ಇಂತಹ ಸೇಂದ್ರಿಯಾಣುಗಳನ್ನು ಪಡೆದಿವೆ ಎಂಬ ಸಂಗತಿ ಆಶ್ಚರ್ಯಕರವಲ್ಲವೆ? ಆ ವಸ್ತುಗಳು ಧೂಮಕೇತುಗಳಲ್ಲಿ ಸಂಚಯಗೊಂಡ ಬಗೆಯಾದರೂ ಹೇಗೆ?

ಅಂತರ್-ತಾರಾ ಮಾಧ್ಯಮದಲ್ಲಿ ಸೇಂದ್ರಿಯಾಣುಗಳು ನಮೂನಾತ್ಮಕ ವಸ್ತುಗಳು ಸಮಾರೋಪಗೊಂಡಿವೆ ಎಂಬುದು ಈಗಾಗಲೇ ವೈಜ್ಞಾನಿಕವಾಗಿ ಸ್ಥಾಪಿತವಾಗಿದೆ. ತಾರಾವ್ಯೂಹಗಳೊಂದಿಗೆ ಸಹಜತವಾಗಿ ನಮ್ಮ ಸೌರವ್ಯೂಹವು ರೂಪಗೊಳ್ಳುತ್ತಿರುವಾಗ ಅಂತರ್ ತಾರಾ ಮಾಧ್ಯಮದಲ್ಲಿ ಶೇಖರವಾಗಿದ್ದ ಈ ಸೃಜನಶೀಲ ಸೇಂದ್ರಿಯಾಣುಗಳು ಹಾಗೂ ಅಂತಹ ಜೀವಮೂಲ ವಸ್ತುಗಳು ಕೇತುನಾಭಿಯಿಂದ ಆಕರ್ಷಿಸಲ್ಪಟ್ಟು ಧೂಮಕೇತುಗಳಲ್ಲಿ ದಟ್ಟಯಿಸಿಕೊಂಡವು.




## ಜೀವೋತ್ಪಾದನ

ಧೂಮಕೇತುಗಳು ನವ ಬುಧ, ಶುಕ್ರ, ಭೂಮಿಯೇ ಮೊದಲಾದ ಗ್ರಹಗಳಂತೆ ಸೌರವ್ಯೂಹದ ಸದಸ್ಯರಾಗಿರುವುದರಿಂದಲೂ ಅವುಗಳ ಕಕ್ಷೆ ದೀರ್ಘವೃತ್ತಾಕಾರವಾಗಿರುವುದರಿಂದಲೂ ಅವು ಸೂರ್ಯನನ್ನು ದೀರ್ಘ ಕಾಲಾಂತರದಲ್ಲಿ ಭೇಟಿಮಾಡುತ್ತವೆ. ಇಂತಹ ಭೇಟಿಯ ಸಂದರ್ಭದಲ್ಲಿ ಅವುಗಳ ನಾಭಿಯಲ್ಲಿ ಅಡಕವಾಗಿರುವ ಬಾಷ್ಪ ಶೀಲ ವಸ್ತುಗಳು ಕುದಿಯಲಾರಂಭಿಸುತ್ತವೆ. ಧೂಮಕೇತು ಸೂರ್ಯನಿಂದ ದೂರ ಸರಿದಂತೆಲ್ಲ ಈ ವಸ್ತುಗಳು ತಂಪಾಗಲಾರಂಭಿಸುತ್ತವೆ. ಹೀಗೆ ಧೂಮಕೇತುವಿನ ಆಗಮನ–ನಿರ್ಗಮನ ಸಾಗಿದಂತೆಲ್ಲ, ಅವುಗಳಲ್ಲಿರುವ ಬಾಷ್ಪಶೀಲ ವಸ್ತುಗಳ 'ಉಷ್ಣ–ಶೀತ' ಚಕ್ರ ಅವ್ಯಾಹತವಾಗಿ ಚಲಿಸುತ್ತದೆ. ನಿಯಮಬದ್ಧವಾಗಿ ನಡೆಯುವ ಈ ನೈಸರ್ಗಿಕ ಕ್ರಿಯೆಯಲ್ಲಿ ಅತಿ ಉಷ್ಣ (೩೦೦° ಕೆ) ಮತ್ತು ಅತಿಶೀತ (೧೦೦° ಕೆ) ಉಷ್ಣತಾಮಿತಿ

ಗಳನ್ನು ಬಳಸುವ ಸೃಜನ ಘಟಕಗಳು ಮಾತ್ರವೇ ಬದುಕಿ ಉಳಿಯುತ್ತವೆಂಬ ಸಂಗತಿ ಗಮನಾರ್ಹ.

ಧೂಮಕೇತುವಿನ ಸೂರ್ಯಾಭಿಮುಖ ಪ್ರಯಾಣದಲ್ಲಿ ಬಿಸಿಯೇರುತ್ತಾ ಹೊರಟ ಜೀವ ಮೂಲ ಘಟಕಗಳು (Pre-biotic material) ಧೂಮಕೇತುವಿನ ಸೂರ್ಯವಿಮುಖ ಪ್ರಯಾಣದಲ್ಲಿ ತಂಪಾಗುತ್ತಾ ಸಾಗಿ ಉತ್ಕರ್ಷದೆಡೆಗೆ ಸ್ಥಿತ್ಯಂತರಗೊಂಡಿರಬಹುದು. ಸೌರವ್ಯೂಹಕ್ಕೆ ಧೂಮಕೇತುವಿನ ದೀರ್ಘಾಂತರ ಭೇಟಿ ಅನೇಕ ಬಾರಿ ಮುಂದುವರೆದಂತೆಲ್ಲ ಈ ಜೀವಮೂಲ ವಸ್ತುಗಳ ಅಥವಾ ಸೃಜನ ಘಟಕಗಳ ಸ್ಥಿತ್ಯಂತರ ವಿದ್ಯಮಾನವು ಹಂತಹಂತವಾಗಿ ಅಭಿವೃದ್ಧಿಗೊಳ್ಳುತ್ತ ಸಾಗಿ, ಕೊನೆಗೊಂದು ದಿನ ಫೋಟೋಸಿಂಥೆಟಿಕ್ ಅಣುಜೀವಿಗಳು ಹಾಗೂ ಥರ್ಮೋಫಿಲಿಕ್ ಅಣುಜೀವಿಗಳು ಉದ್ಭವವಾಗಿರಬಹುದು. ಹೀಗೆ ಜೀವೋತ್ಪಾದನೆಗೆ ಚಾಲನೆ ದೊರೆತು, ಹವಾಮಾನದಲ್ಲಾದ ಸ್ಥಿತ್ಯಂತರಕ್ಕನುಗುಣವಾಗಿ ವಿವಿಧ ರೂಪದ ಜೀವಿಗಳು ಧೂಮಕೇತುಗಳಲ್ಲಿ ಜನ್ಮ ತಳೆದಿರಬಹುದು.

## ಭೂಮಿಯಲ್ಲಾದ ಬಗೆ

ಧೂಮಕೇತುಗಳ ಹವಾಗುಣವು ಅಲ್ಲಿಯ ಜೀವಿಗಳಿಗೆ ಪ್ರತಿಕೂಲ ಪರಿಸ್ಥಿತಿಯನ್ನು ತಂದೊಡ್ಡಿದಾಗ ಅನ್ಯಥಾ ಮಾರ್ಗವಿಲ್ಲದೆ ಅವುಗಳು ಅನುಕೂಲಕರ ಗ್ರಹಗಳನ್ನರಸಿರಬಹುದು. ಅದೃಷ್ಟವಶಾತ್ ನಮ್ಮ ಭೂಮಿ ಅವುಗಳಿಗೆ ಗೋಚರಿಸಿ, ಧೂಮಕೇತುವಿನ ಸೂರ್ಯಾಭಿಮುಖ ಪಯಣದ ಕಾಲದಲ್ಲಿ ಅವು ಜೀವಮೂಲ ಘಟಕಗಳನ್ನೊಳಗೊಂಡ ಹಿಮಾಚ್ಛಾದಿತ ಉಂಡೆಯೊಂದನ್ನು ಭೂಮಿಯೆಡೆಗೆ ವರ್ಗಾಯಿಸಿರಬಹುದು. ಈ ರೀತಿಯಾಗಿ ಸುಮಾರು ನಾಲ್ಕು ನೂರು ಕೋಟಿ ವರ್ಷಗಳ ಹಿಂದೆ ಪೃಥ್ವಿಯಲ್ಲಿ ಜೀವೋತ್ಪಾದನಾ ಕಾರ್ಯ ಆರಂಭವಾಗಿರಬಹುದು. ಧೂಮಕೇತುಗಳಿಂದ ಸಂಭವಿಸಿದ ವರ್ಗಾವಣೆಯ ಈ ವಿದ್ಯಮಾನ ಅಂದಿಗೇ ನಿಲ್ಲದೆ ಇಂದಿಗೂ ಜರುಗುತ್ತಲೇ ಇದೆ ಎಂಬುದಾಗಿ ಹಾಯ್ಲ್ – ವಿಕ್ರಮಸಿಂಘೆಯವರು ತಾತ್ವಿಕವಾಗಿ ಚರ್ಚಿಸಿದ್ದಾರೆ. ಅವರ ತರ್ಕವನ್ನು ಸುಲಭವಾಗಿ ತಳ್ಳಿಹಾಕಲಾಗದು.

## ಧೂಮಕೇತುಗಳಿಂದಾದ ಅನಾಹುತಗಳು

ಪೃಥ್ವಿಯೆಡೆಗೆ ಧಾವಿಸಿಬರುವ ಬಾಹ್ಯಾಕಾಶದ ಆಗಂತುಕ ವಸ್ತುಗಳಿಗೆ ನಮ್ಮ ಭೂಮಿಯ ವಾಯುಮಂಡಲವು ಸಾಕಷ್ಟು ಪ್ರತಿರೋಧವನ್ನು ವ್ಯಕ್ತಪಡಿಸುವುದಾದರೂ ಈ ಪ್ರತಿರೋಧವನ್ನೂ ನಿಭಾಯಿಸಿಕೊಂಡು ಅನೇಕ ವಸ್ತುಗಳು ಭೂಮಿಗೆ ಅಪ್ಪಳಿಸುತ್ತವೆ. ಧೂಮಕೇತುಗಳ ಸೃಜನ ಘಟಕಗಳುಳ್ಳ ಭಾಗಗಳೂ ಇಂಥ ವಸ್ತುಗಳಲ್ಲೊಂದಾಗಿವೆ. ಈ 'ಆಗುಂತಕ'ರಿಗೆ ಪೃಥ್ವಿಯು ಹೊಸವಾಗಿ ತೋರುವಂತೆಯೇ ಪೃಥ್ವಿಯ ಜೀವಿಗಳಿಗೂ ಈ ವಸ್ತುಗಳು ವಿನೂತನವಾಗಿ ಕಾಣುತ್ತವೆ. ಅಂತೆಯೇ ಪೃಥ್ವಿಯು ಭೌಗೋಲಿಕ ಹಾಗೂ ಜೈವಿಕ ಸ್ಥಿತಿಗಳಲ್ಲಿ ಏರುಪೇರಾಗಿ ವಿಲಕ್ಷಣ ಘಟನೆಗಳು ಸಂಭವಿಸುತ್ತವೆ. ಕ್ರಿಸ್ತಪೂರ್ವ ೪೨೦ ರಲ್ಲಿ ಘಟಿಸಿದ ಅಥೆನ್ಸಿನ ಪ್ಲೇಗ್ ರೋಗವೂ ಕ್ರಿಸ್ತಶಕ ೧೯೧೮–೧೯ರಲ್ಲಿ ಕಾಣಿಸಿಕೊಂಡ ವಿಷಮ ಶೀತ ಜ್ವರವೂ ಈ ಅಭಿವ್ಯಕ್ತಿಗೆ ಸತ್ವಪೂರ್ಣ ಪ್ರಮಾಣಗಳೆನ್ನಬಹುದು. ಈ ಕಾರಣದಿಂದಾಗಿಯೇ ಸರ್ ಫ್ರೆಡ್ ಹಾಯ್ಲ್ ಹಾಗೂ ಪ್ರೊಫೆಸರ್ ವಿಕ್ರಮಸಿಂಘೆಯವರು ಇಂತಹ ಆಗಂತುಕ ಅನಾಹುತಗಳ ವಿರುದ್ಧ ಭೌಗೋಲಿಕ ಸಂವೇದನೆ ಹೊಂದಲು ಕರೆ ನೀಡಿದ್ದಾರೆ.

ಪುರಾತತ್ವಶಾಸ್ತ್ರಜ್ಞರಿಗೂ ಭೂಗರ್ಭಶಾಸ್ತ್ರಜ್ಞರಿಗೂ ಖಭೌತಶಾಸ್ತ್ರಜ್ಞರಿಗೂ ಹಾಯ್ಲ್–ವಿಕ್ರಮಸಿಂಘೆಯವರ ಸಿದ್ಧಾಂತ ಅಗ್ರಾಹ್ಯವೆನಿಸಬಹುದು. ಆದರೆ ಒಂದು ಮಾತಂತೂ ಸತ್ಯ. ಸೌರಮಂಡಲವನ್ನು ಇತ್ತೀಚೆಗೆ ಹಾಯ್ದು ಹೋದ ಕೋಹುಟೆಕ್ ಧೂಮಕೇತುವು ವಿನೂತನ ವೈಜ್ಞಾನಿಕ ಮಾಹಿತಿಗಳನ್ನೊದಗಿಸಿಕೊಟ್ಟಿದೆ. ಇದರಿಂದಾಗಿ ಇನ್ನು ಮುಂದೆ ಸೌರವ್ಯೂಹಕ್ಕೆ ಭೇಟಿ ನೀಡುವ ಧೂಮಕೇತುಗಳನ್ನೆಲ್ಲ ವೈಜ್ಞಾನಿಕವಾಗಿ ಪರಿಶೀಲಿಸಬೇಕೆಂಬ ಉತ್ಕಟೇಚ್ಛೆ ನಮ್ಮ ವಿಜ್ಞಾನಿಗಳಲ್ಲಿ ಬೇರೂರಿದೆ. ಆದರೆ, ಇಷ್ಟು ಮಾತ್ರವೇ ಸಾಲದು. ಭೂಮಿಯಲ್ಲಿ ಗತಿಸಿಹೋದ ಅನೇಕ ಅನಾಹುತಗಳು ಬೆಳಕಿಗೆ ಬಾರದೆ ಹಾಗೆಯೇ ಉಳಿದಿವೆ. ಅವುಗಳನ್ನು ಪತ್ತೆ ಹಚ್ಚುವುದಾಗಿ

ಧೂಮಕೇತುಗಳೊಂದಿಗೆ ಅವುಗಳಿರಬಹುದಾದ ಸಂಬಂಧವನ್ನು ತಾಳೆ ನೋಡುವುದೂ ಮಾನವ ಜನಾಂಗದ ಹಿತ ದೃಷ್ಟಿಯಿಂದ ಅನಿವಾರ್ಯವಾಗಿದೆ.

## ವೈದ್ಯಕೀಯ ಕ್ಷೇತ್ರದಲ್ಲಿ

ಪುಣೆಯ ವೈರಸ್ ರಿಸರ್ಚ್ ಇನ್‌ಸ್ಟಿಟ್ಯೂಟಿನ ಸಹಾಯಕ ನಿರ್ದೇಶಕರಾದ ಡಾ. ಕಲ್ಯಾಣ ಬ್ಯಾನರ್ಜಿಯವರೊಡನೆ ನಾನು ಪ್ರಸ್ತುತ ವಿಷಯದ, ಬಗ್ಗೆ ನಡೆಸಿದ ವಿಚಾರ ವಿನಿಮಯದಿಂದಾಗಿ ಬಾಹ್ಯಾಕಾಶದಲ್ಲಿ ಜೀವನ್ಮೂಲ ವಸ್ತುಗಳಿರುವುದರ ಕುರಿತು ಬಹು ಹಿಂದೆಯೇ ಚಿಂತನೆ ನಡೆದಿತ್ತೆಂಬುದಾಗಿ ತಿಳಿದುಬಂದಿದೆ. ರಿಚರ್ (೧೮೬೫), ಹೆಲ್ಮೋಲ್ಟ್ಸ್ (೧೮೮೪) ಹಾಗೂ ಅರೇನಿಯಸ್ (೧೯೦೩ ಮತ್ತು ೧೯೦೮) ಇವರು ಈ ನಿಟ್ಟಿನಲ್ಲಿ ಪ್ರಥಮರೆನ್ನಬಹುದು.

ಇವರಲ್ಲಿ ಅರೇನಿಯಸ್ ಇತರರಿಗಿಂತ ಒಂದು ಹೆಜ್ಜೆ ಮುಂದೆ ಸಾಗಿ, 'ಅಣುಜೈವಿಕ ಕಿಣ್ವಗಳು ಬೆಳಕಿನ ವೇಗವನ್ನು ಮುಂಚಾಲಕ ಶಕ್ತಿಯನ್ನಾಗಿ ಪರಿವರ್ತಿಸಿಕೊಂಡು, ಅಂತರ್-ತಾರಾ ಮಾಧ್ಯಮದಲ್ಲಿ ವಿಹರಿಸುತ್ತಿರುತ್ತವೆ. ಮಾರ್ಗ ಮಧ್ಯದಲ್ಲಿ ಹಾಯ್ದು ಹೋಗುವ ಯಾವುದೇ ನವ ವಸ್ತುವಿನ (ಗ್ರಹ ಇಲ್ಲವೆ ಆಕಾಶಕಾಯದ) ಗುರುತ್ವ ಬಲ-ಕ್ಕೊಳಪಟ್ಟು ಅದರೆಡೆಗೆ ಅಣುಜೈವಿಕ ಕಿಣ್ವಗಳು ಆಕರ್ಷಿಸಲ್ಪಡುತ್ತವೆ,' ಎಂದು ಹೇಳಿದ್ದಾನೆ. ಈ ವಿಚಾರದ ಬಗ್ಗೆ 'ಇದಮಿತ್ಥಂ' ಎಂಬ ಅಭಿಪ್ರಾಯ ತಳೆಯುವುದು ಸಾಧ್ಯವಿಲ್ಲವಾದರೂ ೧೯೭೫ರಲ್ಲಿ ಕರ್ನಾಟಕದಲ್ಲಿ ಗೋಚರವಾದ ಕ್ಯಾಸನೂರು ಅರಣ್ಯ ರೋಗಕ್ಕೆ ಇಂದಿಗೂ ಸುಸ್ಪಷ್ಟ ಕಾರಣಗಳು ತಿಳಿಯದಾಗಿರುವುದನ್ನು ಗಮನಿಸಿದರೆ ಅರೇನಿಯಸ್ಸನ ಅಭಿವ್ಯಕ್ತಿಯ ಪ್ರಕಾರ 'ಬಾಹ್ಯಾಕಾಶದಿಂದ ಪೃಥ್ವಿಯೆಡೆಗೆ ಸೆಳೆಯಲ್ಪಟ್ಟ ಅಣುಜೈವಿಕ ಕಿಣ್ವಗಳು' ಈ ರೋಗಕ್ಕೆ ನಾಂದಿ ಹಾಡಿರಬಹುದೆ? ಎಂಬ ಸಂದೇಹ ಮೊಳಕೆಯೊಡೆಯುತ್ತದೆ.

ಪೃಥ್ವಿಯ ಜೀವಿಗಳಿಗೆ ಸಂಬಂಧಿಸಿದ ವ್ಯಾಧಿಗಳಿಗೆ ಭೂಮಿಯ ಇತಿವೃತ್ತದಲ್ಲಿಯೇ ಕಾರಣಗಳನ್ನು ಅರಸುವ ಹವ್ಯಾಸ ಇಂದಿನ ವೈದ್ಯ-ವಿಜ್ಞಾನಿಗಳಲ್ಲಿ ರಕ್ತಗತವಾಗಿ ಹೋಗಿದೆ. ಬಾಹ್ಯಾ-ಕಾಶದ ವಸ್ತುಗಳು ಭೂಜನ್ಯ ರುಜಿನಗಳಿಗೆ ಕಾರಣ-ವಾಗಬಲ್ಲವೆಂಬ ವಾಸ್ತವ ಸಂಗತಿ ಅವರಿಗೆ ಹೊಸ ವಿಚಾರವಾಗಿ ಕಂಡುಬರುವುದೂ ತತ್ಕಾರಣದಿಂದಾಗಿ ಅವರು ಅದನ್ನು ಅನರ್ಥಕವೆಂದು ತೆಗಳುವುದೂ ಸ್ವಾಭಾವಿಕವೇ. ಆದರೆ ಹೊಸ ವಿಚಾರಗಳು ಅನರ್ಥಕವೆಂದ ಮಾತ್ರಕ್ಕೆ ಅವನ್ನು ಅಲ್ಲಗಳೆಯುವ ಧೈರ್ಯವನ್ನು ಈ ವಿಜ್ಞಾನಯುಗದಲ್ಲಿಯೂ ನಾವು ಮಾಡಬಹುದೆ? ✡

(ಕೃಪೆ: 'ಸೈನ್ಸ್ ಟುಡೆ')



ಹ್ಯಾಂಬರ್ಗ್‌ನ ನಿವಾಸಿ ಶ್ರೀಮತಿ ಮಿಂಜ ವಿ. ಲೆಂಡ್‌ಳ ಎತ್ತರ ೬೬ ಸೆಂಟಿಮೀಟರು ಅಥವಾ ೨ ಅಡಿ ೨ ಅಂಗುಲ. ಆಕೆಯ ಕಾರ್ ಚಾಲಕ ಫೆಲಿಕ್ಸ್ ಅದಾ ಬಾಸ್‌ನ ಎತ್ತರ ೧೯೮ ಸೆಂಟಿಮೀಟರು ಅಥವಾ ೬ ಅಡಿ ೬ ಅಂಗಲುಗಳು.

* * *

ಇಸ್ರೇಲ್ ಸರಕಾರ ನೆಗೆವ್‌ನಲ್ಲಿ ೬೦ ಕೋಟಿ ರೂ. ಗಳಷ್ಟು ಹಣವನ್ನು ಖರ್ಚು ಮಾಡಿ ಆಸ್ಪತ್ರೆಯೊಂದನ್ನು ಕಟ್ಟಿಸಿದೆ. ಇಲ್ಲಿ ಚಿಕಿತ್ಸೆ ಮನುಷ್ಯರಿಗಲ್ಲ, 'ಮರುಭೂಮಿಯ ಹಡಗು' ಒಂಟೆಗೆ. ಅಲ್ಲಿ ಒಂಟೆಗಳ ರಕ್ತಪರೀಕ್ಷೆಯಷ್ಟೇ ಅಲ್ಲ, ಎಕ್ಸ್‌ರೇ ಕೂಡ ವ್ಯವಸ್ಥೆಗೊಳಿಸಲಾಗಿದೆ.

# ನಿಮ್ಮ ಶಬ್ದಭಾಂಡಾರ ಬೆಳೆಯಲಿ

## ಶಬ್ದಭಾಂಡಾರವು ಹಣದ ಭಾಂಡಾರಕ್ಕಿಂತಲೂ ಅಮೂಲ್ಯವಾಗಿದೆ

ಇಲ್ಲಿ ಪ್ರತಿ ತಿಂಗಳೂ ಕೆಲವು ಶಬ್ದಗಳನ್ನು ಪರಿಚಯ ಮಾಡಿಕೊಡಲಾಗುವುದು. ಆಯಾ ಶಬ್ದದ ಮುಂದೆ ನಾಲ್ಕು ಅರ್ಥಗಳನ್ನು ಕೊಟ್ಟಿದ್ದು ಅವುಗಳಲ್ಲಿ ಒಂದು ಮಾತ್ರ ಸರಿಯಾಗಿರುತ್ತದೆ. ನಿಮಗೆ ಸರಿಯೆನಿಸಿದ ಅರ್ಥವನ್ನು ಮೊದಲು ಆರಿಸಿಕೊಳ್ಳಿ. ಆಮೇಲೆ ಇದರ ಬೆನ್ನಿನ ಪುಟ ನೋಡಿರಿ. ಅಲ್ಲಿ ಸರಿಯಾದ ಅರ್ಥವನ್ನು ವಿವರಿಸಿದೆ.

೧. **ಆಷಾಢಭೂತಿ**
(ಅ) ಡಂಬಾಚಾರಿ (ಆ) ನನೆದ ಬೂದಿ (ಇ) ಮಳೆಗಾಲ (ಈ) ಒಂದು ನಕ್ಷತ್ರ

೨. **ಕೀಸಲು**
(ಅ) ಕೂಗಾಟ (ಆ) ಕರ್ಕಶ ಸಂಗೀತ (ಇ) ಪದರು (ಈ) ಗಟ್ಟಿಮಾಡುವಿಕೆ

೩. **ಒತ್ತಂಬ**
(ಅ) ಹರಿತ ಬಾಣ (ಆ) ಬಲಾತ್ಕಾರ (ಇ) ಓಕರಿಕೆ (ಈ) ಒಂಟಿ ಕಂಬ

೪. **ಒತ್ತರ**
(ಅ) ಮೇಲು ಮೇಲೆ (ಆ) ಒಮ್ಮೆ ಮಾತ್ರ (ಇ) ಸಹಾಯ (ಈ) ವೇಗ

೫. **ಉದ್ಧರಣ**
(ಅ) ಪಾರು ಮಾಡು (ಆ) ದೀರ್ಘ (ಇ) ಎತ್ತಿಕೊಳ್ಳುವಿಕೆ (ಈ) ದೃಷ್ಟಾಂತ

೬. **ಉದ್ಯುಕ್ತ**
(ಅ) ಮೂಡಿದ್ದ (ಆ) ಆಣೆಯಾದವ (ಇ) ಹೇಳಿದ್ದೇ ಹೇಳುವವ (ಈ) ಬೆಳಕುಳ್ಳ

೭. **ಅರ್ಕ**
(ಅ) ಭಟ್ಟಿಯಿಳಿಸಿದ್ದು (ಆ) ಅರ್ಧಂ-ಬರ್ಧ (ಇ) ತೊಳಲಾಟ (ಈ) ಕೈನೀರು

೮. **ಅರೆಗುರಿಕ**
(ಅ) ಒಂದು ಭೂತ (ಆ) ಒಪ್ಪೊತ್ತಿನ ಕೆಲಸದವ (ಇ) ಅರ್ಧ ಕರಿದ ಪದಾರ್ಥ (ಈ) ಕೆಲಸ ಪೂರೈಸದವ

೯. **ಹಂಪು**
(ಅ) ಕಾಲುವೆ (ಆ) ಹೆಜ್ಜಳ (ಇ) ಕೆರೆ (ಈ) ನೀರೆತ್ತುವ ಸಾಧನ

೧೦. **ಹಕ್ಕಲು**
(ಅ) ಹೂವಿನ ಎಸಳು (ಆ) ಹೊರಗೆ ಹಾಕುವಿಕೆ (ಇ) ಬೀಳುಭೂಮಿ (ಈ) ಬುದ್ಧಿ ಶಕ್ತಿ

೧೧. **ಹಕೀಕತು**
(ಅ) ವಾಸ್ತವಿಕ ವಿಷಯ (ಆ) ಅಧಿಕಾರ ಪತ್ರ (ಇ) ಪಕ್ಷಿಗಳ ಉದ್ಯಾನ (ಈ) ದರಿದ್ರ

೧೨. **ಹಕ್ಕೆ**
(ಅ) ಪಕ್ಷಿಯ ಮಲ (ಆ) ಹಾಳೆ (ಇ) ಅಧಿಕಾರ (ಈ) ಆಶ್ರಯಸ್ಥಾನ

೧. **ಆಷಾಢಭೂತಿ** (ಅ) ಡಂಬಾಚಾರಿ, ಧರ್ಮಿಷ್ಠನಂತೆ ನಟಿಸುವ ವಂಚಕ, ವೇಷಧಾರಿ. ಉದಾ:— ಅವನೊಬ್ಬ ಆಷಾಢಭೂತಿ ಬ್ರಹ್ಮಚಾರಿ. [ಸಂ. ಆಷಾಢ=ಬ್ರಹ್ಮಚಾರಿಗಳು ಹಿಡಿಯುವ ದಂಡ+ಭೂತಿ=ಬೂದಿ]

೨. **ಕೀಸಲು** (ಇ) ಪಸರು, ಮಡಿಕೆ; ನಯವಾಗಿದ್ದು. ಉದಾ:— ಕೀಸಲು ಹಾಳೆ. [ಕನ್ನಡ. ಕೀಸು=ಉಜ್ಜು]

೩. **ಒತ್ತಂಬ** (ಅ) ಬಲಾತ್ಕಾರ, ಒತ್ತಡ. ಉದಾ:— ಪುಂಡರು ಒತ್ತಂಬದಿಂದ ಒಳಹೊಕ್ಕರು. [ಕನ್ನಡ-ಒತ್ತು-ಇಂದ]

೪. **ಒತ್ತರ** (ಈ) ವೇಗ, ರಭಸ, ಒತ್ತಡ. ಉದಾ:— ಒತ್ತರದಿಂದ ಪಯಣಿಸಿದ. [ಕನ್ನಡ-ಒತ್ತು+ತರ]

೫. **ಉದ್ಧರಣ** (ಇ) ಎತ್ತಿಕೊಳ್ಳುವಿಕೆ; ಬೇರೊಂದು ಗ್ರಂಥ ಅಥವಾ ಮೂಲದಿಂದ ಮಾತನ್ನು ಎತ್ತಿ ಹೇಳುವುದು. ಉದಾ:— ಈ ಗ್ರಂಥದ ತುಂಬ ಉದ್ಧರಣಗಳೇ [ಸಂ. ಉದ್=ಮೇಲೆ, ಹರಣ=ತೆಗೆದುಕೊಳ್ಳುವಿಕೆ)

೬. **ಉದ್ಯುಕ್ತ** (ಅ) ಅಣಿಯಾದ, ಸಿದ್ಧನಾದ; ಪ್ರಯತ್ನಿಸುವವ. ಉದಾ:— ಹೆಂಡತಿಯನ್ನು ಕೊಲ್ಲಲುದ್ಯುಕ್ತನಾದನು. [ಸಂ. ಉದ್=ಮೇಲೆ+ಯುಕ್ತ=ಕೂಡಿದ]

೭. **ಅರ್ಕ** (ಅ) ಭಟ್ಟಿಯಿಂದಿಳಿಸಿದ ಸಾರ; ಕುದಿಸಿ ಕುಂದಿಸಿದ ಕಷಾಯ. ಉದಾ:— ಇದು ಹಲವು ವನಸ್ಪತಿಗಳ ಅರ್ಕ. [ಅರಬಿ - ಅರ್ಕ್]

೮. **ಅರೆಗುರಿಕ** (ಈ) ಯಾವ ಕೆಲಸವನ್ನೂ ಪೂರ್ತಿ ಮಾಡದವ; ಅರ್ಧದಲ್ಲಿ ಬಿಟ್ಟ ಕೆಲಸ. ಉದಾ:— ಅರೆಗುರಿಕ ಮೇಸ್ತ್ರಿಯಿಂದಾಗಿ ಮನೆ ಸಕಾಲದಲ್ಲಿ ಪೂರ್ತಿಯಾಗಲಿಲ್ಲ. [ಕನ್ನಡ. ಅರೆ=ಅರ್ಧ+ಕುರಿ=ಕುಳಿ?]

೯. **ಹಂಪು** (ಅ) ಹೆಚ್ಚಳ, ಸಮೃದ್ಧಿ. ಉದಾ:— ಹಂಪು ಕಾಲದಲ್ಲಿ ಸರಕನ್ನು ದಾಸ್ತಾನು ಮಾಡು. [ಕನ್ನಡ - ಪರ್ಬು=ಹಬ್ಬ ಎಂಬುದರಿಂದ.]

೧೦. **ಹಕ್ಕಲು** (ಇ) ಬೀಳುಭೂಮಿ, ಪಡ ಭೂಮಿ; ಬೆಳೆ ಕೊಯ್ದ ಹೊಲಗದ್ದೆ. ಉದಾ:— ಯಾರ ಯಾರದೋ ಹಕ್ಕಲಲ್ಲಿ ಗುಡಿಸಲು ಕಟ್ಟಿಕೊಂಡರು. [ಕನ್ನಡ]

೧೧. **ಹಕೀಕತು** (ಅ) ಇದ್ದ ಸಂಗತಿ, ವಾಸ್ತವಿಕ ವಿಷಯ, ತಥ್ಯ, ಸತ್ಯ ವೃತ್ತಾಂತ. ಉದಾ;— ಹಕೀಕತು ತಿಳಿಯದೆ ಮಾತಾಡಬೇಡ. [ಅರಬಿ— ಹಕೀಕತ್]

೧೨. **ಹಕ್ಕೆ** (ಈ) ಆಶ್ರಯಸ್ಥಾನ, ನೆಲೆ, ವಿಶ್ರಾಂತಿ ಸ್ಥಾನ; ಹಾಸಿಗೆ. ಉದಾ:— ಹಕ್ಕಿಗಳ ಹಕ್ಕೆ ಹಿಡಿದು ಬೇಟೆಯಾಡಿದ. [ಕನ್ನಡ]

●

## ನಿಮ್ಮ ಶಬ್ದಶಕ್ತಿಯ ತರಗತಿ

ನೀವು ಎಷ್ಟು ಶಬ್ದಗಳಿಗೆ ಅರ್ಥ ಅರಿತಿದ್ದು ಸರಿಯಾಗಿದೆಯೆಂದು ಎಣಿಸಿ, ಕೆಳಗಿನಂತೆ ನಿಮ್ಮ ಶಬ್ದಶಕ್ತಿಯ ತರಗತಿಗಳನ್ನು ತಿಳಿಯಿರಿ.

| | | |
|---|---|---|
| ೬—೮ | ಸರಿಯಿದ್ದರೆ | ... ಸಾಧಾರಣ |
| ೯—೧೦ | ,, | ... ಉತ್ತಮ |
| ೧೧—೧೨ | ,, | ... ಅತ್ಯುತ್ತಮ |

●

ಆತ ಜಗತ್ತಿನ
ಇತಿಹಾಸ ಬರೆದು
ಬೆಂಕಿ ಇಟ್ಟ

# ಸೊಗಸುಗಾರ ಸಾಹಸಿ ಸರ್ ವಾಲ್ಟರ್ ರ್‍ಯಾಲೆ

**ಗೌರೀಶ ಕಾಯ್ಕಿಣಿ**

ರಾಲೀ ಹೆಸರು ಯಾರು ಕೇಳಿಲ್ಲ? ಹಳ್ಳಿ ಹಳ್ಳಿಯ ಹರೆಯದ ಹುಡುಗರಿಗೆ ಗೊತ್ತು ರ್‍ಯಾಲೆ ಸೈಕಲ್. ಆದರೆ ಒಂದು ಸೈಕಲ್ಲಿನ ಹೆಸರಾಗಿ ಜಗತ್ಪ್ರಸಿದ್ಧವಾದ ಈ ಹೆಸರು ೧೬–೧೭ನೆಯ ಶತಮಾನದ ಕಾಲದಿಂದಲೂ ಪ್ರಸಿದ್ಧ. ತಾನು ಮುಂದೆ ಪ್ರಸಿದ್ಧಿ ಪಡೆದ ಜಗತ್ತಿನ ಇತಿಹಾಸ ಬರೆಯಲು ಕೂಡ ಕೈಯಿಟ್ಟ ಆ ಮಹಾ ಮೇಧಾವಿಯೇ ರ್‍ಯಾಲೆ. ಅವನ ಪೂರ್ತಿ ಹೆಸರು ಸರ್ ವಾಲ್ಟರ್ ರ್‍ಯಾಲೆ.

ವಾಲ್ಟರ್ ರ್‍ಯಾಲೆ ಒಬ್ಬ ಸಾಹಸಿ, ಸುಂದರ ನಾವಿಕ. ಇಂಗ್ಲೆಂಡಿನ ಮಹಾರಾಣಿ ಮೊದಲನೆಯ ಎಲಿಜಬೆಥಳ ಆಸ್ಥಾನದಲ್ಲಿ ಮಹತ್ವ ಪಡೆದವ. ಅನಂತರ ಬಂದ ಸ್ಟೂವರ್ಟ್ ಮನೆತನದ ಮೊದಲ ದೊರೆ ಪ್ರಥಮ ಜೇಮ್ಸ್‌ನ ಕಾಲದಲ್ಲಿ ಮನ್ನಣೆಯನ್ನೂ ಬಂಧನವನ್ನೂ ಬಿಡುಗಡೆಯನ್ನೂ ಕೊನೆಗೆ ಮರಣದಂಡನೆಯನ್ನು ಪಡೆದವನು. ಆದರೆ ಎಂಥಾ ಪ್ರಸಂಗದಲ್ಲಿಯೂ [illegible] ಪರಿಸ್ಥಿತಿಯಲ್ಲಿಯೂ ಅರಮನೆ, ಸೆರೆಮನೆ, ಅಟ್ಲಾಂಟಿಕ್ ಹೆಗ್ಗಡಲು, ಪಥಸ್ಥಾನ ಎಲ್ಲಿಯೂ ಧೃತಿಗೆಡದೆ ಧೀರೋದಾತ್ತವಾಗಿಯೇ ನಡೆದ ಹುಟ್ಟು ಜೀವನರಸಿಕ.

ವಾಲ್ಟರ್ ರ್‍ಯಾಲೆ ಸರ್ ಪದವಿಗೇರಿದ್ದು ಒಂದು ಸಾಹಸದ ಕತೆ. ಎಲಿಜಾಬೆಥ್ ಮಹಾರಾಣಿ ಅವಿವಾಹಿತೆ, ಕುರೂಪಿ, ಅತೃಪ್ತಕಾಮಿನಿ. ಸದಾ ಯಾರಾದರೂ ಹೊಸ ಹರಯದ ಹುರುಪಿನ ಆಕರ್ಷಕ ಸರದಾರನಲ್ಲಿ ಅವಳ ಆಸಕ್ತಿ. ಅವಳ ಅನುಗ್ರಹಕ್ಕಾಗಿ ಕಾಯುವ ಅಂಥ ಯುವಕ ಯೋಧರಲ್ಲಿ ಮಹಾತ್ವಾಕಾಂಕ್ಷಿಗಳಲ್ಲಿ ತರುಣ ವಾಲ್ಟರನೂ ಒಬ್ಬ.

ಹಾಗೆ ಬಹುಕಾಲ ಕಾಯುತ್ತಿದ್ದಂತೆ ಒಮ್ಮೆ ಅವನ ಅದೃಷ್ಟ ಖುಲಾಯಿಸಿತು. ಒಂದು ದಿನ ಮಹಾರಾಣಿ ತನ್ನ ಮಿತ ಪರಿವಾರದೊಂದಿಗೆ ರಾಜಧಾನಿಯ (ಲಂಡನ್) ಸುಖಸಂಚಾರಕ್ಕೆ ಹೊರಟಿದ್ದಳು. ಬೀದಿಯಿಂದ ಬೀದಿಗೆ ಹಾಯುತ್ತ ಒಂದು ಕಡೆಗೆ ಮಹಾರಾಣಿ ಒಮ್ಮೆಲೆ ತಡೆದಳು. ಈ ಕೇರಿಯಲ್ಲಿ ಮುಂದೆ ನಡೆಯಲು ಸಾಧ್ಯವಿದ್ದಿಲ್ಲ. ಮುಂದೆ ಮಾರುಗಟ್ಟಲೆ ಮಾರ್ಗ ತುಂಬ ಕೆಸರ ರಾಶಿ. ಈಗೇನು ಮಾಡಬೇಕು?

ಎಲಿಝಬೆಥ್ ದೊರೆಸಾನಿ ತನ್ನ ಪಕ್ಕದ ಸರದಾರರನ್ನು ನೋಡಿ ನಕ್ಕಳು. ಯಾರೂ ಏನೂ ಮಾಡುವಂತಿದ್ದಿಲ್ಲ. ದೊರೆಸಾನಿಯನ್ನು ಎತ್ತಿಕೊಂಡು ರಸ್ತೆಯ ರಾಡಿ ದಾಟಿಸುವ ಧೈರ್ಯ ಯಾರಿಗೂ ಆಗಲಿಲ್ಲ. ದೊರೆಸಾನಿ ಹಿಂದಿರುಗಲು ಹೊರಳಿದಳು.

ಅಷ್ಟರಲ್ಲಿ ಹಿಂದೆಯೇ ಇದ್ದ ವಾಲ್ಟರ್ ರ್‍ಯಾಲೆ ಮುಂದೆ ನುಗ್ಗಿದ. "ಮಹಾರಾಣಿಯವರೇ ಹೀಗೆ ದಯಪಾಲಿಸಬೇಕು" ಅಂದ ಮತ್ತು ತನ್ನ ಹೆಗಲ ಮೇಲಿನ ಉದ್ದ ದಟ್ಟ ನೀಲ ನಿಲುವಂಗಿಯನ್ನು ಆ ಕೆಸರ ನೆಲದ ಮೇಲೆ ಹಾಸಿ ಮಂಡಿಯೂರಿ ವಂದಿಸಿ ತೋಳು ಚಾಚಿದ. ಒಮ್ಮೆಲೆ ಪ್ರಸನ್ನಳಾದ ಮಹಾರಾಣಿ ಅವನ ಕೈ ಹಿಡಿದು ವಾಲ್ಟರನ ನಿಲುವಂಗಿಯನ್ನು ತುಳಿಯುತ್ತ ನಗೆ ಮೊಗದಿಂದ ಆ ಕೊಳಚೆಯನ್ನು ದಾಟಿದಳು.

ಅಂದು ಹಿಡಿದ ಕೈಯನ್ನು ಎಲಿಝಬೆಥ್ ಮುಂದೆ ಬಹುಕಾಲ ಬಿಡಲಿಲ್ಲ. ಮಹಾರಾಣಿಯ ಅನುಗ್ರಹದಿಂದ ಮುಂದೆ ಬಂದು ನೌಕಾಪಡೆಯಲ್ಲಿ ಮೇಲೇರಿ ಆತ ನೌಕಾಧಿಪತಿ ಆದ. ಕೆಲವು ನಾವೆಗಳೊಂದಿಗೆ ಅಟ್ಲಾಂಟಿಕ್ ದಾಟಿ ಅಮೇರಿಕದ ಅಂದಿನ "ಹೊಸ ಜಗತ್ತಿ"ನಲ್ಲಿ ಮಹಾರಾಣಿಯ ಹೆಸರಿನಿಂದ ಹೊಸ ವಸಾಹತು ಸ್ಥಾಪಿಸಿದ. 'ವರ್ಜೀನಿಯ' (ವರ್ಜಿನ್ ಅಂದರೆ ಕುಮಾರಿ) ಕಡಲು ಪರ್ಯಟನದಲ್ಲಿ ಸ್ಪೇನಿನ ಹಡಗುಗಳನ್ನು ಲೂಟಿ ಮಾಡಿ ಹೇರಳ ಸಂಪತ್ತನ್ನು ರಾಣಿಯ ಬೊಕ್ಕಸಕ್ಕೆ ತಂದು ತುಂಬಿದ.

ಅಮೇರಿಕದಿಂದ ಮರಳುವಾಗಲೇ ಆತ ಇಂಗ್ಲಂಡಿಗೂ ಯುರೋಪಕ್ಕೂ ಅಲ್ಲಿಂದ ನಮಗೂ ನಿಮಗೂ ಬಟಾಟೆ ಮತ್ತು ಹೊಗೆಸೊಪ್ಪು ತಂದನು. ಆತ ಮೊದಲು ಮನೆಯಲ್ಲಿ ತಂಬಾಕು ಸೇದುತ್ತ ಕೂತಾಗ ಹಿಂದಿನಿಂದ ಆ ಕೋಣೆ ಹೊಕ್ಕ ಅವನ ಜವಾನ ಒಡೆಯನ ತಲೆಯ ಸುತ್ತಲೂ ಹೊಗೆ ಕಂಡು ಗಾಬರಿಯಾಗಿ ಓಡಿ ಹೋಗಿ ಒಂದು ಬಕೆಟ್ಟು ನೀರು ತಂದು ರ್‍ಯಾಲೆಯ ತಲೆಗೆ ಹೊಯ್ದುಬಿಟ್ಟ ಕಥೆ ನಾವು ಹೈಸ್ಕೂಲಿನಲ್ಲಿ ಓದಿದ್ದುಂಟು.

ಎಲಿಝಬೆಥ್ ವಾಲ್ಟರ್ ರ್‍ಯಾಲೆಗೆ 'ಸರ್' ಪದವಿ ಕೊಟ್ಟು ಮನ್ನೆಯವನಾಗಿ ಮನ್ನಿಸಿದಳು.

ಆದರೆ ಅವಳ ನಂತರ ಪಟ್ಟಕ್ಕೆ ಬಂದ ಜೇಮ್ಸ್ ದೊರೆ ತನ್ನ ಸಂಕುಚಿತ ಧಾರ್ಮಿಕ ಧೋರಣೆಯಿಂದಾಗಿ ಸರ್ ವಾಲ್ಟರ್ ರ್‍ಯಾಲೆಯನ್ನು ಆಜೀವ ಸೆರೆಮನೆಗೆ ಅಟ್ಟಿದ, ಲಂಡನ್ ಟಾವರಿನಲ್ಲಿ. ಅಲ್ಲಿ ಹೊತ್ತುಗಳೆಯುವದಾದರೂ ಹೇಗೆ?

ರ್‍ಯಾಲೆ ಕವಿ ಆಂಗ್ಲ ವಿಮರ್ಶಕರಲ್ಲಿಯೇ ಹೊಸ ದೃಷ್ಟಿಯ ಪ್ರಣೇತ. ಆತ ಸೆರೆಮನೆಯಲ್ಲಿ ಕೂತು 'ಜಗತ್ತಿನ ಇತಿಹಾಸ' ಬರೆಯಲು ಆರಂಭಿಸಿದ. (ನಮ್ಮ ದಿ. ಪಂಡಿತ ನೆಹರೂ ಮಗಳಿಗೆ ಪತ್ರ ರೂಪದಲ್ಲಿ ಅದನ್ನು ಮಾಡಿದರು, ತಮ್ಮ ೭ ವರ್ಷಗಳ ಪದೇ ಪದೇ ಕಾರಾವಾಸದಲ್ಲಿ). ಆದರೆ ರ್‍ಯಾಲೆಯ ಈ ಇತಿಹಾಸ ಲೇಖನದ ಬಗೆಗೆ ಒಂದು ಆಖ್ಯಾಯಿಕೆ ಇದೆ.

ಒಂದು ದಿನ ಬರೆದು ಬೇಸತ್ತು ರ್‍ಯಾಲೆ ಟಾವರಿನ ಕಿಟಕಿಯ ಬಳಿ ಹೊರಗೆ ನೋಡುತ್ತ ತನ್ನ ಕೆಂಪು ಗಡ್ಡದಲ್ಲಿ ಬೆರಳಾಡಿಸುತ್ತಾ ನಿಂತಿದ್ದ. ಆಗ ಕೆಳಗೆ ತುಸು ದೂರ ಚೌಕದಲ್ಲಿ ಏನೋ




"ಯಾವ ಬ್ಯಾಂಕಿನಲ್ಲಿ ಕೆಲಸದಲ್ಲಿದ್ದೀರೆಂದು ಹೇಳಿಬಿಟ್ಟರೆ ಸಾಕು. ನನಗೆ ನಿಮ್ಮ ಜಾತಿ ಗೊತ್ತಾಗುತ್ತದೆ!"

ಗಲಾಟೆ ಎದ್ದಿತು. ರ್ಯಾಲೆಯ ಕುತೂಹಲ ಕೆರಳಿತು. ಆತ ಅದೇನು ಸದ್ದು ಎಂದು ತಿಳಿದುಕೊಳ್ಳಲು ತನ್ನ ಕಾವಲಿನವರಲ್ಲಿಯೇ ಒಬ್ಬನನ್ನು ಅಟ್ಟಿದ – ಆಮೇಲೆ ಇನ್ನೊಬ್ಬನನ್ನು, ಮತ್ತೆ ಮತ್ತೊಬ್ಬನನ್ನು.

ಅವರು ಒಬ್ಬೊಬ್ಬರಾಗಿ ಬಂದು ವರದಿ ಒಪ್ಪಿಸಿದರು. ಕೋಣೆಯಲ್ಲಿ ಶತಪಥ ಹಾಕುತ್ತಿದ್ದ ರ್ಯಾಲೆಗೆ ಈ ವರದಿಗಳು ಮತ್ತೂ ತಲೆಗೆಡಿಸಿದವು. ಏಕೆಂದರೆ ಮೂರೂ ವರದಿ ಮೂರು ವಿಧ. ಒಬ್ಬರಿಗೊಬ್ಬರ ತಾಳಮೇಳವೇ ಇಲ್ಲ. ಆಗ ಅವನಿಗೆ ಅನಿಸಿತು. ಇದೀಗ ಇಷ್ಟು ಹತ್ತಿರ ನನ್ನ ಎದುರಿನಲ್ಲಿ ನಡೆದ ಒಂದು ಘಟನೆಯ ಬಗೆಗೆ ನಂಬಲು ಅರ್ಹವಾದ ಒಂದು ವರದಿ ಸಿಗುವದು ಕಷ್ಟ! ಅಂದಾಗ ಶತಮಾನಗಳ ಹಿಂದೆ ಎಲ್ಲೆಲ್ಲೋನಡೆದುಹೋದವೆಂಬ ಸಂಗತಿಗಳ ಬಗೆಗೆ ಯಾರಾರೋ ಕೇಳಿ ಹೇಳಿ ಬರೆದಿಟ್ಟ ದಾಖಲೆಗಳನ್ನು ನಂಬುವದು ಹೇಗೆ? ಅವುಗಳ ಆಧಾರದಿಂದ ಇತಿಹಾಸ ಬರೆಯುವದೆಂದರೆ ಅದೊಂದು ಮೋಸವೇ? ಹೀಗೆಂದು ಆ ಪ್ರಾಮಾಣಿಕ ಮೇಧಾವಿ ತಾನು ಬರೆದು ಮೇಜಿನ ಮೇಲೆ ರಾಶಿ ಒಟ್ಟಿ ಇಟ್ಟ ಹಾಳೆಗಳನ್ನೆಲ್ಲ ಹರಿದು ಬೆಂಕಿಗೆ ಹಾಕಿದನಂತೆ!

ಮುಂದೆ ಒಂದನೇ ಜೇಮ್ಸ್ ಧನಲೋಭಕ್ಕಾಗಿ ರ್ಯಾಲೆಯನ್ನು ಸೆರೆಯಿಂದ ಹೊರತಂದು ಹಡಗ ಸಿಬ್ಬಂದಿ ಕೊಟ್ಟು ಅಮೇರಿಕಕ್ಕೆ ಕಳುಹಿಸಿದ. ಅಲ್ಲಿ ಚಿನ್ನದ ಗಣಿ ಸಿಕ್ಕರೆ ನೋಡಲು. ಆದರೆ ಅದು ಸಿಗದೆ ಆತ ಬರಿಗೈಯಿಂದ ಮರಳಿದ. ಆಗ ಸಿಟ್ಟಿಗೆದ್ದ ಆ ಪಾಪಿ ಸರ್ ವಾಲ್ಟರ್ ರ್ಯಾಲೆ–ಯ ಶಿರಚ್ಛೇದ ಮಾಡಲು ಆಜ್ಞಾಪಿಸಿದ. ಆ ಶಿಕ್ಷೆಗೆ ತಕ್ಕ ಅಪರಾಧ? ಹಿಂದೆ ಆತ ತನ್ನ ವಿರುದ್ಧ ಒಳಸಂಚಿನಲ್ಲಿ ಭಾಗವಹಿಸಿದ್ದನೆಂಬುದಕ್ಕಾಗಿ ಅವನಿಗೆ ದೇಹಾಂತ ಶಿಕ್ಷೆಯನ್ನು ವಿಧಿಸಿತ್ತು. ಆದರೆ ಅದನ್ನು ರದ್ದು ಮಾಡಿ ದೊರೆಯು ಜೀವಾವಧಿ ಕಾರಾವಾಸವನ್ನು ಭೋಗಿಸಲು ಹಚ್ಚಿದ್ದನು. ಈಗ ಆ ಹಳೆಯ ರದ್ದಾದ ಮರಣ ದಂಡನೆಯನ್ನು ಊರ್ಜಿತಗೊಳಿಸಿ ರ್ಯಾಲೆಯನ್ನು ವಧಸ್ಥಾನಕ್ಕೆ ಕಳುಹಿಸಿದನು.

ಧೀರ ಗಂಭೀರ ಸರ್ ವಾಲ್ಟರ್ ಶಾಂತಚಿತ್ತನಾಗಿ ವಧಸ್ಥಾನಕ್ಕೆ ಕಾವಲುಗಾರರ ನಡುವೆ ನಡೆದು ಬಂದನು. ತಲೆ ಹೊಡೆಯುವ ಕಟ್ಟೆಯ ಮೆಟ್ಟಲುಗಳನ್ನು ನಿಧಾನವಾಗಿ ಏರಿ ನಿಂತನು. ಅವನಿಗೆ ತಲೆಹೊಡಕನು ಆಜ್ಞಾಪಿಸಿದ: “ಮಂಡಿಯೂರಿ ಕೂತುಕೊ. ಹಾಂ ಆ ಕಡೆಗೆ ಅಲ್ಲ. ಪೂರ್ವ ದಿಕ್ಕಿಗೆ ದೇವರ ಕಡೆಗೆ ಮೋರೆ ಮಾಡಿ ವಧೆಶಿಲೆಯ ಮೇಲೆ ತಲೆ ಇಡು.”

“ಸ್ವಾಮೀ, ನನ್ನ ಹೃದಯ ಸರಿಯಾದ ದಿಕ್ಕಿಗೇ ಹೊರಳಿದೆ. ತಲೆ ಹೇಗಿದ್ದರೇನು?” ಸರ್ ವಾಲ್ಟರ್ ದೃಢವಾಗಿ ಮೃದುವಾಗಿ ಅಂದ.

“ಹೂಂ ಹಾಗಾದರೆ ಕಣ್ಣು ಮುಚ್ಚಿ ಸಾಯಲು ಸಿದ್ಧನಾಗು!” ವಧಿಕ ತಬ್ಬಿಬ್ಬಾಗಿಯೇ ಒದರಿದ. ಸಾವಿನ ಎದುರಿಗೂ ಇವನಿಗೆ ಎಂಥ ಶಾಂತಿ–ಗಾಂಭೀರ್ಯ!

“ಸ್ವಾಮೀ, ಸ್ವಲ್ಪ ತಡೆಯಿರಿ. ನನ್ನ ಗಡ್ಡ ಸರಿಯಾಗಿ ಬದಿಗೆ ಸರಿಸಿಕೊಳ್ಳುತ್ತೇನೆ. ತಲೆ ಕಡಿಯುವಾಗ ಅದೂ ಕತ್ತರಿಸಿ ಹೋಗಬಾರದು. ಬಾಳೆಲ್ಲನ ನನ್ನೊಂದಿಗೆ ಬೆಳೆದ ಮುದ್ದು ಗಡ್ಡ!” ಎಂದ ರ್ಯಾಲೆ. ಮತ್ತು ಅಚ್ಚು ಮೆಚ್ಚಿನಿಂದ ಬೆಳೆಯಿಸಿದ ಆ ಕೆಂಪು ಗಡ್ಡವನ್ನು ಒಂದೆಡೆಗೆ ಸರಿಯಾಗಿ ಒಟ್ಟಿಟ್ಟ. “ಹೂಂ ನಿಮ್ಮ ಕೆಲಸ ಮಾಡಿರಿ!” ಅಂದ.

ಕೆಂಪು ಗಡ್ಡದೊಂದಿಗೇ ಅವನ ರುಂಡ ಬುಟ್ಟಿಗೆ ಹಾಯಾಗಿ ಉರುಳಿತು.

ಸಾವಿನ ದವಡೆಗೆ ಸಿಕ್ಕಾಗಲೂ ರ್ಯಾಲೆಗೆ ಗಡ್ಡದ ಮೋಹ! ಇವನೆಂಥ ಶೋಕಿ! ಅಲ್ಲ ವಾಲ್ಟರ್ ರ್ಯಾಲೆ ನಿಜವಾದ ಕುಲರಸಿಕ. ಸಾವಿಗಿಂತ ಅವನಿಗೆ ತನ್ನ ಸುಂದರ ಗಡ್ಡ ಅಂದ–ಗೆಡುವದು ಅಸಹ್ಯ! ಬಾಳಿನಲ್ಲಿಯೂ ಸಾವಿನಲ್ಲಿಯೂ ಆತ ಒಂದೇ ತೆರ; ಸಾಹಸಿ ವಿಲಾಸಿ ನಿಜವಾದ ಸೊಗಸುಗಾರ. ಇಂಥ ಜೀವಿಗೆ ಹೇಗೆ ಬದುಕುವದೆಂಬುದು ಹೇಗೊ ಹಾಗೆಯೇ ಹೇಗೆ ಸಾಯುವುದೆಂಬುದೂ ಗೊತ್ತು. ✪

***************

# ಭೂತ

ಜಿ. ಎಸ್. ಆನಂದವರ್ಧನ

ಭೂತ, ಅದೊಂದು ಶಕ್ತಿ. ಅನಾದಿ ಕಾಲದಿಂದಲೂ ಜನ ದೇವರನ್ನು ನಂಬಿದಂತೆ ಭೂತವನ್ನೂ ನಂಬಿದ್ದಾರೆ. ಬ್ರಾಹ್ಮಣ ದೇವರ ಶೂದ್ರ ರೂಪವೇ ಭೂತ. ಬ್ರಾಹ್ಮಣ ಉಚ್ಚ ತರಗತಿದವನಾದ್ದರಿಂದ ಅವನು ಆರಾಧಿಸುವುದು ಮೇಲ್ಪಟ್ಟದ್ದಾಯ್ತು. ಅದೇ ದೇವರ ಗಣಗಳು ಶೂದ್ರರ ಆರಾಧನೆಗೆ ಮೀಸಲಾದುವು. ದೇವ ಉದಾರಿ, ಭೂತ ಹಾಗಲ್ಲ. ದೇವರನ್ನು ಬೈಯಬಹುದು. ಟೀಕಿಸಬಹುದು; ಆದರೆ ಭೂತವನ್ನು ಮಾತ್ರ ಎಂದೂ ಅಣಕಿಸಲಾಗದು. ಭೂತ–ಭಯ, ದೇವ–ದಯ; ಭೂತದ ವಿಕೃತ ರೂಪವೇ ಪ್ರೇತ. ಆದರೆ ರಾತ್ರಿ ಆದಂತೆ ಬ್ರಾಹ್ಮಣರೂ ಶೂದ್ರರೂ ಭೇದವಿಲ್ಲದೆ ಈ ಶಕ್ತಿದೇವತೆಗಳನ್ನು ನೆನೆಯುತ್ತಾರೆ. ಹಗಲೊತ್ತು ದೇವ ಕಾಪಾಡಿದ್ದನ್ನು ರಾತ್ರಿ ಭೂತ ಕಾಪಾಡುತ್ತದೆ. ನಿಮಗಿದೆಲ್ಲ ತಮಾಷೆ, ಮೂಢತನ ಮತ್ತು ಕಲ್ಪನೆ ಎಂದೆನಿಸಬಹುದು ಮನೆಗೆ ಮನೆ ಅಂಟಿಕೊಂಡು ಪಟ್ಟಣದ ಗದ್ದಲದಲ್ಲಿ, ವಿದ್ಯುತ್ ಬೆಳಕಿನಲ್ಲಿ ಬೆಳೆದ ನಿಮಗೆ ಇದು ಅರ್ಥವಾಗಬೇಕಾದರೆ, ನೀವು ಒಮ್ಮೆ ನಾನಿದ್ದಂಥ ಭೀಕರ ಕಾಡಿನ ಮಧ್ಯೆ ಒಂದು ರಾತ್ರಿ ಕಳೆದರೆ ಸಾಕು. ...” ಎಂದು ಮುಂತಾಗಿ ನಮ್ಮ ಅಜ್ಜ ಹೇಳುತ್ತಿದ್ದದ್ದು ಜ್ಞಾಪಕಕ್ಕೆ ಬಂತು.

ಸುತ್ತಲೂ ಕಾರ್ಗತ್ತಲು, ಬಿದಿರು ಮೆಳೆಯ ಜೀಕ್ ಜೀಕ್ ಉಜ್ಜಾಟಕ್ಕೆ ಜಿಬ್ಬಿರಿಗಳು ಧ್ವನಿಗೂಡಿಸಿದ್ದುವು. ಎಲ್ಲೆಲ್ಲೂ ನೀರವತೆ. ನಮ್ಮೆದುರು ಒಂದು ಪುಟ್ಟ ಭೂತಗುಡಿ. ಅದರೊಳಗೆ, ಅಂದು ಬೆಳಿಗ್ಗಿನಿಂದಲೇ ಉಜ್ಜಿ ಹೊಳಪುಗೊಂಡ ಭೂತದ ಆಯುಧಗಳು ಹರಳೆಣ್ಣೆಯ ಮಂದ ದೀಪದ ಬೆಳಕಿನಲ್ಲಿ ಅಸ್ಪಷ್ಟವಾಗಿ ಹೊಳೆಯುತ್ತಿದ್ದುವು. ಮಲೆನಾಡಿನ ಆ ಚಳಿಯಲ್ಲಿ ನಾವೊಂದು ಹದಿನೈದು ಜನ ಗುಡಿಯ ದ್ವಾರವನ್ನು ಸುತ್ತುವರಿದು ಪಿಸುಮಾತನಾಡುತ್ತ ನಿಂತಿದ್ದೆವು. ಗಂಟೆ ಎಂಟಾಗುತ್ತಾ ಬಂದಿತ್ತು. ಇನ್ನೇನು ಸ್ವಲ್ಪ ಹೊತ್ತಿನಲ್ಲಿ ಬಲ್ಲಾಡು, ಸುರಚಿಪಳ್ಳಿ, ಇರ್ದೆ ಮುಂತಾದೆಡೆಗಳಿಂದ ಭೂತಗಳು ಆಗಮಿಸಲಿದ್ದುವು. ದೂರದಿಂದ ಕೊಂಬು ಕಹಳೆಯ ಧ್ವನಿ ಕೇಳಿಬರತೊಡಗಿತ್ತು. ಹತ್ತಿರವಾಗುತ್ತಿದ್ದಂತೆ ದೊಂದಿಯ ರಕ್ತರಂಜಿತ ಬೆಳಕು ಮರಗಳ ಮರೆಯಲ್ಲಿ ಕಂಡಿತು. ಭೂತಗಳು ಆಗಮಿಸತೊಡಗಿದವು. ಭೂತ ಹಿಡಿದವರನ್ನು ಇಬ್ಬರು ಪಂಚೆ ಎತ್ತಿ ಕಟ್ಟಿದ ಮರಿಯಾಳುಗಳು ಗಟ್ಟಿಯಾಗಿ ಹಿಡಿದಿದ್ದರು. ಬೆವರಿನಿಂದ ತೊಯ್ದ ಅವರ ಕಟ್ಟುಮಸ್ತಾದ ದೇಹ ಮಿರುಗುತ್ತಿತ್ತು. ಭೂತದವರಿಗೆ ತೀರ್ಥ ಪ್ರೋಕ್ಷಣೆ ಇತ್ಯಾದಿಗಳಾದವು. ನಂತರ ಒಂದೊಂದರಂತೆ ಖಡ್ಗ ಕಠಾರಿಗಳನ್ನು ಕೊಟ್ಟರು. ಆಯುಧ ಸ್ಪರ್ಶದಿಂದ ಭೂತಗಳು ಕೆರಳಿದಂತೆ ಕಂಡವು. ಗೆಜ್ಜೆಯನ್ನು ಜಲ್‌ಜಲ್ ಶಬ್ದ ಮಾಡಿಸುತ್ತ, ಥಣಿಸುತ್ತ ಬರುವ ಕ್ರೂರ ಗೌಜಿನಲ್ಲೇ ಭೂತಕೋಲದ ಸ್ಥಾನಕ್ಕೆ ಮೆರವಣಿಗೆ ಮುಂದುವರಿಯಿತು. ಭೂತಸ್ಥಾನವು ಸುತ್ತಲೂ ಪರ್ವತಗಳಿಂದ ಆವೃತವಾಗಿ, ಭೂತಗಳ ಮೇಳಕ್ಕೆ

ರಡಾಗಿತ್ತು; ಆಕಾಶವೆಲ್ಲ ಮೋಡದಿಂದ ಕವಿದಿತ್ತು; ಮಹೂರ್ತ ಕೂಡಿಬಂದಿತ್ತು. ಭಯಂಕರವಾಗಿ ಅರ್ಭಟಿಸುತ್ತ ಭೂತಗಳು ಆ ಕೆಂಡದ ಮೇಲೆ ಓಡಿದವು. ಇಷ್ಟು ಹೊತ್ತು ನಮ್ಮ ಗಮನ ಸೆಳೆದ ಮುಖ್ಯ ಭೂತದವ ಮಾತ್ರ ಇನ್ನೂ ಧರಿಸುತ್ತಲೇ ಇದ್ದ ಹೊರತು ಬೆಂಕಿಗ ಹಾರಲಿಲ್ಲ. ಅವನು ತೀರ ಮುದುಕನಾಗಿದ್ದ. ಅವನನ್ನು ಸಿಂಗರಿಸಿ ತಾಳೆಗರಿಯಿಂದ ಅಲಂಕರಿಸಲಾಗಿತ್ತು. ಆತ ತಾರಕ ಸ್ವರದಲ್ಲಿ, "ನರಬಲಿ ! ನರಬಲಿ !" ಎಂದು ಅರ್ಭಟಿಸುತ್ತಲೇ ಇದ್ದ. ಥಕ್ಕನೆ ಆತ ಧಾವಿಸುತ್ತ ಹೋಗಿ ಕೆಂಡದ ರಾಶಿಯ ಮೇಲೆ ಬಿದ್ದು ಹೊರಳಾಡತೊಡಗಿದ. ಇಬ್ಬರು ಹುರಿಯಾಳುಗಳು ಅವನನ್ನು ಹೊರಗೆಳೆಯುತ್ತಿದ್ದಂತೆ ಪುನಃ ಪುನಃ ಹೋಗಿ ಕೆಂಡದ ಮೇಲೆ ಬೀಳುತ್ತಿದ್ದ. ಆತ ಕಡೆಗೆ ರೋಷಾವೇಶದ ಉನ್ಮಾದದಲ್ಲಿ ಸೆಟೆದು ನಿಂತು, "ನಿಮಗ್ಯಾರಿಗಾದರೂ ನನ್ನಲ್ಲಿ ನಿಜವಾದ ಭಕ್ತಿಯಿದ್ದರೆ ನನ್ನನ್ನು ಹಿಂಬಾಲಿಸಿ," ಎಂದವನೆ ಕಾಡಿನೆಡೆಗೆ ದಾಪುಗಾಲು ಹಾಕುತ್ತ ನಡೆಯತೊಡಗಿದ. ಹಿಂದೆ ಮುಂದೆ ಆಲೋಚಿಸದೆ ಅಶೋಕ ಅವನನ್ನು ಹಿಂಬಾಲಿಸಿದ. ನಾನು, ವಿಶ್ವನಾಥ, ಪ್ರದೀಪ ಸೇರಿದಂತೆ ಇನ್ನೂ ಅನೇಕರು ಆ ಭೂತವನ್ನು ಹಿಂಬಾಲಿಸಿದೆವು. ನಾವು ನಾಲ್ವರು ಅದೇ ಹಿಂದಿನ ವಾರ ಸುಳ್ಯದ ಮೋಹಿನಿ ಕಾಡನ್ನು, ಮೋಹಿನಿಯ ಸಮ್ಮೋಹನಕ್ಕೆ ಒಳಗಾಗದೆ (ಆ ಕಾಡಿನ ಪ್ರತೀತಿ ಏನೆಂದರೆ, ಯಾರೇ ಭೂತದಲ್ಲಿ ಅಪನಂಬಿಕೆ ಇರುವವರು ಕಾಡಿನೊಳಗೆ ನುಗ್ಗಿದರೆ ಅವರಿಗೆ ದಾರಿ ತಪ್ಪುವುದೆಂದೂ ನಂತರ ಹರಿಕೆ ಹೇಳಿಕೊಂಡರೆ ದಾರಿ ಸಿಗುವುದೆಂದೂ ಇದೆ.) ಸಂಪೂರ್ಣ ಅಲೆದು ಯಾವ ಕಷ್ಟವಿಲ್ಲದೆ ವಾಪಸಾಗಿದ್ದೆವು. ಆ ಧೈರ್ಯದಿಂದಲೇ ಇದ್ಯಾವ ಭೂತ ಒಂದು ಕೈ ನೋಡಿಯೇ ಬಿಡೋಣ ಎಂದು ಹಿಂಬಾಲಿಸಿದೆವು. ಕಾಲಿಗೆ ಹಂಟರ್ ಶೂ ಏರಿಸಿದ್ದೆವು. ಹೊಟ್ಟೆಗೆ ಚೆನ್ನಾಗಿ ಬಿದ್ದಿತ್ತು, ಸಾಹಸ ಪ್ರಜ್ಞೆಯೂ ಚುರುಕುಗೊಂಡಿತ್ತು. ಹುಚ್ಚು ಧೈರ್ಯ ಕೆರಳಿತ್ತು; ಸೀದಾ ಮುನ್ನುಗ್ಗಿದೆವು. ಕಾಡನ್ನು ನುಗ್ಗಿದಂತೆ ಹಿಂದೆ ಬರುತ್ತಿದ್ದ ಭಕ್ತಶಿರೋಮಣಿಗಳು ಮೆಲ್ಲನೆ ಹಿಮ್ಮೆಟ್ಟಿದರು. ಕಡೆಗೆ ನಾವು ಮಾತ್ರ ಉಳಿದೆವು. ಆ ಭೂತ ಹಿಡಿದವ ಅಂಥ ದಟ್ಟ ಗೊಂಡಾರಣ್ಯದಲ್ಲೂ ಅದೇ ಧಾಟಿಯಲ್ಲಿ ದಾಪುಗಾಲು ಹಾಕುತ್ತ ನಿರಾಯಾಸವಾಗಿ ದಾರಿ ಅರಸುತ್ತ ಸಾಗಿದ್ದ. ಟಪ್ ಟಪ್ ಟಪ್. ಇಷ್ಟೊತ್ತು ಕವಿದಿದ್ದ ಮೋಡ ಈಗ ಸುರಿಯತೊಡಗಿತು. ದಟ್ಟವಾಗಿ ಹೆಣೆದ ಮರಗಳ ಎಲೆಯ ಸೆರೆಯಿಂದ ಬಿದ್ದ ನೀರು ನಮ್ಮನ್ನು ಚೆಂಡಿ ಮಾಡಿತು. ಭೂತದಲ್ಲಿ ನಂಬಿಕೆಯೋ, ಅಪನಂಬಿಕೆಯೋ ಹಾಳಾಗಲಿ ಇವನ ಹಿಂದೆ ಈ ರಾತ್ರಿ, ಈ ಮಳೆಯಲ್ಲಿ, ಯಾಕೆ ಹೊರಟೆವೋ? ಎಂದು ಶಪಿಸಿಕೊಳ್ಳುತ್ತ ಮುಂದುವರಿದೆವು. ಈಗ ಹಿಮ್ಮೆಟ್ಟಲು ನಮ್ಮಿಂದ ಖಂಡಿತವಾಗಿಯೂ ಸಾಧ್ಯವಿರಲಿಲ್ಲ. ಗಂಟೆ ಮೂರಾಗುತ್ತ ಬಂತು; ಆದರೆ ಆತ ನಿಲ್ಲುವ ಕುರುಹು ಸಹ ಕಾಣಲಿಲ್ಲ. ಕಾಡು ಕ್ರಮೇಣ ಕಡಿಮೆಯಾಗುತ್ತಾ ಬಂದಿತ್ತು. ಮಳೆಯೂ ನಿಂತಿತ್ತು. ಮುಂದೆಲ್ಲ ಬರಿ ಜೌಗು ಪ್ರದೇಶದಂತೆ ಕಾಣುತ್ತಿತ್ತು. ಜೌಗುಪ್ರದೇಶದ ದರ್ಶನವಾದೊಡನೆ ನಮಗೆ ಹಿಂದಿನ ಹುಚ್ಚು ಸಾಹಸವೆಲ್ಲ ಪ್ರಬಲವಾಗಿ ಜ್ಞಾಪಕಕ್ಕೆ ಬಂದು ತತ್ತರಿಸಿಹೋದೆವು. ಹೋದ ವರ್ಷ ಈ ಪ್ರದೇಶದಲ್ಲೆಲ್ಲೊ ನಾವು ದಾರಿ ತಪ್ಪಿ ಒಬ್ಬ ಹುಚ್ಚ ಮಾಂತ್ರಿಕನ ಕೈಗೆ ಸಿಕ್ಕಿ ಹಾಕಿಕೊಂಡದ್ದು, ಆತನ ಪೈಶಾಚಿಕ ಕ್ರಿಯೆಯಲ್ಲಿ ಭಾಗವಹಿಸಿದ್ದು, ಬೆನ್ನು ಮೂಳೆಯನ್ನು ಮಂತ್ರದಂಡವಾಗಿ ಬಳಸಿ ಆತ ತನ್ನ ಸತ್ತ ತಂದೆಯ ಎದೆಯನ್ನು ಬಗಿದದ್ದು, ನಂತರ ನಡೆದ ಹೋರಾಟದಲ್ಲಿ ಮಾಂತ್ರಿಕ ಜೌಗಿನಲ್ಲಿ ಮುಳುಗಿದ್ದು, ಆತನ ಹೇಳಿಕೆ ನಿಜವೋ ಎಂಬಂತೆ ಸತ್ತ ತಂದೆಗೆ ಜೀವ ಬಂದಂತೆ ಕಂಡದ್ದು, ಅಲ್ಲೆ ಇದ್ದ ನರಿಗಳ ಕಿರುಚಾಟದಲ್ಲಿ ನಾವು ಪ್ರಾಣ ಭಯದಿಂದ ಪಲಾಯನ ಮಾಡಿದ್ದು, ಎಲ್ಲಾ ಜ್ಞಾಪಕಕ್ಕೆ ಬಂದು ಅರೆ, ಪುನಃ ಇಲ್ಲೇ ಈ ಭೂತದೊಡನೆ ಸಿಕ್ಕಿಹಾಕಿಕೊಂಡೆವಲ್ಲ ಎಂದು ನಮ್ಮನ್ನು ನಾವೇ ಹಳಿದುಕೊಂಡೆವು. ಆದರೂ ವಿಧಿ ಇಲ್ಲದೆ ಅವನ್ನು ಹಿಂಬಾಲಿಸಿದೆವು. ಮೋಡಗಳು ಚದುರಿ ಅವುಗಳ ಮಧ್ಯೆ ಚಂದ್ರ ಕಣ್ಣಮುಚ್ಚಾಲೆ ಆಡುತ್ತಿದ್ದ, ಕಪ್ಪೆಗಳು ವಟಗುಟ್ಟುತ್ತಿದ್ದವು. ಎಲ್ಲೆಲ್ಲೂ ಸ್ಮಶಾನ ಮೌನ. ಮುಂದೆ ಹೋಗುತ್ತಿದ್ದ ಆ ಮುದುಕ ನಿಂತು ವಿಕಾರವಾಗಿ

ಊಳಿಡತೊಡಗಿದ. ಅದಕ್ಕುತ್ತರವಾಗಿ ಎರಡು ನರಿಗಳು ಊಳಿಡುತ್ತಾ ಓಡಿಬಂದವು. ಆತ ತನ್ನ ಉಳಿದ ಅರ್ಧಂಬರ್ಧ ಸಿಂಗಾರವನ್ನೆಲ್ಲ ಕಿತ್ತೆಸೆದ. ಅಸ್ಪಷ್ಟವಾಗಿ ಕಂಡಂತೆ ಆತನ ಮುಖ ತೀರಾ ಸುಕ್ಕುಗಟ್ಟಿತ್ತು. ಜೀವ ಕಳೆಯೇ ಇರಲಿಲ್ಲ. ಎದೆಯ ಭಾಗದಲ್ಲಿ ಒಂದು ಆಳವಾದ ಗಾಯ ಕಾಣುತ್ತಿತ್ತು. ಒಟ್ಟಾರೆ ಆತನ ಸ್ವರೂಪ ಜೀವಂತ ಪೆಣದಂತಿತ್ತು. ಕೆಕ್ಕರಿಸಿ ನಗುತ್ತ ನಾವು ಯೋಚಿಸುವುದಕ್ಕಿಂತ ಮೊದಲೆ ಆತ ಹಾರಿ ನನ್ನ ಕುತ್ತಿಗೆಯನ್ನು ತನ್ನ ಮೂಳೆಯಂಥ ಕೈಗಳಿಂದ ಹಿಸುಕತೊಡಗಿದ. ಆ ಮುದುಕನಿಗೆ ಅಂಥ ಅಸಾಮಾನ್ಯ ಶಕ್ತಿ ಇದ್ದೀತೆಂದು ನಾನು ಊಹಿಸಿಯೂ ಇರಲಿಲ್ಲ. ಆಯ ತಪ್ಪಿ ಇಬ್ಬರೂ ಗೊಸರಿನಲ್ಲಿ ಬಿದ್ದೆವು. ಇಷ್ಟೆಲ್ಲ ಕ್ಷಣಾರ್ಧದಲ್ಲಿ ನಡೆದು ಹೋಯಿತು. ತಕ್ಷಣ ವಿಶ್ವನಾಥ ಬಗ್ಗಿ ನನ್ನ ಶರ್ಟನ್ನು ಹಿಡಿದುಕೊಂಡ. ಪ್ರದೀಪ ವಿಶ್ವನಾಥನಿಗೆ ಆಧಾರ ಕೊಟ್ಟ. ಅಶೋಕ ಅಲ್ಲೇ ಬಿದ್ದಿದ್ದ ಕೋಲೊಂದನ್ನು ಎತ್ತಿ ಆ ಮುದುಕನಿಗೆ ಹೊಡೆದ. ಆದರೆ ಏನಾದರೂ ಆತ – ಭೂತ – ಬಿಟ್ಟಾನೆಯೇ, ಒಂದೇ ಸಮನೆ ನನ್ನನ್ನು ಜಗ್ಗುತ್ತಿದ್ದ. ನನ್ನ ಕುತ್ತಿಗೆಯ ಹತ್ತಿರ ಬಿಗಿಯಾಗಿ ಉಸಿರಾಡುವುದೂ ಕಷ್ಟವಾಯಿತು ಮುದುಕ. "ನರಬಲಿ! ನರಬಲಿ!" ಎಂದು ಅರಚುತ್ತಲೇ ಇದ್ದ. ನಾನೀಗ ಎದೆಯವರೆಗೆ ಮುಳುಗಿದ್ದೆ. ಮೆಲ್ಲನೆ ಗೊಸರಿನಲ್ಲಿ ಲೀನವಾಗುತ್ತಿದ್ದೆ. ಗಾಬರಿಗೊಂಡ ನನ್ನ ಮಿತ್ರರು ಶತಪ್ರಯತ್ನ ಮಾಡಿದರು. ಈಗ ನನ್ನ ಮೂಗು ಮಾತ್ರ ಮೇಲಿತ್ತು! ಆ ಮುದುಕ ಸಂಪೂರ್ಣವಾಗಿ ಮುಳುಗಿದ್ದ. ಆದರೂ ನನ್ನ ಕತ್ತು ಹಿಡಿದಿದ್ದ ಆತನ ಕೈಗಳು ಸಡಿಲಗೊಂಡಿರಲಿಲ್ಲ; ಒಳಗಿದ್ದ ಭೂತ ತೃಪ್ತಿಹೊಂದಿರಲಿಲ್ಲ. ತಮ್ಮ ಪ್ರಯತ್ನವೆಲ್ಲ ವಿಫಲಗೊಂಡದ್ದು ಕಂಡು ನನ್ನ ಮಿತ್ರರು ದುಃಖ, ನಿರಾಶೆಯಿಂದ ನೋಡುತ್ತಿದ್ದಂತೆ ನಾನು ಜೌಗಿನಲ್ಲಿ ಜೌಗಾದೆ. ಉಸಿರು ಕಟ್ಟಿತು. ಕಣ್ಣಿಗೆ ಕತ್ತಲೆ ಬಂತು. ಅಯ್ಯೋ? ನಾನು ಸತ್ತೆ? ಇಲ್ಲ, ಹಗುರವಾಗಿದ್ದೇನಲ್ಲ! ಮೆಲ್ಲನೆ ಗೊಸರಿನಿಂದ ಮೇಲೆ ಬಂದೆ. ಅರೆ! ಈಗ ಗಾಳಿಯಲ್ಲಿ ತೇಲಾಡುತ್ತಿದ್ದೆ. ಅದೇನು? ಜೌಗಿನಿಂದ ಯಾರೋ ಹೊರಬರುತ್ತಿದ್ದಾರಲ್ಲ? ಯಾರದು? ನನ್ನ ನೋಡಿ ಕೆಕ್ಕರಿಸಿ ನಗುತ್ತ ಆತ ಅಂತರ್ಧಾನನಾದ. ಈಗೆಲ್ಲ ಅರ್ಥವಾಯ್ತು. ಅದು ಹಿಂದೆ ಸತ್ತಿದ್ದ ಮಾಂತ್ರಿಕನ ಭೂತ. ಈಗ ವಿಮೋಚನೆ ಹೊಂದಿ ಆತ್ಮದ ರೂಪ ತಾಳಿತ್ತು. ಕೆಳಗಿದ್ದ ಅಶೋಕ, ವಿಶ್ವನಾಥ, ಪ್ರದೀಪರು ದುಃಖತಪ್ತರಾಗಿದ್ದರು. ನಾನೆಷ್ಟು ಬಿನ್ನವಿಸಿಕೊಂಡರೂ ಅವರಿಗೆ ಕೇಳಿಸಲೇ ಇಲ್ಲ. ಅವರನ್ನಲ್ಲೇ ಬಿಟ್ಟು ನಾನು ಸ್ವಚ್ಛಂದವಾಗಿ ಗಾಳಿಯಲ್ಲಿ ಹಾರತೊಡಗಿದೆ. ಮನಸ್ಸಿನಲ್ಲೇನೋ ಒಂದು ಅಲೌಕಿಕ ಸಂತೋಷ, ತೃಪ್ತಿ. ನನ್ನ ಒಂದು ಪ್ರಶ್ನೆ ಮಾತ್ರ ಬಗೆ ಹರಿದಿತ್ತು. "ಭೂತ ಎಂಬುದು ನಿಜವಾಗಿಯೂ ಇದೆ!"

---

## ಕೆಲವು ಪರಿಚಿತ ಪದಗಳು; ಅಪರಿಚಿತ ಅರ್ಥಗಳು

ದೇವ = ದಿವಿ, ದಿವ್ಯ, ದೀಪ್ತಿ, ಬೆಳಕು, ಪ್ರಕಾಶಮಾನವಾದವನು
ವಿಷ್ಣು = ವಿಷ್, ವಿಶ್ವರೂಪಿ, ವಿಶ್ವಾತ್ಮ
ಕ್ರಿಸ್ತ = ದೀಕ್ಷಿತನು, ದೀಕ್ಷೆಯನ್ನು ಹೊಂದಿದವನು, ಪರಿಶುದ್ಧನಾದವನು
ಜೀಸಸ್ = ಏಸು, ರಕ್ಷಕ
ಮುಹಮ್ಮದ್ = ಕೀರ್ತಿವಂತ
ರಾಜ = ರಂಜಿಸುವವನು, ಪ್ರಕಾಶಮಾಯನು, ಸಂತೋಷವನ್ನುಂಟುಮಾಡುವವನು,
(ರಂಜಿತೇ ಇತಿ ರಾಜಃ)
ಧರ್ಮ = ರಕ್ಷಿಸುವುದು (ಧಾರಣಾತ್ ಇತಿ ಧರ್ಮಃ)
ಅದೃಷ್ಟ = ಅ + ದೃಷ್ಟ = ಕಾಣದ್ದು, ಗೊತ್ತಿಲ್ಲದಿರುವುದು
ಮುಸ್ಲಿಮ = ಶಾಂತಿಯುತ (ಸಲ್ಮ್ = ಶಾಂತ ಎನ್ನುವುದರಿಂದ).

–ಸಂಗ್ರಹ: ‘ರೀವನ್’

# ನೇಹಿಗರಿಲ್ಲದ 'ನಾಸ್ತಿಕ' ದೇಶ

ಈ ದೇಶವನ್ನು ಶುದ್ಧ ಮಾರ್ಕ್ಸ್‌ವಾದಿ–ಲೆನಿನ್‌ವಾದಿಯನ್ನಾಗಿ ಮಾಡುವ ಕನಸು ಕಾಣುತ್ತಿದ್ದಾರೆ ಎನ್ವರ್ ಹೋಕ್ಸ್‌ಹಾ. ಚೀನ ಅಥವಾ ರಶಿಯಾಗಳು ನಿಜವಾದ ಕಮ್ಯೂನಿಸ್ಟ್ ರಾಷ್ಟ್ರಗಳಲ್ಲ ಎನ್ನುವ ಹೋಕ್ಸ್‌ಹಾರ ಸಂಕುಚಿತ ಬುದ್ಧಿಯಿಂದಾಗಿ ಈ ದೇಶಕ್ಕೀಗ ಸ್ನೇಹಿತ ರಾಷ್ಟ್ರಗಳೇ ಇಲ್ಲ.

**ಗೋಪಾಲ ವಾಜಪೇಯಿ**

'ದೇವರು–ಧರ್ಮಗಳಿಲ್ಲದ ದೇಶವೊಂದಿದೆ…' ಎಂದರೆ ಅದು ಜಗತ್ತಿನ ಮತ್ತೊಂದು ಅಚ್ಚರಿಯಾಗಬಹುದು. ನಾಸ್ತಿಕರಿರುವ ದೇಶಗಳು ಸಾಕಷ್ಟಿವೆ. ಆದರೆ ನಾಸ್ತಿಕರ ದೇಶ ಮಾತ್ರ ಅದೊಂದೇ. ಅಲ್ಲಿ ಪ್ರಾರ್ಥನಾ ಸ್ಥಳಗಳಿಲ್ಲ. ಚರ್ಚ್. ಮಸೀದೆಗಳಿಲ್ಲ. ದೇವತಾರಾಧನೆಗಳೂ ಧರ್ಮಾಚರಣೆಗಳೂ ಅಲ್ಲಿ ಕಾನೂನುಬಾಹಿರ. ಮನೆಗಳಲ್ಲಿ ಕೂಡ ಪ್ರಾರ್ಥನೆ ಅರ್ಚನೆಗಳು ಅಕ್ಷಮ್ಯ ಅಪರಾಧಗಳು. ಹಬ್ಬವೆಂದರೆ ಹುಬ್ಬೇರಿಸುತ್ತದೆ ಆಡಳಿತ. ಈ ಕಾನೂನು ಉಲ್ಲಂಘಿಸಿದರೆ ಅಲ್ಲಿಂದಲ್ಲೇ ಶಿಕ್ಷೆ.

ಹಾಗಾದರೆ ಈ ದೇಶದಲ್ಲಿ ದೇವರು-ಧರ್ಮ ಇರಲೇ ಇಲ್ಲವೆ? ಇದ್ದುವು. ಆದರೆ ಈಗ ಹನ್ನೆರಡು ವರುಷಗಳ ಹಿಂದೆ 'ಆಡಳಿತ' ಅವೆರಡನ್ನೂ ಗಡೀಪಾರು ಮಾಡಿತು. ಬಹಿಷ್ಕಾರ ಹಾಕಿತು. ಹೀಗಾಗಿ ಇಲ್ಲಿಯ ಮುಸಲ್ಮಾನರಿಗೆ ಬಕ್ರೀ–ಈದ್ ಆಗಲಿ ಕ್ರಿಶ್ಚಿಯನ್ನರಿಗೆ ಕ್ರಿಸ್‌ಮಸ್, ಗುಡ್‌ಫ್ರೈಡೇಗಳಾಗಲಿ ಯಾವಾಗ ಬರುತ್ತವೆ ಎಂಬುದು ಕೂಡ ಮರೆಯುತ್ತಲಿದೆಯೇನೋ. ಈಗ ದೇವರಿಲ್ಲದ ಈ ದೇಶ. ಅಲ್ಬಾನಿಯಕ್ಕೆ 'ಒಂದು' ಧರ್ಮವಿದೆ 'ದೇವ'ನೂ ಒಬ್ಬನಿದ್ದಾನೆ. ಆತನಿಗೆ 'ನಾಮ'ವೂ ಒಂದೇ ಇದೆ.

'ಕಮ್ಯೂನಿಜಂ' ಅಲ್ಲಿಯ ಧರ್ಮ. ನಾಮ-ರೂಪವಿಲ್ಲದ ಒಬ್ಬನೇ 'ದೇವ' ಸರ್ವಾಧಿಕಾರಿ ಎನ್ವರ್ ಹೋಕ್ಸ್‌ಹಾ. ಕಾನೂನಿನ ಕಟ್ಟಳೆಯಿಂದಾಗಿ ಅಲ್ಲಿಯ ಜನ ತಮ್ಮ ದೇವರನ್ನೆಲ್ಲಾ ಮರೆಯಲೇ ಬೇಕಾಗಿದೆ, ಈ 'ದೇವ'ನನ್ನು ಮಾತ್ರ ಪೂಜಿಸಬೇಕಾಗಿದೆ.

ಇದಿಷ್ಟೇ ಅಲ್ಬಾನಿಯರ ವೈಶಿಷ್ಟ್ಯವಲ್ಲ, ಇನ್ನೂ ಹಲವಾರು ವಿಶೇಷಗಳಿವೆ ಅಲ್ಲಿ.

ಪೂರ್ವ ಯುರೋಪಿನ ಈ ದೇಶಕ್ಕೆ ನೆರೆಯ ಇಟಲಿ, ಗ್ರೀಸ್‌ಗಳಷ್ಟೇ ಪ್ರಾಚೀನ ಇತಿಹಾಸವಿದೆ. ವೈವಿಧ್ಯಮಯ ಪರಂಪರೆಯೂ ಇದೆ.

ಆರ್ಯ ಜನಾಂಗದಿಂದ ಬಂದ ಅಲ್ಬಾನಿಯನ್ನರು ತಮ್ಮನ್ನು 'ಗರುಡ ವಂಶಜರು' ಎಂದು ಕರೆದುಕೊಳ್ಳುತ್ತಾರೆ. ಅಲ್ಲದೆ ತಮ್ಮ ದೇಶವನ್ನು 'ಗರುಡ ನಾಡು' ಅಥವಾ 'ಶಾಯಿಪ್‌ಷ್ನಯರ್' ಎಂದು ಕರೆಯುತ್ತಾರೆ. ಈ ಉಪಖಂಡದ ಅತಿ ಹಳೆಯ ಜನಾಂಗದ ಜನ ಇವರು ಎಂಬುದಂತೂ



**ಇಂಥ ಮೀನಾರುಗಳು ಈಗಿಲ್ಲ. ಅವುಗಳತ್ತ ನೋಡುವುದೂ, ಅವುಗಳ ಬಗ್ಗೆ ಮಾತನಾಡು ವುದೂ ಅಲ್ಬಾನಿಯದಲ್ಲೀಗ ಅಪರಾಧ.**

ಭಾವನೆಯನ್ನು ಬೆಳೆಸಿಕೊಂಡಿದ್ದ ಅಲ್ಬಾನಿಯನ್ನರು ಉತ್ತರ ನಾಡಿನಲ್ಲಿ ಬಂಡೆದ್ದಾಗ ದಕ್ಷಿಣದವರೂ ಜತೆಗೂಡಿದರು. ದೇಶಾದ್ಯಂತ ಸ್ವಾತಂತ್ರ್ಯ ಸಮರದ ನಗಾರಿ ಬಾರಿಸಿತು. ೧೯೦೯–೧೨ರ ವರೆಗಿನ ಮೂರು ವರ್ಷಗಳಂತೂ ಅಲ್ಲಿ ಘೋರ ಸ್ವಾತಂತ್ರ್ಯ ಸಮರ. ಕೊನೆಗೂ ಅಲ್ಬಾನಿಯ ಸ್ವತಂತ್ರವಾಗಿ ಇಸ್ಮಾಲಿ ಕಮಾಲ್ ಆ ರಾಷ್ಟ್ರದ ಪ್ರಥಮ ಅಧ್ಯಕ್ಷರಾದರು. ಯುರೋಪಿಯನ್ ರಾಷ್ಟ್ರಗಳಿಂದ ಮನ್ನಣೆ ಸಿಕ್ಕಿತಾದರೂ ಅಲ್ಬಾನಿ-ಯಕ್ಕೆ ಒಬ್ಬ ಸರಿಯಾದ ಆಳಿಕೆಗಾರ ಇರದ್ದನ್ನು ಗಮನಿಸಿ ಆ ಸ್ಥಾನಕ್ಕೆ ವೀಡ್‌ನ ಪ್ರಿನ್ಸ್ ವಿಲಿಯಂ-ನನ್ನು ಆರಿಸಲಾಯಿತು. ಆತ ಆಳಿಕೆಯಾರಂಭಿಸಿದ ಕೆಲ ತಿಂಗಳುಗಳಲ್ಲಿಯೇ ಮೊದಲ ಮಹಾಯುದ್ಧ ಆರಂಭವಾಯಿತು, ಆಗ ಆತ ಬೇರೊಂದು ದೇಶಕ್ಕೆ ಓಡಿ ಹೋಗಿ ತಲೆ ಮರಿಸಿಕೊಂಡಿರಬೇ-ಕಾಯಿತು. ಅಲ್ಬಾನಿಯದಲ್ಲಿ ಅರಾಜಕತೆಯುಂಟಾ ಯಿತು. ಇದೇ ವೇಳೆಗೆ ಅನೇಕ ದೇಶಗಳ ಸೈನ್ಯ ಗಳಿಗೆ ಅಲ್ಬಾನಿಯಾ ಯುದ್ಧರಂಗವಾಗಿ ಪರಿಣಮಿ ಸಿತು. ಒಳ್ಳೆ ಕಲಿತನದಿಂದ ಎರಡೂ ಬದಿಗೆ ಹೋರಾಡಿದ ಅಲ್ಬಾನಿಯನ್ನರಲ್ಲಿ ಸ್ವಾತಂತ್ರ್ಯ ವುಳಿಸಿಕೊಳ್ಳುವ ಆವಶ್ಯಕತೆ ಹೆಚ್ಚಾಗಿ ಕಂಡು ಬಂತು. ಮೊದಲ ಮಹಾಯುದ್ಧ ಮುಗಿದಾಗ ಅಲ್ಬಾನಿಯ ಸ್ವತಂತ್ರವಾಗಿಯೇ ಉಳಿಯಿತಾದರೂ ಯುದ್ಧದಿಂದಾಗಿ ಪೂರ್ಣ ಧ್ವಂಸಗೊಂಡಿತ್ತು.

ತಮ್ಮ ಹಳ್ಳಿಗಳನ್ನು ಮತ್ತೆ ಕಟ್ಟುವಲ್ಲಿ ಅಲ್ಬಾನಿಯನ್ನರು ಅಹರ್ನಿಶಿ ದುಡಿಯತೊಡಗಿ ದರು. ಅವರೆದುರಿಗಿದ್ದ ಸಮಸ್ಯೆಗಳು ಭೂತಾ-ಕಾರದವು. ಒಂದು ದೃಷ್ಟಿಯಲ್ಲಿ ಅವರು ತಮ್ಮ ಬಾಳನ್ನೇ ಪುನರೂಪಿಸಿಕೊಳ್ಳಬೇಕಾಗಿತ್ತು. ಮುಖ್ಯ ವಾಗಿ ಅನ್ನದು. ಯುದ್ಧದಿಂದಾಗಿ ಬರಡಾಗಿ ಹೋಗಿದ್ದ ಭೂಮಿಯನ್ನು ಸತ್ವಯುತವಾಗಿಸ ಬೇಕಾದ್ದು. ಈ ವರೆಗೆ ಅವರ ಪ್ರಯತ್ನ ಈ ದಿಶೆಯಲ್ಲಿ ನಡೆದೇ ಇದೆ.

ಸ್ವಾತಂತ್ರ್ಯಾನಂತರದ ಅಲ್ಬಾನಿಯದ ರಾಜ ಕೀಯ ವಾತಾವರಣ ಯಾವ ಹೊತ್ತಿಗೆ ಏನಾಗು ತ್ತದೋ ಎಂಬಷ್ಟು ಭಯಾನಕವಾಗಿತ್ತು. ಮತ್ತೆ ಅರಾಜಕತೆ ತಲೆದೋರುವ ಲಕ್ಷಣಗಳು ಕಂಡು ಬರತೊಡಗಿದವು. ಕೊನೆಗೆ ೧೯೨೪ರಲ್ಲಿ ಅಲ್ಬಾ-ನಿಯದ ಮಾಜಿ ಅಧಿಕಾರಿಯಾಗಿದ್ದ ಅಹ್ಮದ ಬೇ ಝೋಗು ಎಂಬಾತ ರಾಷ್ಟ್ರಸೂತ್ರಗಳನ್ನು ತನ್ನ ಕೈಗೆ ತೆಗೆದುಕೊಂಡ. ನಾಲ್ಕು ವರುಷ ಆಡಳಿತ ನಡೆಸಿದ ನಂತರ ತಂತಾನೇ ಮೊದಲನೆಯ ಕಿಂಗ್ ಝೋಗ್ ಎಂದು ಕರೆದುಕೊಂಡ.

ಎರಡು ಮಹಾಯುದ್ಧಗಳ ನಡುವಿನ ಅವಧಿ ಯಲ್ಲಿ ಅಲ್ಬಾನಿಯದ ವ್ಯವಹಾರಗಳಲ್ಲಿ ಇಟಲಿಯ ಪ್ರಭಾವ ಹೆಚ್ಚಾಗಿತ್ತು. ಇಟಲಿಯ ಉದ್ಯಮಿಗಳು ಅಲ್ಬಾನಿಯದಲ್ಲಿ ಪೆಟ್ರೋಲಿಯಂ ಮತ್ತು ಇತರ

ಕೈಗಾರಿಕೆಗಳನ್ನು ಬೆಳೆಸಿದರು. ಅಷ್ಟೇ ಅಲ್ಲ ಧನಸಹಾಯವನ್ನು ಮಾಡಿದರು. ಆದರೆ ಮುಸೋಲಿನಿಯು ಮುತ್ಸದ್ದಿ ಬುದ್ಧಿಯಿಂದಾಗಿ– ಬಾಲ್ಕನ್ ರಾಷ್ಟ್ರಗಳೆಲ್ಲವನ್ನು ಆಳುವ ಮಹತ್ವಾಕಾಂಕ್ಷೆಯಿಂದ – ಇಟಲಿ ಅಲ್ಬಾನಿಯದ ಮೇಲೆ ೧೯೩೯ ರಲ್ಲಿ ಬಾಂಬ್ ದಾಳಿ ಮಾಡಿತು. ತಂತಾನೆ ರಾಜ ಎಂದು ಘೋಷಿಸಿಕೊಂಡಿದ್ದ ರೆಝೋಗೋ ಏಪ್ರಿಲ್ ತಿಂಗಳಲ್ಲಿ ಇಂಗ್ಲಂಡಿಗೆ ಓಡಿ ಹೋದ. ಮುಂದಿನ ಐದು ವರ್ಷ ಕಾಲ ಅಲ್ಬಾನಿಯು ಮತ್ತೆ ದಾಸ್ಯಶೃಂಖಲೆ ತೊಟ್ಟುಕೊಳ್ಳಬೇಕಾಯಿತು. ಈ ಅವಧಿಯಲ್ಲಿ ಇಟಲಿ ಇಲ್ಲವೆ ಜರ್ಮನ್ ಸೈನ್ಯಗಳು ಅಲ್ಬಾನಿಯದಲ್ಲಿ




ಈಗ ತನ್ನ ಮಹತ್ವವನ್ನು ಕಳೆದುಕೊಂಡಿರುವ ಟಿರಾನಾದಲ್ಲಿನ ಈಸ್ಟರ್ನ್ ಗ್ರೀಕ್ ಚರ್ಚ್.

ವಶ ಮಾಡಿದವು.

ಅನಂತರ ೧೯೪೦ರಲ್ಲಿ ಇಟಲಿ ಗ್ರೀಸ್ ದೇಶದ ಮೇಲೆ ದಾಳಿ ಮಾಡಿದಾಗ ಅಲ್ಬಾನಿಯನ್ನರು ತಮ್ಮ ಜಾಣಾಕ್ಷತನವನ್ನು ತೋರಿಸತೊಡಗಿದರು. ಇಟಲಿಯ ಸೈನ್ಯವನ್ನು ಗ್ರೀಸ್ ಸೈನ್ಯ, ಅಲ್ಬಾನಿಯದ ಕೊಟ ಯೋಧರ ಸಹಾಯದಿಂದ ಎದುರಿಸಿತು. ಮುಸೋಲಿನಿಯ ಸೈನ್ಯ ಸೋತು ಹಿಮ್ಮೆಟ್ಟುತ್ತಿದ್ದ ಹಾಗೆ ನಾಝಿಗಳು ಅವರ ಸಹಾಯಕ್ಕೆ ಬಂದು ಮುಸೋಲಿನಿಯ ಸೈನ್ಯಕ್ಕೆ ಬಲ ಕೊಟ್ಟರು. ಜರ್ಮನರ ಈ ಸಹಾಯ ಒಂದು ದೃಷ್ಟಿಯಿಂದ ಅಲ್ಬಾನಿಯನ್ನರಿಗೆ ಶಾಪವಾಗಿ ಪರಿಣಮಿಸಿತೇನೋ. ಆಗ ಆದಷ್ಟು ವಿತ್ತಹಾನಿ, ಪ್ರಾಣಹಾನಿಯನ್ನು ಅವರೆಂದಿಗೂ ಕಂಡಿರಲಿಲ್ಲ.

೧೯೪೩ರಲ್ಲಿ, ಇಟಲಿಯ ಪತನದ ನಂತರ, ಶಿಕ್ಷಕನಾಗಿದ್ದ ಜನರಲ್ ಎನ್ವರ್ ಹೋಕ್ಸ್‌ಹಾ ವಿಮೋಚನಾ ದಳವೊಂದನ್ನು ಸಂಘಟಿಸಿದ. ಯುಗೋಸ್ಲಾವಿಯದ ಮಾರ್ಶಲ್ ಟಿಟೋ ಮತ್ತು ಸೋವಿಯತ್ ಸೈನ್ಯದ ಸಹಕಾರವೂ ದೊರೆಯಿತು. ಕೆಲದಿನಗಳ ಘೋರ ಕದನದ ನಂತರ ಜರ್ಮನರು ಅಲ್ಬಾನಿಯದಿಂದ ಹಿಮ್ಮೆಟ್ಟ ಬೇಕಾಯಿತು.

ಮರುವರುಷ ಸ್ವತಂತ್ರ ಅಲ್ಬಾನಿಯದಲ್ಲಿ ಎನ್ವರ್ ಹೋಕ್ಸ್‌ಹಾರ ನೇತೃತ್ವದಲ್ಲಿ ಸರಕಾರ ರಚಿತವಾಯಿತು. (೧೯೪೪ ನವೆಂಬರ್ ೨೯). ಹೋಕ್ಸ್‌ಹಾರ (ಕಮ್ಯುನಿಸ್ಟ್ ಒಲವಿನ) ಪಕ್ಷವಾದ 'ನ್ಯಾಶನಲ್ ಲಿಬರೇಶನ್ ಮೂವ್‌ಮೆಂಟ್' ೧೯೪೫ರ ಡಿಸೆಂಬರಿನಲ್ಲಿ ನಡೆದ ಚುನಾವಣೆಗಳಲ್ಲಿ ವಿಜಯಿಯಾಯಿತು. ೧೯೪೬ರ ಜನೇವರಿ ೧೧ ರಂದು ಅಲ್ಬಾನಿಯ ಪ್ರಜಾರಾಜ್ಯವೆಂದು ಘೋಷಿಸಲ್ಪಟ್ಟಿತು. ಅಲ್ಬಾನಿಯದ ಕಮ್ಯುನಿಸ್ಟ್ ಪಕ್ಷದ ಪ್ರಥಮ ಕಾರ್ಯದರ್ಶಿ ಎಂದು ಆಯ್ಕೆಯಾದ ಎನ್ವರ್ ಹೋಕ್ಸ್‌ಹಾ ಅಲ್ಬಾನಿಯದ ಪ್ರಥಮ ಪ್ರಧಾನಿಯಾದರು. ಅಂತೂ ಅಲ್ಬಾನಿಯದ ಶತಮಾನಗಳಷ್ಟು ಹಳೆಯದಾದ 'ಸಂಪೂರ್ಣ ಸ್ವಾತಂತ್ರ್ಯ'ದ ಬಕೆ ಪೂರೈಸಿತು.

ಸ್ಟಾಲಿನ್‌ವಾದಿಯಾದ ಎನ್ವರ್ ಹೋಕ್ಸ್‌ಹಾ ಆಡಳಿತ ಬಲು ಕಟುವಾದದ್ದು. ಒಂದು ದೃಷ್ಟಿಯಿಂದ ಸರ್ವಾಧಿಕಾರವೆಂದರೂ ಅಡ್ಡಿಯಿಲ್ಲ. ಪೋಲೀಸ್ ರಾಜ್ಯ ಅತನದು. ಆದರೆ ಸಮರ್ಥ ಆಡಳಿತಗಾರ ಆತ. ಸ್ಟಾಲಿನ್ ಮತ್ತು ಮಾವೋರಿಗಿಂತ ಹೋಕ್ಸ್‌ಹಾ ಹೆಚ್ಚು ಒಲಿದದ್ದು ಮಾರ್ಕ್ಸ್ ಪ್ರಣೀತ ಕಮ್ಯುನಿಸಂನತ್ತ.

ಮುಸ್ಲಿಂ ಬಟ್ಟೆ ವ್ಯಾಪಾರಿಯೊಬ್ಬನ ಮಗ ಹೋಕ್ಸ್‌ಹಾ ಫ್ರಾನ್ಸಿನ ಕೋರಿತ್ಸಾದ ಫ್ರೆಂಚ್ ಶಾಲೆ ಮತ್ತು ಪ್ಯಾರಿಸ್ಸಿನ ಮೊಂಟಿಪೆಲಿಯರ್ ವಿಶ್ವವಿದ್ಯಾಲಯದಲ್ಲಿ ಓದಿದವ. ಪ್ಯಾರಿಸ್ಸಿನಲ್ಲಿದ್ದಾಗಲೇ ಕಮ್ಯುನಿಸ್ಟ್ ಸಂಪರ್ಕ ಬಂತು. ಕೋರಿತ್ಸಾದಲ್ಲಿ ಪ್ರೊಫೆಸರ್ ಆಗಿ ಕೆಲಸ ಮಾಡುತ್ತಿದ್ದಾಗಲೇ ತನ್ನ ದೇಶದ ಮೇಲೆ ಮುಸೋಲಿನಿಯ ದಬ್ಬಾಳಿಕೆ ಆರಂಭವಾದ್ದರಿಂದ ಕೆಲಸ ಬಿಟ್ಟು, ಭೂಗತ ಚಟುವಟಿಕೆಗಳಲ್ಲಿ ತೊಡಗಿದ. ಆಗಲೇ ಆತ ಗೌಪ್ಯವಾಗಿ ಅಲ್ಬಾನಿಯದ ಕಮ್ಯುನಿಸ್ಟ್ ಪಕ್ಷ ಕಟ್ಟಿ ಅದರ ರಾಜಕೀಯ ಕಾರ್ಯದರ್ಶಿಯಾದದ್ದು.

ಅಲ್ಬಾನಿಯಕ್ಕೆ ಸಹಾಯ ಅತಿ ಅವಶ್ಯವಾಗಿ ಮತ್ತು ಶೀಘ್ರವಾಗಿ ಬೇಕಾಗಿತ್ತು. ಹೋಕ್ಸ್‌ಹಾ ಟಿಟೋರಲ್ಲಿ ಕೇಳಿದರು. ಆದರೆ ಟಿಟೋ ಉದ್ದೇಶ ಬೇರೆ ಇತ್ತು. ಅಲ್ಬಾನಿಯವನ್ನು ಯುಗೋಸ್ಲಾವಿಯದಲ್ಲಿ ಸೇರಿಸಿ 'ವಿಶಾಲ ಯುಗೋಸ್ಲಾವಿಯಾ' ರಚಿಸಬೇಕೆಂದುಕೊಂಡಿದ್ದರು ಟಿಟೋ. ಅಲ್ಬಾನಿಯದ 'ಕಾಮ್ರೇಡ್'ಗಳು ಇದನ್ನೊಪ್ಪಲಿಲ್ಲ. ೧೯೪೮ರಲ್ಲಿ ರಶಿಯ ಸಹಾಯಹಸ್ತ ಮುಂದು ಮಾಡಿತು. ಸೋವಿಯತ್ ಒಕ್ಕೂಟದಿಂದ ಟಿಟೋರನ್ನು ಹೊರಹಾಕಿದ ನಂತರ ಈ ಸಹಾಯದ ಪ್ರಮಾಣ ಹೆಚ್ಚಾಯಿತು. ಇದರಿಂದ ಅಲ್ಬಾನಿಯದಲ್ಲಿ ಆದ ಪ್ರಗತಿ ಬಹಳ.

೧೯೬೦ ರಲ್ಲಿ ರಶಿಯಕ್ಕೂ ಅಲ್ಬಾನಿಯಕ್ಕೂ ದ್ವೇಷ ಆರಂಭವಾಯಿತು. ಅದಕ್ಕೆ ಕಾರಣ ಆಗಿನ ರಶಿಯದ ಪ್ರಧಾನಿ ನಿಕಿಟಾ ಕ್ರುಶ್ಚೇವ್, ಸ್ಟಾಲಿನ್ನರ ನಿಧನಾನಂತರ ಮಾರ್ಕ್ಸ್‌ವಾದದಲ್ಲಿ ಕೆಲ ಬದಲಾವಣೆಗಳನ್ನು ತರಲು ಪ್ರಯತ್ನಿಸಿದ್ದು. ಹೀಗಾಗಿ ಹೋಕ್ಸ್‌ಹಾ ೧೯೬೦ರ ನವೆಂಬರಿನಲ್ಲಿ ರಶಿಯ ಹಾಗೂ ವಾರ್ಸಾ ಒಪ್ಪಂದದ ಇತರ ದೇಶಗಳೊಂದಿಗೆ ಸಂಪರ್ಕವನ್ನು ಕಡಿದುಕೊಂಡರು. ಅದೇ ವೇಳೆಗೆ ಚೀನ ಮುಂದೊಡ್ಡಿದ್ದ ಸಹಕಾರಹಸ್ತಕ್ಕೆ ತಮ್ಮ ಹಸ್ತ ಕೂಡಿಸಿದರು. ಸ್ಟಾಲಿನ್ ನಂತರದ

ನಿಜವಾದ ಮಾರ್ಕ್ಸ್‌ವಾದಿ ಎಂದರೆ ಮಾವೋ–ತ್ಸೆ ತುಂಗ್ ಎಂದು ಹೋಕ್ಸಾ ಆಗ ತಿಳಿದಿದ್ದರು.

ಇದೇ ಅವಧಿಯಲ್ಲಿ ಅಲ್ಬಾನಿಯ ದೊಡ್ಡ ಹೆಸರು ಮಾಡಿದ್ದು. ದೇವರು–ಧರ್ಮ–ಚರ್ಚು–ಮಸೀದೆಗಳನ್ನು ಕಾನೂನುಬಾಹಿರಗೊಳಿಸಿದ್ದು. ೧೯೬೭ರಲ್ಲಿ ಎನ್ವರ್ ಹೋಕ್ಸಾ ಈ ಕಾನೂನು ತಂದು, ಅಲ್ಬಾನಿಯುವನ್ನು ಜಗತ್ತಿನ ಪ್ರಥಮ 'ನಾಸ್ತಿಕ ದೇಶ'ವನ್ನಾಗಿ ಮಾಡಿದರು. ಇಂಥ ದೊಂದು ನಿರ್ಧಾರವನ್ನು ಯಾವ ಮಾರ್ಕ್ಸ್‌ವಾದಿಯೂ, ಸ್ಟಾಲಿನ್–ಮಾವೋ ಕೂಡ, ತೆಗೆದು ಕೊಳ್ಳುವ ಧೈರ್ಯ ಮಾಡಿರಲಿಲ್ಲ. ಅಷ್ಟೇ ಅಲ್ಲ, ಅಲ್ಬಾನಿಯರೆಲ್ಲ ತಮ್ಮ ಇಸ್ಲಾಮಿ ಅಥವಾ ಕ್ರಿಶ್ಚಿಯನ್ ಹೆಸರಿನ ಬದಲು ಹೊಸದೆನಿಸಬಹುದಾದ ಕಮ್ಯುನಿಸ್ಟ್ ಹೆಸರನ್ನು ಇಟ್ಟುಕೊಳ್ಳಬೇಕೆಂಬ ಆಜ್ಞೆಯನ್ನೂ ಹೊರಡಿಸಿದರು.

ಮೊಟ್ಟಮೊದಲು ತಮ್ಮ ಹೆಸರನ್ನು ಬದಲು ಮಾಡಿಕೊಂಡವರು ಹೋಕ್ಸಾ. ಮೊದಲು ಅವರ ಹೆಸರು ಮೊಹಮ್ಮದ ಅನ್ವರ್ ಹೋಡಾ ಎಂದಿತ್ತು.

ಅವರ ಈ ಕಾನೂನಿನನ್ವಯ ಈಗ ತಂದೆ–ತಾಯಿಗಳು ತಮ್ಮ ನವಜಾತ ಶಿಶುವಿಗೆ ಹೆಸರಿಡಬೇಕಾದರೂ ಸರಕಾರವನ್ನು ಕೇಳಬೇಕಾಗಿದೆ. ಸರಕಾರದ ನೀತಿ, ವಿಚಾರಧಾರೆ ಮತ್ತು ರಾಜಕೀಯ ನಿರ್ಣಯಗಳಿಗನುಸಾರವಾಗಿ ಮಕ್ಕಳು ಹೆಸರು ಪಡೆಯುತ್ತವೆ. ಇದರ ಹಿಂದಿರುವ ಉದ್ದೇಶವೆಂದರೆ ಜನ ಮತ್ತು ಮುಂದೀಳಿಗೆ ತಮ್ಮ ಧಾರ್ಮಿಕ ಹಿನ್ನೆಲೆ ಮತ್ತು ಸಂಬಂಧಗಳನ್ನು ಸಂಪೂರ್ಣ ಮರೆಯಬೇಕು ಎಂಬುದು. ಹೋಕ್ಸಾರ ಈ ಮತವಿರೋಧಿ ಮನೋಭಾವ ಕೇವಲ ಅಲ್ಬಾನಿಯಕ್ಕಷ್ಟೇ ಅತಂಕಪ್ರದವಾಗಿರದೇ ಇತರ ದೇಶಗಳೊಂದಿಗಿನ ಸಂಬಂಧಕ್ಕೂ ತಡೆಯುಂಟು ಮಾಡಿದೆ.

ಚೀನದೊಂದಿಗಿನ ಕೂಡ ಅಲ್ಬಾನಿಯದ ಸ್ನೇಹ ಬಹಳಕಾಲವುಳಿಯಲಿಲ್ಲ. ೧೯೭೪ಕ್ಕೆ ಮೊದಲು ಚೀನದಿಂದ ಕೋಟಿ ಕೋಟಿ ಡಾಲರುಗಳ ಧನ ಸಹಾಯ ಪಡೆದಿದ್ದ ಅಲ್ಬಾನಿಯಕ್ಕೆ ತನ್ನ ಸಹಾಯದ ಪ್ರಮಾಣವನ್ನು ಕಡಿಮೆ ಮಾಡಿಬಿಟ್ಟಿತು ಆ ರಾಷ್ಟ್ರ. ಯುಗೋಸ್ಲಾವಿಯದೊಂದಿಗೆ ಸೈನಿಕ ಒಕ್ಕೂಟ ಸಾಧಿಸಬೇಕೆಂಬ ಚೀನದ ಸಲಹೆಯನ್ನು ಹೋಕ್ಸಾ ತಳ್ಳಿ ಹಾಕಿದರಷ್ಟೇ ಅಲ್ಲ, ಚೀನ ವಿಯಟ್‌ನಾಂ ಮೇಲೆ ದಾಳಿ ಮಾಡಿದಾಗ ವಿಯೆಟ್ನಾಮಿನ ಬೆನ್ನು ಕಟ್ಟಿದರು. ೧೯೭೭ರ ನಂತರ, ಮಾವೋತ್ಸೆ ತುಂಗರು ನಿಧನರಾದ ಮೇಲೆ ಅಲ್ಬಾನಿಯುದ ದಾರಿಗೆ ಚೀನದ ನೀಡಿದ ಮತ್ತಷ್ಟು ಉತ್ತರವಾಯಿತು.

ಈ ವೇಳೆಗೆ ಅಲ್ಬಾನಿಯದೊಂದಿಗೆ ಮತ್ತೆ ಸಂಪರ್ಕ ಬೆಳೆಸಿಕೊಳ್ಳಲು ತಾಂತ್ರಿಕ ಮತ್ತು ಧನದ ಸಹಾಯವನ್ನು ನೀಡುವುದರ ಮೂಲಕ ಯತ್ನಿಸಿತು ರಶಿಯ. ಆದರೆ ಅಲ್ಬಾನಿಯದ ಧುರೀಣ ಅದನ್ನೊಪ್ಪಲಿಲ್ಲ. ಬದಲಾಗಿ, ಬ್ರೆಜ್ನೇವ್‌ರನ್ನು "ಕ್ರೆಮ್ಲಿನ್ನಿನ ಸದ್ಯದ ಝಾರ್ (ದೊರೆ)" ಎಂದು ಜರಿದು ಬಿಟ್ಟರು.

೧೯೭೦ರಲ್ಲಿ ಗ್ರೀಸ್ ಮತ್ತು ಯುಗೋಸ್ಲಾವಿಯದೊಂದಿಗೆ ಮತ್ತೆ ಸ್ನೇಹ ಬೆಳೆಸಲು ಹೋಕ್ಸಾ ಮುಂದಾದರು. ಇಂದಿಗೂ ರಶಿಯ, ಅಮೇರಿಕಗಳನ್ನು ಮಾತ್ರ ಹೆಸರೆತ್ತಿ ಕೂಡ ಕರೆಯುವುದಿಲ್ಲ ಅಲ್ಬಾನಿಯ.

ಆಮೆ ತನ್ನ ಚಿಪ್ಪಿನಲ್ಲಿ ಮುಖ, ಕಾಲುಗಳನ್ನು ಹುಗಿದುಕೊಳ್ಳುವ ಹಾಗೆ ಇದೆ ಅಲ್ಬಾನಿಯುದ ವರ್ತನೆ. ಇಂದು 'ಚೀನವಾಗಲಿ, ರಶಿಯವಾಗಲಿ ನಿಜವಾದ ಕಮ್ಯುನಿಸ್ಟ್ ರಾಷ್ಟ್ರಗಳಲ್ಲ; ಅಲ್ಬಾನಿಯ ಮಾತ್ರ ನಿಜವಾದ ಕಮ್ಯುನಿಸ್ಟ್ ರಾಷ್ಟ್ರ' ಎಂದು ಸಾರುತ್ತಿರುವ ಹೋಕ್ಸಾ, ತನ್ನ ಸಂಕುಚಿತ ಮನೋಭಾವದಿಂದಾಗಿ ಅಲ್ಬಾನಿಯವನ್ನು ಸ್ನೇಹಿತರಿಲ್ಲದ ರಾಷ್ಟ್ರವನ್ನಾಗಿ ಮಾಡಿಟ್ಟಿದ್ದಾರೆ.

ಆಡ್ರಿಯಾಟಿಕ್ ಸಮುದ್ರದ ಪೂರ್ವ ಕರಾವಳಿಯಲ್ಲಿ ಆಮೆಯಂತೆ ಮಲಗಿರುವ ಅಲ್ಬಾನಿಯದ ಒಟ್ಟು ಕ್ಷೇತ್ರ ೧೧ ಸಾವಿರ ಚದುರ ಮೈಲುಗಳು. ೧೯೭೭ರ ಜನಗಣತಿಯ ಪ್ರಕಾರ ಜನಸಂಖ್ಯೆ ಇಪ್ಪತ್ತಾರೂವರೆ ಲಕ್ಷ. ಇವರಾಡುವ ಭಾಷೆಗಳು ಮುಖ್ಯವಾಗಿ ಅಲ್ಬಾನಿ ಮತ್ತು ಗ್ರೀಕ್. ಟಾಸ್ಕ್ ಎಂಬುದು ಅಧಿಕೃತ ಭಾಷೆ. ೧೯೭೦ರ ಅಂಕಿ–ಸಂಖ್ಯೆಯ ಪ್ರಕಾರ ಸಾಕ್ಷರತೆ ೭೫%ರಷ್ಟು.

ಪರ್ವತಮಯ ಪ್ರದೇಶವಾದ ಅಲ್ಬಾನಿಯ ಕ್ಷುದ್ರ ಮರಗಳ ಅರಣ್ಯಗಳಿಂದಾವೃತವಾಗಿದೆ. ಪೂರ್ವ–ಪಶ್ಚಿಮಕ್ಕೆ ಹರಿಯುವ ನದಿಗಳು ಬಹಳ. ಉತ್ತರದ ಪರ್ವತಗಳು ೮೫೦೦ ಅಡಿಗಳಷ್ಟು

ಎತ್ತರ ಇವೆ.

ಪೂರ್ವ ಉತ್ತರಗಳಲ್ಲಿ ಯುಗೋಸ್ಲಾವಿಯಾ, ದಕ್ಷಿಣಕ್ಕೆ ಗ್ರೀಸ್ ಹಾಗೂ ಪಶ್ಚಿಮದಲ್ಲಿರುವ ಆಡ್ರಿಯಾಟಿಕ್ ಸಮುದ್ರದ ಆಚೆ ಇಟಲಿ ಇದರ ನೆರೆ ರಾಷ್ಟ್ರಗಳು.

ಅಲ್ಬಾನಿಯನ್ನರದು ಒಂದೊಂದು ಜಿಲ್ಲೆಯಲ್ಲೂ ಒಂದೊಂದು ವಿಧದ ಬದುಕು. ಇತರ ಯುರೋಪಿಯನ್ನರಷ್ಟು ಗೌರವರ್ಣದವರಲ್ಲವಾದ, ಈ ಜನ ಉದ್ದ ಮುಖ, ಉದ್ದವಾದ ಕತ್ತು ಮತ್ತು ಅಗಲವಾದ ಹೆಗಲುಳ್ಳವರು. ಬಲು ಧೈರ್ಯವಂತರು. ಅಷ್ಟೇ ಕಠಿಣ ಹೃದಯಿಗಳು ಕೂಡ. ಒಳ್ಳೆ ಕುದುರೆ ಸವಾರರು.

ಹೆಂಗಳೆಯರಿಗೆ ಬಣ್ಣಬಣ್ಣದ ಉಡುಗೆತೊಡುಗೆಗಳೆಂದರೆ ಬಹಳ ಇಷ್ಟ. ಬಟ್ಟೆಗಳ ಮೇಲೆ ಬಣ್ಣಬಣ್ಣದ ಚಿತ್ತಾರಗಳು, ಬೆಳ್ಳಿ, ತಾಮ್ರಗಳಂಥ ಲೋಹದ ತಂತಿಯ ಕುಸುರುಗಳನ್ನು ಹಾಕುತ್ತಾರೆ (ಇಂಥ ಕುಸುರಿನ ಕೆಲಸ ಅಲ್ಲಿ ಪ್ರಾಚೀನ ಕಾಲದಿಂದಲೂ ಇತ್ತೆಂದು ಉತ್ಖನನದಿಂದ ತಿಳಿಯುತ್ತದೆ.) ಪಾಂತಲೂನ್ ಎಂದು ಕರೆಯುವ ಪಾಯಿಜಾಮದ ಮೇಲೆ ಅಗಲ ತೋಳಿನ ಬ್ಲಾವುಸ್ ಧರಿಸುತ್ತಾರೆ. ಮೇಲೆ ಜಾಕೆಟ್ ಹಾಕಿಕೊಳ್ಳುತ್ತಾರೆ. ಸ್ಥಿತಿವಂತರು ಬೆಲೂರ್ ಎಂದು ಕರೆಯುವ ಜರಿ ಎಳೆಗಳ ಜಾಕೆಟ್ ಧರಿಸುತ್ತಾರೆ.

ಬೇರೆ ಯುರೋಪಿನ ದೇಶಗಳಿಗಿಂತ ಇಲ್ಲಿ ಹೆಂಗಸರಿಗೆ ಹೆಚ್ಚು ಗೌರವ. ಮನೆಯ ಶೇಕಡಾ ತೊಂಬತ್ತರಷ್ಟು ಕೆಲಸಗಳನ್ನು ಆಕೆಯೇ ನಿಭಾಯಿಸುತ್ತಾಳೆ. ವ್ಯಾಪಾರ ಮಾಡುವ ಹೆಂಗಸರಂತೂ ಸಾಮಾನ್ಯವಾಗಿ ಕಂಡರೆ, ಹೊಲ ತೋಟಗಳಲ್ಲಿ ಕೆಲಸ ಮಾಡುವುದರಿಂದ ಮೊದಲ್ಗೊಂಡು ಕೃಷಿ ಉತ್ಪನ್ನಗಳನ್ನು ಮಾರುಕಟ್ಟೆಗೆ ಸಾಗಿಸುವ ತನಕವೂ ಇವರದೇ ಹೆಚ್ಚಿನ ಜವಾಬ್ದಾರಿ. ಅವರು ಜಾಣರು, ಸುಂದರಿಯರು.

ಹೆಂಗಸೊಬ್ಬಳ ಅವಮಾನವನ್ನು ಯಾವ ಅಲ್ಬಾನಿಯೂ ಸಹಿಸುವುದಿಲ್ಲ. ಎಂಥ ಭಯಂಕರ ಸ್ಥಳದಲ್ಲಿಯೂ ಓರ್ವ ಹೆಣ್ಣಿನೊಂದಿಗೆ ಇದ್ದರೆ ಆಕೆ ಬಂದೂಕಿಗಿಂತಲೂ ಮುಖ್ಯವಾದ ರಕ್ಷಣೆಯ ವಸ್ತುವಾಗುತ್ತಾಳೆ.

ರಮಣೀಯ ಪ್ರದೇಶಗಳಿಂದೊಡಗೂಡಿದ ಈ ಅಪೂರ್ವನಾಡು ಅಲ್ಬಾನಿಯ, ತನ್ನ ಸೃಷ್ಟಿ ಸೌಂದರ್ಯದಿಂದ ಸ್ವಿಜರ್‌ಲ್ಯಾಂಡನ್ನು ಒಮ್ಮೊಮ್ಮೆ ಮೀರಿಸಬಹುದು. ಯುರೋಪಿನ ಆಟದ ಮೈದಾನವೂ ಆಗಬಹುದು.

ಕೃಷಿಯನ್ನು ಅವಲಂಬಿಸಿದವರೇ ಬಹಳ. ಆಹಾರ ಧಾನ್ಯಗಳು, ತಂಬಾಕು, ಆಲಿವ್ ಇಲ್ಲಿಯ ಮುಖ್ಯ ಬೆಳೆಗಳು. ಕಲ್ಲಂಗಡಿ ಹಣ್ಣನ್ನೂ ಬೆಳೆಯುತ್ತಾರೆ. ಗೋವಿನ ಜೋಳದ ರೊಟ್ಟಿ ಮುಖ್ಯ ಆಹಾರ.



ಜತೆಗೆ ಗಿಣ್ಣು, ಹಣ್ಣುಹಂಪಲು. ಪ್ರತಿ ಕುಟುಂಬವೂ ತನ್ನ ಮನೆಗೆ ಬೇಕಾಗುವ ಆಹಾರ ಧಾನ್ಯ ಅಲ್ಲದೇ ಉಣ್ಣೆ, ಚರ್ಮ ಮುಂತಾದವುಗಳನ್ನು ತಾನೇ ಉತ್ಪಾದಿಸಿಕೊಳ್ಳುತ್ತದೆ.

ಈ ಅದ್ಭುತ ದೇಶದ ವರ್ಣಮಯ ರಾಜಧಾನಿ ಟಿರಾನಾ ನಗರ. ದೇಶದ ನಟ್ಟನಡುವೆ, ಫಲವತ್ತಾದ ಪ್ರದೇಶದಲ್ಲಿ, ಪರ್ವತಾವಳಿಯ ಸೆರಗಿನಲ್ಲಿದೆ. ಟಿರಾನಾ ಹಳತು ಹೊಸತುಗಳ ಸಂಗಮ. ಹಳೆಯ ಕಾಲದ ಭವ್ಯ ಇಮಾರತುಗಳೂ, ಈಗಿನ ಆಧುನಿಕ ಕಟ್ಟಡಗಳೂ ಇವೆ. ಇಲ್ಲಿಯ ಜನಸಂಖ್ಯೆ ೨ ಲಕ್ಷ. ಅತ್ಯಾಧುನಿಕ ನಗರವಾಗಿ ಭರದಿಂದ ಬೆಳೆಯುತ್ತಿರುವ ಟಿರಾನಾದಿಂದ ದೇಶದ ಎಲ್ಲ ಪ್ರಮುಖ ನಗರ ಬಂದರುಗಳಿಗೂ ರಸ್ತೆ, ರೈಲು ಸಂಪರ್ಕವಿದೆ.

ಸ್ಕುಟಾರಿ ಅಥವಾ ಶ್ಕೋಡಾರ್ ದ್ವಿತೀಯ ಮಹಾನಗರ, ಅದೇ ಹೆಸರಿನ ಕೊಳ್ಳದ ದಂಡೆಯಲ್ಲಿವೆ. ಅಲ್ಬಾನಿಯ ಮತ್ತು ಯುಗೋಸ್ಲಾವಿಯದ ಗಡಿ ಪ್ರದೇಶದಲ್ಲಿರುವ ನಗರ ಸ್ಕುಟಾರಿ. ಸ್ಕುಟಾರ್ ಕೊಳ ಯುರೋಪಿನ ಅತಿ ಸುಂದರ ಪ್ರದೇಶ. ಅದರ ನೀಲಿ ನೀರಿನಲ್ಲಿ ರಜಾದಿನ ಕಳೆದರೆ ಎಷ್ಟೋ ನೆಮ್ಮದಿ. 'ಕಡ್ಡಿ ಹೋಳಿಗೆ' ಇಲ್ಲಿಯ ಸಿಹಿ ಆಹಾರ ಪದಾರ್ಥ.

ರಾಜಧಾನಿಯ ನೈಋತ್ಯಕ್ಕೆ ೨೫ ಮೈಲು ಅಂತರದಲ್ಲಿರುವ ಎಲ್ಬಾಸಾನ್, ಅಲ್ಬಾನಿಯದ ಬೇಸಿಗೆ ಧಾಮ. ಸುಂದರವಾದ ಹಣ್ಣಿನ ತೋಟಗಳಿವೆ.

ಪಶ್ಚಿಮಕ್ಕಿರುವ ಕೋರಿಟಿಜಾ, ಅಲ್ಬಾನಿಯದ ಮ್ಯಾಂಚೆಸ್ಟರ್ ಎಂದು ಕರೆಯಲ್ಪಡುತ್ತದೆ. ಅಲ್ಬಾನಿಯದ ಬಹುತೇಕ ಕೈಗಾರಿಕೆಗಳು ಇಲ್ಲಿವೆ.

ಡ್ಯೂರೇಸ್ ಮತ್ತು ಲಿನ್ ಈ ರಾಷ್ಟ್ರದ ಮುಖ್ಯ ಬಂದರುಗಳು. ಲಿನ್ ಮೂಲಕವೇ 'ಗ್ರೇಟ್ ರೋಮನ್ ಹೈವೆ' ಪೂರ್ವಕ್ಕೆ ಸಾಗುತ್ತದೆ.

ಕಳೆದ ಕೆಲ ವರ್ಷಗಳಿಂದ ಅಲ್ಬಾನಿಯನ್ನರು ತಮ್ಮ ಬಡತನ, ಅನಕ್ಷರತೆ ಮತ್ತು ಸಾಮಾಜಿಕ ಅನಿಷ್ಟಗಳನ್ನು ನಿರ್ಮೂಲ ಮಾಡಲು ಅಹರ್ನಿಶಿ ಪ್ರಯತ್ನಿಸುತ್ತಿದ್ದಾರೆ. ಕೃಷಿ ಮತ್ತು ಕೈಗಾರಿಕೆಗಳಿಗೆ ಹೆಚ್ಚು ಪ್ರಾಧಾನ್ಯ ನೀಡಲಾಗಿದೆಯಲ್ಲದೇ ಅವು ಅಭಿವೃದ್ಧಿ ಹೊಂದುತ್ತಲಿವೆ. ನೂರಾರು ಶಾಲೆ ಕಾಲೇಜುಗಳನ್ನು ತೆರೆಯಲಾಗಿದ್ದು ಅಲ್ಲಿ ಉಚಿತ ಮತ್ತು ಕಡ್ಡಾಯ ಶಿಕ್ಷಣದ ವ್ಯವಸ್ಥೆ ಇದೆ. ಪೆಟ್ರೋಲಿಯಂ ಮೊದಲ್ಗೊಂಡು ಇತರ ಖನಿಜ ಮತ್ತು ಅರಣ್ಯ ಸಂಪತ್ತುಗಳ ಶೋಧನೆ–ಸಂಸ್ಕರಣೆಗೆ ಯತ್ನವೂ ನಡೆದಿದೆ. ತಮ್ಮ ಪುಟ್ಟ ನಾಡನ್ನು ಆಧುನೀಕರಿಸಲು ಅಲ್ಬಾನಿಯನ್ನರು ಅವಿರತ ಯತ್ನ ನಡೆಸಿದ್ದಾರೆ.

ಸ್ವಾತಂತ್ರ್ಯಪ್ರಿಯ ಅಲ್ಬಾನಿಯನ್ನರು 'ಅಭಿವ್ಯಕ್ತಿ ಮತ್ತು ಧಾರ್ಮಿಕ ಸ್ವಾತಂತ್ರ್ಯ'ದಿಂದ ವಂಚಿತರಾಗಿರುವುದೊಂದು ಚೋದ್ಯ. ಬಿಗಿದ ತುಟಿಗಳಿಂದ, ಯಂತ್ರದ ಹಾಗೆ ದುಡಿಯಬೇಕು ಅವರು. ಪ್ರಪಂಚದಲ್ಲಿ ಅತಿ ಪ್ರತ್ಯೇಕವಾಗುಳಿದು, ಸ್ನೇಹಿತರರಹಿತ ರಾಷ್ಟ್ರ ಎಂದು ಹೆಸರಾಗಿಬಿಟ್ಟಿದೆ ಅಲ್ಬಾನಿಯ.

ಆದರೆ, ತಮ್ಮಲ್ಲಿನ ಈಗಿನ 'ವ್ಯವಸ್ಥೆ' ಯಾವಾಗ ಬದಲಾದೀತೋ, ತಾವು ಯಾವಾಗ ಸ್ವತಂತ್ರರಾದೇವೋ ಎಂದು ಅವರು ಕುತೂಹಲಿಗಳಾಗಿರುವುದಂತೂ ನಿಸ್ಸಂಶಯದ ಮಾತು. ಅರವತ್ತೆಂಟರ ಆದರ ಧುರೀಣ ಎನ್ವರ್ ಹೋಕ್ಸ್‌ಹಾ ತನ್ನ ಕನಸಿನ 'ಶುದ್ಧ ಮಾರ್ಕ್ಸ್‌ವಾದಿ ರಾಷ್ಟ್ರ'ವನ್ನು ಕಾಣುವುದೂ ಸಂಶಯದ ಮಾತು. ಅಲ್ಬಾನಿಯನ್ನರಿಗೆ ನಿಜವಾದ ಸ್ವಾತಂತ್ರ್ಯ ಬರುವ ಕಾಲ ಬಹಳ ದೂರವಿಲ್ಲ ಎನಿಸುತ್ತದೆ. ✡



## ಅಧ್ಯಯನ

"ಮೃತ್ಯು ನಿಶ್ಚಿತ. ತಾವು ಹಗಲುರಾತ್ರಿ ಅಧ್ಯಯನ ಮಾಡಿ ತಲೆ ಏಕೆ ಕೆಡಿಸಿಕೊಳ್ಳುವಿರಿ?" ಒಬ್ಬ ವ್ಯಕ್ತಿ ಸಂತ ಇಮರ್ಸನ್‌ನನ್ನು ಪ್ರಶ್ನಿಸಿದ.

"ಜ್ಞಾನದಲ್ಲಿ ಮುಳುಗುವುದು ಅಮರತ್ವವಾಗಿದೆ." ಇಮರ್ಸನ್ ಸಂಕ್ಷಿಪ್ತವಾಗಿ ಉತ್ತರಿಸುತ್ತಾ ವಿಚಾರಗಳ ಸಾಗರದಲ್ಲಿ ಲೀನನಾದ. —ಎನ್. ಕೆ. ನರಸಿಂಹಮೂರ್ತಿ




# ಇವರು ಸಾಲಿಯವರು

ಮುರಲೀಧರ ಮುಧೋಳ

ಧಾರವಾಡದ ಕರ್ನಾಟಕ ಕಾಲೇಜಿನಲ್ಲಿ ಎಂ. ಎ.ಗೆ ಹೆಸರು ಹಚ್ಚುವ ಸಂದರ್ಭ. (ಆಗಿನ್ನೂ ಅಲ್ಲಿ ಸ್ನಾತಕೋತ್ತರ ವರ್ಗಗಳೂ ವಿಶ್ವವಿದ್ಯಾಲಯದಲ್ಲಿ ಕೇಂದ್ರೀಕೃತವಾಗಿರಲಿಲ್ಲ.) ಕೊಪ್ಪಳದಿಂದ ಬಂದಿದ್ದ ಬ್ಯಾಂಕ್ ಡ್ರಾಫ್ಟನ್ನು ಕೈಯಲ್ಲಿ ಹಿಡಿದುಕೊಂಡು ಕಾಲೇಜಿನ ಆವಾರದಲ್ಲಿದ್ದ ಸಿಂಡಿಕೇಟ್ ಬ್ಯಾಂಕಿಗೆ ಹಣ ಬಿಡಿಸಿಕೊಳ್ಳಲು ಹೋಗಿದ್ದೆ. ಅಂದು ಕಾಲೇಜಿನಲ್ಲಿ ಹೆಸರು ಹಚ್ಚಿಕೊಳ್ಳಲು ಕೊನೆಯ ದಿನವಾದ್ದರಿಂದ ಬ್ಯಾಂಕಿನ ಅಧಿಕಾರಿಗಳನ್ನು ವಿನಂತಿಸಿಕೊಂಡು ಬೇಗನೇ ಹಣ ಪಡೆಯಲು ಪ್ರಯತ್ನಿಸಿದೆ. ಡ್ರಾಫ್ಟನ್ನು ಅವಲೋಕಿಸಿದ ವ್ಯಕ್ತಿ, "ಇದರ ಹಿಂದೆ ಬ್ಯಾಂಕಿಗೆ ಪರಿಚಯವಿದ್ದವರಿಂದ ಪರಿಚಯದ ಸಹಿ ಹಾಕಿಸಬೇಕು. ನಂತರ ಹಣ ಕೊಡಲಾಗುವದು," ಎಂದು ಹೇಳಿ ಪುನಃ ತನ್ನ ಕೆಲಸದಲ್ಲಿ ತೊಡಗಿದ. ಬ್ಯಾಂಕಿನ ಆವರಣದಲ್ಲಿ ಯಾರಾದರೂ ಗುರುತಿನವರು ಇದ್ದಾರೆಯೇ ಎಂದು ಅತ್ತಿತ್ತ ಕಣ್ಣು ಹಾಯಿಸಿದೆ. ಅಲ್ಲಿ ಯಾರೂ ನನಗೆ ಪರಿಚಯದವರು ಕಂಡು ಬರಲಿಲ್ಲ. ಸ್ವಲ್ಪ ಹೊತ್ತು ಏನೂ ತಿಳಿಯದಂತಾಗಲು ಅವನೇ ಪುನಃ ನನ್ನನ್ನು ಕರೆದು, "ಹಿಂದೆ ಸಾಲಿ ರಾಮಚಂದ್ರರಾಯರ ಮನೆ ಇದೆ, ಅವರಿಂದ ನಿಮ್ಮ ಪರಿಚಯದ ಸಹಿ ಹಾಕಿಸಿದರೆ ಉತ್ತಮ," ಎಂದು ಹೇಳಿದ.

ಸಾಲಿ ರಾಮಚಂದ್ರರಾಯರು ನನಗೂ ಸ್ವಲ್ಪ ಪರಿಚಯದವರಿದ್ದರು. ಕೂಡಲೇ ಅವರ ಮನೆಗೆ ಹೋಗಿ, ನಮಸ್ಕರಿಸಿ, ನಾನು ತಂದಿದ್ದ ಬ್ಯಾಂಕ್ ಡ್ರಾಫ್ಟನ್ನು ಅವರ ಮುಂದಿಟ್ಟು, ಇದಕ್ಕೆ ತಮ್ಮ ಎಂಡೋರ್ಸ್‌ಮೆಂಟ್ ಬೇಕಾಗಿದೆ ಎಂದು ಹೇಳಿದೆ. ಅವರು ಯಾಕೆ ಎಂದೇನೂ ಕೇಳಲಿಲ್ಲ. ನಾನೇ ನನ್ನ ಮಾತನ್ನು ಮುಂದುವರಿಸಿ ಎಂ.ಎ.ಗೆ ಹೆಸರು ಹಚ್ಚಲು ಇಂದು ಕೊನೆಯ ದಿನ ಎಂದೂ ಅದಕ್ಕಾಗಿ ಹಣ ಅವಶ್ಯವಾಗಿ ಬೇಕಾಗಿದೆಯೆಂದೂ ವಿನಂತಿಸಿಕೊಂಡೆ. "ತಾ ಇಲ್ಲಿ," ಎಂದು ಡ್ರಾಫ್ಟಿನ ಹಿಂದುಗಡೆ ಎಂಡೋರ್ಸ್‌ಮೆಂಟ್ ಮಾಡಿ, ತಮ್ಮ ಸಹಿ ಹಾಕಿದರು. "ನಿಮ್ಮಿಂದ ಬಹಳ ಉಪಕಾರವಾಯಿತು," ಎಂದು ಹೇಳಿ ಪುನಃ ನಮಸ್ಕರಿಸಿ ಬ್ಯಾಂಕಿಗೆ ಓಡಿದೆ. ಡ್ರಾಫ್ಟನ್ನು ಬ್ಯಾಂಕಿನವರ ಕೈಗೆ ಕೊಟ್ಟು ಹಣ ಪಡೆಯುತ್ತಿದ್ದಾಗ

ರಾಮಚಂದ್ರರಾಯರು ಬ್ಯಾಂಕಿನಲ್ಲಿ ಬರುತ್ತಿರುವುದು ಕಾಣಿಸಿತು. ಆಶ್ಚರ್ಯದಿಂದ ಅವರನ್ನು ಎದುರುಗೊಂಡು ಬ್ಯಾಂಕಿಗೆ ಬಂದ ಕಾರಣವನ್ನು ಕೇಳಿದೆ. ತಮ್ಮ ಖಾತೆಯಿಂದ ಎಂಟು ರೂಪಾಯಿ ಹಣ ತೆಗೆಯಲು ಚೆಕ್ಕೊಂದನ್ನು ಹಿಡಿದುಕೊಂಡು ಬಂದುದಾಗಿ ಹೇಳಿದರು. ಆದರೆ ನಿಜವಾದ ಕಾರಣ ನಂತರ ನನ್ನ ಗೆಳೆಯನೊಬ್ಬನಿಂದ ತಿಳಿದು ಬಂದಾಗ ರಾಮಚಂದ್ರರಾಯರ ವ್ಯಕ್ತಿತ್ವದ ಅರಿವಾಗಿ ಅವರ ಬಗ್ಗೆ ಹೃದಯ ತುಂಬಿ ಬಂತು. ಅವರು ಬ್ಯಾಂಕಿಗೆ ಕೇವಲ ಎಂಟು ರೂಪಾಯಿ ತೆಗೆಯಲು ಬಂದಿರಲಿಲ್ಲವಂತೆ. ಬ್ಯಾಂಕಿನವರು ನನಗೆ ಹಣ ಕೊಟ್ಟರೋ ಇಲ್ಲವೋ ಎಂಬುದನ್ನು ನೋಡಲು ಬಂದಿದ್ದರಂತೆ.

ಇದಾದ ಕೆಲವು ದಿನಗಳ ನಂತರ ಯಾವುದೋ ಕೆಲಸದ ನಿಮಿತ್ತ ಮತ್ತೊಮ್ಮೆ ರಾಮಚಂದ್ರರಾಯರ ಮನೆಗೆ ಹೋಗಿದ್ದಾಗ, "ಮುರಲೀ, ನನಗೊಂದು ಸಹಾಯ ಮಾಡುವೆಯಾ?" ಎಂದು ಕೇಳಿದರು. ಅವರ ಮಾತನ್ನು ಕೇಳಿ ನನಗಂತೂ ಏನು ಹೇಳಬೇಕೋ ತಿಳಿಯದಾಯಿತು. ಸಾವಿ ರಾಮಚಂದ್ರರಾಯರಿಗೆ ನನ್ನಂತಹ ವಿದ್ಯಾರ್ಥಿ ಸಹಾಯ ಮಾಡುವಂತಹುದು ಏನಿದೆಯೋ ಎಂದು, "ಕೆಲಸವೇನು ಹೇಳಿರಿ. ಅವಶ್ಯವಾಗಿ ಮಾಡುವೆ," ಎಂದೆ.

"ಏನಿಲ್ಲ. ಈ ರೇಶನ್ ಕಾರ್ಡಿನಲ್ಲಿ ಆರು ಜನರ ಹೆಸರಿದೆ. ಈಗ ನಮ್ಮ ಮನೆಯಲ್ಲಿ ಕೇವಲ ನಾಲ್ಕೇ ಜನರಿದ್ದೇವೆ. ಇದನ್ನು ಒಯ್ದು ಇಬ್ಬರ ಹೆಸರನ್ನು ತೆಗೆಸಿ, ನಾಲ್ಕು ಜನರದು ಮಾತ್ರ ಮಾಡಿಸಿಕೊಂಡು ಬಾ," ಎಂದರು.



ಹಲವಾರು ದಶಮಾನಗಳ ಹಿಂದಿನ ಮಾತು. ಜಪಾನದ ಕಿಯೋಟೋ ನಗರದಲ್ಲಿ ಹಾಯಾತೋ ಎಂಬ ಸಣ್ಣ ಬಡ ಹುಡುಗನಿದ್ದ. ಹಗಲಿಡೀ ಕಠಿಣ ಪರಿಶ್ರಮ ನಡೆಸಿದ ಬಳಿಕ ಸಂಜೆ ಮಾತ್ರ ಒಂದಿಷ್ಟು ಆಹಾರ ದೊರೆಯುತ್ತಿತ್ತು. ಅವನ ಕಿರುಗುಡಿಸಲು ಒಬ್ಬ ಶ್ರೀಮಂತನ ಬಂಗಲೆಗೆ ತಗಲಿಕೊಂಡಿತ್ತು. ರಾತ್ರಿ ವೇಳೆ ಆ ಶ್ರೀಮಂತನ ಕೋಣೆಯ ಬೆಳಕಿಂಡಿಯಿಂದ ಬೆಳಕಿನ ಕೆಲ ಕಿರಣಗಳು ಬಂದು ಹಾಯಾತೋನ ಗುಡಿಸಲ ನೆಲದ ಮೇಲೆ ಬೀಳುತ್ತಿದ್ದವು. ಆ ಬಡ ಹುಡುಗನಿಗೊಂದು ಉಪಾಯ ಹೊಳೆಯಿತು. ಆ ಮಸುಕು ಬೆಳಕಿನೆದುರು ತನ್ನ ಪುಸ್ತಕವನ್ನು ಹಿಡಿದು ಓದಲಾರಂಭಿಸಿದ. ಕ್ರಮೇಣ ಉನ್ನತಿ ಪಡೆಯುತ್ತ ಹಾಯಾತೋ ಈ ಕಾಲದಲ್ಲಿ ಜಪಾನಿನ ಪ್ರಧಾನಮಂತ್ರಿಯಾಗಿಬಿಟ್ಟ.

—ಸಿ. ಜಿ. ಪ್ರಾಣಿಕಾಲ

*

* *

"ಬುದ್ಧಿಮತ್ತೆ ಹೆಚ್ಚಿಸಿಕೊಳ್ಳಲು ಮತ್ತು ಚೇತನವನ್ನು ಉಚ್ಚಸ್ತರಕ್ಕೇರಿಸಲು ವೇದನೆ ಮತ್ತು ಅಸಫಲತೆಗಳ ನಿರಂತರ ಪ್ರವಾಹದಲ್ಲಿ ಮನುಷ್ಯ ಈಜಬೇಕಾಗುತ್ತದೆ. ಬಡಿದಷ್ಟೂ ಅಪ್ಪಟಗೊಳ್ಳುವ ಚಿನ್ನದಂತೆ ಮನುಷ್ಯ ಕಷ್ಟಗಳ ಹೊಡೆತದಿಂದ 'ಅನುಭವ' ಗಳಿಸಿಕೊಳ್ಳುತ್ತಾನೆ. ಅವುಗಳ ಅಭಾವವೇ ಮನುಷ್ಯನನ್ನು ಡೋಲಾಯಮಾನ ಪರಿಸ್ಥಿತಿಗೊಳಗುಮಾಡುತ್ತದೆ. ಮಹತ್ತನ್ನು ಸಾಧಿಸಬೇಕಾದರೆ ಮನುಷ್ಯ ಕಷ್ಟಪಡಬೇಕು ಮತ್ತು ಪೀಡೆಗೊಳಗಾಗಬೇಕು. ಒಂದು ವೇಳೆ ಶೇಕ್ಸ್‌ಪಿಯರ್ ಜೀವನದಲ್ಲಿ ಸಂತೃಪ್ತನಾಗಿದ್ದರೆ ಅಂಥ ಉತ್ಕೃಷ್ಟ ಕೃತಿಗಳನ್ನು ನಮಗಿತ್ತು ಜಗತ್ಪ್ರಸಿದ್ಧಿ ಪಡೆಯುವುದು ಸಾಧ್ಯವಿತ್ತೆ ? ಪ್ಲೇಟೊ ಮತ್ತು ಕಾಂಟರು ತತ್ವಜ್ಞಾನಿಗಳಾಗಲು ಸಾಧ್ಯವಿತ್ತೆ ?" ಎನ್ನುತ್ತಾನೆ ಫ್ರೆಂಚ್ ದಾರ್ಶನಿಕ ಶಾಪೆನ್‌ಹಾವರ್.

ಕಲೆಡಾ್ರದಿಂದ ರಾಮು ಬರಲಿದ್ದಾನೆ. ಗುಂಟೂರಿಗೆ ಹೋಗುತ್ತಾ, ದಾರಿಯಲ್ಲಿ, ಹೈದ್ರಾಬಾದಿನಲ್ಲಿನ ತನ್ನ ಹಳೆಯ ಮಿತ್ರರು ಆತ್ಮೀಯರೊಂದಿಗೆ, ಮುಖ್ಯವಾಗಿ ನಮ್ಮಿಬ್ಬರೊಂದಿಗೆ ಒಂದೆರಡು ದಿನ ಸಂತೋಷದಿಂದ ಕಾಲ ಕಳೆಯುತ್ತಾನೆ ಅಂತ ಚಲಪತಿ ಫೋನ್ ಮಾಡಿದ್ದ.

ಹತ್ತು ವರ್ಷಗಳಾಗಿತ್ತು ಅವನನ್ನು ನೋಡಿ. ನಾನು ಗುಂಟೂರಿನಲ್ಲಿದ್ದಾಗಲೇ ಅವನು ಫಾರಿನ್‌ಗೆ ಹೊರಟು ಹೋಗಿದ್ದ. ಸೆಂಡ್‌ಆಫ್ ಕೊಡಲೆಂದು ಬೊಂಬಾಯಿವರೆಗೂ ಹೋಗಿದ್ದ ನಾನೂ ಚಲಪತಿಯೂ ಅತ್ತುಬಿಟ್ಟಿದ್ದೆವು ಕೂಡಾ.

ಅವನಿಂದ ತಿಂಗಳ ಹಿಂದೆ ನನಗೆ ಬಂದಿದ್ದ ಕಾಗದದಲ್ಲಿ ತಾನು ಬರಬೇಕೆಂದಿರುವ ವಿಷಯ ಬರೆದಿದ್ದ.

ನಮ್ಮ ಮೂವರಲ್ಲಿ ಕಿರಿಯ ನಾನೇ..."

*

ಬೆಳಿಗ್ಗೆ ಎಂಟು ಗಂಟೆಯ ಸಮಯದಲ್ಲಿ, ಹೈದ್ರಾಬಾದ್ ಏರ್‌ಪೋರ್ಟಿನಲ್ಲಿ. [illegible] ಎದುರು ನೋಡುತ್ತಾ, ಆಕಾಶದ ಕಡೆ [illegible] ಬೀರುತ್ತಾ ನಿಂತಿದ್ದೆವು ನಾವು.

ನಿನ್ನೆಯೇ ಬೊಂಬಾಯಿಗೆ ಬಂದಿದ್ದ ಅವನು.

ದೂರದಲ್ಲಿ...ಆಕಾಶದಲ್ಲಿ...ಎಲ್ಲೋ ಶಬ್ದವಾದಂತೆ ಅನಿಸಿಕೆ. ಮೇಲೆ [illegible] ಪುಟ್ಟಪಕ್ಷಿಯಂತೆ ಕಾಣುತ್ತಿದ್ದ ನಮ್ಮ ರಾಮೂನನ್ನು ಒಳಗೆ ಅವಿತಿಟ್ಟುಕೊಂಡಿದ್ದ ವಿಮಾನ. ಆ ವಿಮಾನವೆಂದರೇನೇ ನಮ್ಮಲ್ಲಿನ ಆತ್ಮೀಯತೆ ಉಕ್ಕಿ ಹರಿದಿತ್ತು.

ರಾಮು ಇನ್ನೇನು ಬಂದೇಬಿಡುತ್ತಾನೆ!

---

| ಮೂಲ : ಪಿ. ಎಸ್. ನಾರಾಯಣ | ಕನ್ನಡಕ್ಕೆ : ಶ್ರೀಮತಿ 'ಶರ್ವಾಣಿ' |
|---|---|

ಚಲಪತಿಗೆ ಈಗ ಬಂದ ಕಾಗದದಲ್ಲಿ ಬರುತ್ತಿರುವ ವಿಷಯವನ್ನೇ ಬರೆದು ತಿಳಿಸಿದ್ದ.

ನನಗೆ ಬರೆದ ಕಾಗದದಲ್ಲಿ ಮತ್ತೆ ನಮ್ಮ ಜನಗಳನ್ನು. ನಮ್ಮವರನ್ನು, ನಮ್ಮ ಊರುಗಳನ್ನು ನೋಡಬೇಕೆಂಬ ತನ್ನ ಆತುರ, ಕಾತುರಗಳನ್ನು ತೋಡಿಕೊಳ್ಳುತ್ತಾ ಬರೆದಿದ್ದ: "ನಮ್ಮದು ಅಂದುಕೊಂಡ ಪ್ರತಿವಸ್ತುವನ್ನೂ ಆಲಂಗಿಸಿಕೊಂಡು ಕಣ್ಣೀರು ಹರಿಸಿದರೆ ಸಾಕು, ಈ ಜನ್ಮಕ್ಕಿನ್ನೇನೂ ಬೇಡ. ನನ್ನ ರಕ್ತವೆಂದರೆ ನನಗೆಷ್ಟು ಆತ್ಮೀಯತೆ ಯಿದೆಯೋ, ನನ್ನ ದೇಶ, ನನ್ನ ಊರು, ನನ್ನವರು, ನನ್ನವರೆಂದುಕೊಳ್ಳುತ್ತಿರುವ ನಿಮ್ಮೆಲ್ಲರ ಮೇಲೂ ಇದೆ ಕಣೋ, ಸತ್ಯ...ಈ ಕಾಗದ ಬರೆಯುತ್ತಿದ್ದರೆ ನಿಮ್ಮನ್ನೆಲ್ಲಾ ನೋಡುತ್ತಿದ್ದಂತೆ, ನಿಮ್ಮ ಜತೆ ಮಾತನಾಡುತ್ತಿದ್ದಂತೆಯೇ ಇದೆ. ಕಣ್ಣು ತೇವವಾಗುತ್ತಿದೆ ಕಣೋ ಪುಟ್ಟಾ..."

ಚಲಪತಿ, ನಾನು ಆ ಕ್ಷಣದಲ್ಲಿ ಹತ್ತು [illegible] ಹಿಂದಕ್ಕೆ ಹೋಗಿ ಅಂದಿನ ರಾಮೂನನ್ನು [illegible] ಮುಂದೆ ನಿಲ್ಲಿಸಿಕೊಂಡಿದ್ದೆವು.

ಈ ಹತ್ತು ವರ್ಷದಲ್ಲಿ ಅವನಲ್ಲಿ ಎಷ್ಟು ಬದಲಾವಣೆ ಬಂದಿದೆಯೋ!

ಕನ್ನಡಕ ಹಾಕುತ್ತಾನೇನೋ! ಸ್ವಲ್ಪ ದಪ್ಪವಾಗಿರೋದಂತೂ ಖಂಡಿತ. [illegible] ಅಂತೂ ಬಂದೇ ಇರುತ್ತೆ. ಸೂಟು, [illegible], ಟೈ ಅಂತೂ ತಪ್ಪಿದ್ದೇ ಅಲ್ಲ...

ಇಲ್ಲಿದ್ದಾಗ ಸದಾ ಪೈಜಾಮಾ, ಜುಬ್ಬಾ ಅಂದರೇ ಇಷ್ಟಪಡೋನು...ಈಗ ಅದೆಲ್ಲಾ [illegible] ಬಹುದು.

ವಿಮಾನ ನಮ್ಮ ಕಣ್ಣು ಮುಂದೆ, ನಮ್ಮ ಹತ್ತಿರಕ್ಕೆ ಬಂದು ನಿಂತಿತ್ತು. ಆತ್ಮೀಯವಾಗಿ ಹೃದಯದ ಕವಾಟ ತೆರೆದುಕೊಂಡಂತೆ ತೆರೆದ ಬಾಗಿಲಿನಿಂದ

ರಾಮೂ ಕೈ ಬೀಸುತ್ತಾ, ಹಸಿರು ಪೈರಿನ ಮೇಲೆ ಹಾರುವ ಹಕ್ಕಿಯಂತೆ ನಗುನಗುತ್ತಾ, ಸರಸರನೆ ಇಳಿದುಬಂದ.

ರಾಮು!

ಮೈಗಾಡ್! ಅದೇ ರಾಮು!!

ಹತ್ತು ವರ್ಷದ ಹಿಂದಿನ ಅದೇ ರಾಮು. ಎರಡು ವರ್ಷದ ಹಿಂದೆ ಪಕ್ಕದ ರೂಮಿನೊಳಕ್ಕೆ ಹೋಗಿ ಹಿಂದಿರುಗಿ ಬಂದವನಂತಿದ್ದಾನೆ.

ಶುಭ್ರವಾದ ಬಿಳಿಯ ಪೈಜಾಮಾ, ಜುಬ್ಬಾ ಧರಿಸಿದ್ದಾನೆ.

ನೋ ಗ್ಲಾಸಿಸ್...ನಥಿಂಗ್...ನೋ ಚೇಂಜ್.

"ಓ ರಾಮೂ, ರಾಮೂ..."

ಮೂವರೂ ಒಬ್ಬರನ್ನೊಬ್ಬರು ಆಲಂಗಿಸಿಕೊಂಡೆವು. ಸಂತೋಷದ ಅತಿರೇಕದಲ್ಲಿ ತೇವಗೊಂಡ ಕಣ್ಣುಗಳನ್ನು ಒರೆಸಿಕೊಳ್ಳದೆಯೇ ನಗುವಿನ ಹೊಳೆ ಹರಿಸಿದೆವು.

■

"ನೋ ಚೇಂಜ್ ಎಟಾಲ್," ಚಲಪತಿ ರಾಮೂನ ಕೈ ಹಿಡಿದು ಒತ್ತುತ್ತಾ ಆಪ್ಯಾಯವಾಗಿ ಹೇಳಿದ.

ಕಾರು ಹೈವೇನಲ್ಲಿ ಹಾಯ್ದು ಹೋಗುತ್ತಿತ್ತು. ರಾಮೂನ ಪಕ್ಕದಲ್ಲಿ, ಅವನ ಒತ್ತಿಗೆ ಕುಳಿತರೇ ಮನಸ್ಸಿಗೆ ನೆಮ್ಮದಿ ಕೊಡುವಂತಿತ್ತು.

"ಶಾಂತ ಗುಂಟೂರಿನಲ್ಲಿದ್ದಾಳೆ, ತಿಂಗಳಾಯಿತು ಬಂದು."

"ನಮಗೆ ಬರೆಯಲೇ ಇಲ್ಲವಲ್ಲೋ..."

"ಬಾಂಬೆನಲ್ಲಿ ಅವರ ಅಣ್ಣನ ಹತ್ತಿರ ಒಂದು ವಾರ ಇದ್ದು...ಮದ್ರಾಸ್ ಮಾರ್ಗವಾಗಿ ಗುಂಟೂರಿಗೆ ಹೋಗಿದ್ದಾಳೆ. ಹೈದ್ರಾಬಾದ್ ಕಡೆ ಬರಲಿಲ್ಲ."

"ನಮಗೆ ದೂರವಾಗುತ್ತಿದೀಯೇನೋ ಅನ್ನಿಸುತ್ತೆ ಕಣೋ," ಚಲಪತಿಯ ಕಂಠದಲ್ಲಿ ನಿಷ್ಠುರವಿತ್ತು.

"ನೋ...ಬಿಲೀವ್ ಮಿ...ನಾಟ್ಎಟಾಲ್...ಹಾಗಿದ್ದರೆ ಈಗ ಇಲ್ಲಿ ಇಳಿಯುತ್ತಲೇ ಇರಲಿಲ್ಲ."

ಚಲಪತಿಗೂ ನನಗೂ ಅವನನ್ನು ಎಷ್ಟು ನೋಡಿದರೂ ತೃಪ್ತಿಯೇ ಇರಲಿಲ್ಲ.

ಎಷ್ಟೋ ಯುಗಗಳ ನಂತರ ಎಂಬಂತೆ ಅವನನ್ನು ನೋಡುತ್ತಿದ್ದೆವು.

ಎಂತಹ ಸುದಿನ ಇದು!

"ಯಾವ ಹೋಟೆಲಿನಲ್ಲಿ ಇಳಿಯಲಿ ನಾನು?" ರಾಮು ಕೇಳಿದ. ಚಲಪತಿ ಆತುರಾತುರವಾಗಿ ತನ್ನ ಜೇಬುಗಳಲ್ಲಿ ತಡಕಾಡತೊಡಗಿದ.

"ಏನಾಯಿತೋ...?" ಆತುರದಿಂದ ಪ್ರಶ್ನಿಸಿದೆ ನಾನು.

"ಊಹುಂ... ಏನಿಲ್ಲ... ಕತ್ತಿ ಇರಬೇಕಲ್ಲಾ... ಏನಾಯಿತೂಂತ ನೋಡ್ತಿದೀನಿ. ಇರಿದು ಬಿಡ್ತೀನಿ ಇವನನ್ನ..."

ಮೂವರೂ ಹೊಟ್ಟೆ ಹುಣ್ಣಾಗುವಂತೆ. ಮನಸಾರೆ ನಕ್ಕೆವು. ಒಬ್ಬರ ಮೇಲೊಬ್ಬರು ಬಿದ್ದು ಮತ್ತೂ ಮತ್ತೂ ನಕ್ಕೆವು.

ಚಲಪತಿಯ ಮನೆಯ ಮುಂದೆ ಕಾರು ನಿಂತಾಗಲೇ ನಮಗೆ ತಿಳಿದದ್ದು, ಇಳಿಯಬೇಕಾದ ಸ್ಥಳ ಬಂತೆಂದು.

■

"ಸೋ...ಇದು ಹಳೆಯ ಮನೆಯಲ್ಲ," ಎಂದ ರಾಮೂ ಕಾರಿನಿಂದಿಳಿದು ಸುತ್ತಲೂ ನೋಡುತ್ತಾ.

"ಅದನ್ನು ಮಾರಿಯೇ ಇದನ್ನು ಕೊಂಡದ್ದು," ಚಲಪತಿ ಕಾರಿನಿಂದಿಳಿಯುತ್ತಾ ಉತ್ತರ ಕೊಟ್ಟ.

"ವೆಲ್...ಒಳ್ಳೇ ಕೆಲಸ ಮಾಡಿದೆ. ಏನೋ ಸತ್ಯಾ! ನೀನೂ..."

"ನನ್ನದು ಇಷ್ಟು ದೊಡ್ಡ ಮನೆಯಲ್ಲದಿದ್ದರೂ, ಪರವಾಗಿಲ್ಲ, ಒಂದು ಮನೆ ಅಂತ ಮಾಡಿಕೊಂಡಿದೀನಿ. ಸದ್ಯಕ್ಕೆ ನಿನ್ನ ಸೋದರೀಮಣಿ ನಮ್ಮ ಕುಟುಂಬವನ್ನು ವಿಸ್ತೃತಗೊಳಿಸುವ ಉದ್ದೇಶದಿಂದ ತವರುಮನೆಗೆ..."

"ಓ. ಕಾಂಗ್ರಾಟ್ಸ್...ಭಾರತ ದೇಶಾನ ಉದ್ಧರಿಸುತ್ತಿದ್ದೀ...ಸರಿ."

ಮೂವರೂ ಮೆಟ್ಟಿಲು ಹತ್ತಿ ಒಳಕ್ಕೆ ಹೋದೆವು.

"ಓ...ನೀಲೂ...ಅಂಕಲ್ ಆಗಯಾ..." ಚಲಪತಿ ಗಟ್ಟಿಯಾಗಿ ಕೂಗಿದ.

ನೀಲೂ ಚಲಪತಿಯ ಮಗಳು.

ನೀಲೂ ಒಂದೇ ಸಲಕ್ಕೆ ಎರಡೆರಡು ಮೆಟ್ಟಿಲನ್ನು ಹಾರುತ್ತಾ ಬಂದಳು....ಹದಿನೆಂಟು ವರ್ಷದ ಹುಡುಗಿ. ನಡೆಯಲು ಬಾರದೇನೋ ಎಂಬಂತೆ ಸದಾ ಓಟದ ನಡಿಗೆ ಅವಳದು. ಇನ್ನೂ ಫ್ರಾಕುಗಳನ್ನೆ ಹಾಕುತ್ತಿದ್ದಳು. ಬಾಬ್ಡ್ ಹೇರ್.

ಆದರೆ ಈ ದಿನ ಮಾತ್ರ ಸೀರೆ ಉಟ್ಟು

ಮುಂಜಾನ ಪುಷ್ಪ ಅರಳಿನಂತೆ ಕಾಣುತ್ತಿದ್ದಳು. ತಾಯಿಯ ಹೋಲಿಕೆ ಅವಳದು.

"ಹಾಯ್, ನೀಲವೇಣೀನೇ? ಬಹಳ ಬೆಳೆದು ಬಿಟ್ಟಿದ್ದಾಳಪ್ಪ!" ಎನ್ನುತ್ತಾ ಮುಂದಕ್ಕೆ ಹೆಜ್ಜೆ ಇಟ್ಟ ರಾಮು.

"ನಮಸ್ತೆ."

"ದಟ್ಸಾಲ್ ರೈಟ್...ನೀನು ನೀಲವೇಣೀನಾಂತ ಹೇಳು ಮುಂಚೆ..."

"ಹೌದೋ ಹುಡುಗಾ, ನೀಲವೇಣೀನೇ" ಚಲಪತಿಯ ಕಣ್ಣು ಹಿಗ್ಗಿನಿಂದ ಹೊಳೆಯುತ್ತಿತ್ತು. ಪ್ರೀತಿಯಿಂದ ಮಗಳ ಕಡೆ ನೋಡುತ್ತಾ, "ನೀನು ಹತ್ತು ವರ್ಷದ ಹಿಂದೆ ಎತ್ತಿಆಡಿಸಿದ ನೀಲವೇಣೀನೇ," ಎಂದ.

"ವೆಲ್ ಬಿಲ್ಟ್...ವೆಲ್ ಮ್ಯಾನರ್ಡ್...ಹಾರ್ಟಿ ಕಾಂಗ್ರಾಟ್ಸ್ ಕಣೋ ಚಲಪತಿ," ಎಂದ ರಾಮೂನ ಕಣ್ಣಿನಲ್ಲಿ ಪ್ರೀತಿ, ಆತ್ಮೀಯತೆ ತುಂಬಿ ತುಳು ಕುತ್ತಿತ್ತು.

"ಥಾಂಕ್ಯೂ," ಚಲಪತಿಯ ಕಣ್ಣಿನಲ್ಲಿ ಹೆಮ್ಮೆ ಮೂಡಿತ್ತು.

"ಸೊ..." ಎಂದು ಸೋಫಾದ ಮೇಲೆ ಕುಳಿತು ಕೊಳ್ಳುತ್ತಾ ನನ್ನ ಇರವನ್ನು ಜ್ಞಾಪಕ ಮಾಡಿದೆ ಅವರಿಗೆ.

"ನೀಲೂ, ಕೋಟೀನ ಕರೆ," ಎಂದವನೇ ರಾಮೂನ ಕಡೆ ತಿರುಗಿ, "ಕೂತ್ಕೊಳ್ಳೋ ರಾಮೂ ಕುಳಿತುಕೊಂಡು...ಈ ಹತ್ತು ವರ್ಷಗಳ ನಮ್ಮ ಅಗಲಿಕೆಯನ್ನು...ಈ ಎರಡು ದಿನಗಳ ಕಲೆಯು ವಿಕೆಗೆ ಈಕ್ವಲೈಜ್ ಮಾಡಿ...ಜೀವನದಲ್ಲಿ ಮರೆ ಯಲಾರದ ಮಧುರ ಕ್ಷಣಗಳನ್ನು ಸೃಷ್ಟಿಸು..." ಎಂದ ಚಲಪತಿ.

ಬದುಕು ಗತಸ್ಮೃತಿಯನ್ನು ಮೆಲುಕು ಹಾಕು ತ್ತಿತ್ತು. "ಕಮ್ ಹಿಯರ್...ಈ ಕ್ಷಣ...ಈ ಕ್ಷಣ ದಂತೆಯೇ ಜೀವನವಿಡೀ ನಿಲ್ಲುವಂತಿದ್ದರೆ... ಬ್ರದರ್ಸ್ ಬನ್ನಿರೋ ಹತ್ತಿರ ಬನ್ನಿ..." ರಾಮೂನ ಕಣ್ಣಿನಲ್ಲಿ ಆನಂದಬಾಷ್ಪ ತುಳುಕುತ್ತಿತ್ತು. "ನಿಮ್ಮನ್ನು ನೋಡುತ್ತಿದ್ದೇನೆ. ನಿಮ್ಮೊಂದಿಗೆ ಐಕ್ಯ ವಾಗುತ್ತಿದ್ದಂತೆನಿಸುತ್ತದೆ...ನಾವು...ನಾವು... ಈ ಕ್ಷಣದಲ್ಲಿ ಇಲ್ಲಿಯೇ...ಎದುರೆದುರಾಗಿ ಕುಳಿತು ಮನಸಾರೆ ತಬ್ಬಿಕೊಂಡು ಓ...ಮಧುರಕ್ಷಣವೇ ನಿನಗೆ ಹ್ಯಾಟ್ಸ್ ಆಫ್," ರಾಮೂನ ಕಂಠ ಗದ್ಗದ ವಾಗಿತ್ತು.

ನಮ್ಮ ಕಣ್ಣೂ ತೇವಗೊಂಡಿತ್ತು.

ಕೋಟಿ ಬಂದ.

"ಹಾಟ್ ವಾಟರ್ ಸಿದ್ಧವಾಗಿದೆಯೇ? ಬ್ರೇಕ್ ಫಾಸ್ಟ್ ಅರೇಂಜ್ ಮಾಡು...ಡಿಯರ್ ಎನಿ ಹಾಟ್ ಡ್ರಿಂಕ್ಸ್...?" ಚಲಪತಿ ಕೇಳಿದ.

"ಬೇಡ."

"ನಿನ್ನಲ್ಲಿ ಬದಲಾವಣೆ ಎಂಬುದೇ ಇಲ್ಲವಲ್ಲೋ!"

*

"ಏನು ನೋಡ್ತಿದೀಯಾ?" ಇಡ್ಲಿ ತಿನ್ನುತ್ತಿದ್ದ ಚಲಪತಿ ರಾಮೂನ ಕಡೆ ನೋಡಿ ಕೇಳಿದ.

"ಅಲ್ಲಿ ನೋಡು," ರಾಮು ಕಿಟಕಿಯಿಂದಾಚೆಗೆ ತೋರಿಸುತ್ತಾ ಹೇಳಿದ.

ಪಕ್ಕದ ಮನೆಯ ಮಹಡಿಯ ಮೇಲೆ ಮಲೆ-ಯಾಳಿ ಕ್ಯಾಪ್ಟನ್ನನ ಹೆಂಡತಿ ತಲೆಗೆ ನೀರು ಹಾಕಿಕೊಂಡು ಕೂದಲು ಆರಿಸಿಕೊಳ್ಳುತ್ತಾ ನಿಂತಿದ್ದಳು. ...ಒಳ್ಳೆ ಮಾಟವಾದ ಮೈಕಟ್ಟಿನ ಹೆಣ್ಣು..ಗಂಡಸರ ನೋಟವನ್ನು ಸೆರೆ ಹಿಡಿಯುವಂತಹ ಅಂಗ ಸೌಷ್ಟವ....

"ತಿಂಡಿ ತಿನ್ನು," ಎಂದೆ, ಕ್ಯಾಪ್ಟನ್ ನೋಡಿದರೆ ಸುಟ್ಟುಬಿಡುತ್ತಾನೆ ಎಂಬಂತೆ, ಕಣ್ಣು ಹಿಗ್ಗಿಸಿ ನಗುತ್ತಾ. "ನೋ ಚೇಂಜ್ ಎಟಾಲ್, ಈ ಹತ್ತು ವರ್ಷಗಳೂ ನಿನ್ನಲ್ಲಿ ಏನೂ ಬದಲಾವಣೆ ತರಲೇ ಇಲ್ಲ ಹೌದಲ್ಲ...?" ಎಂದೆ ಹಾಸ್ಯವಾಗಿ.

ನಿಜ, ಅವನಲ್ಲಿದ್ದ ದೋಷ ಅದೊಂದೇ.

ಅವನಲ್ಲಿದ್ದ ಈ ಊಮನ್ ವೀಕ್‌ನೆಸ್‌ನಿಂದಾಗಿ ನಾವು ಎಷ್ಟೋ ಸಲ ತೊಂದರೆಗೀಡಾಗಿದ್ದುದುಂಟು.

ಈ ವಿಷಯದಲ್ಲಿ ಅವನು ಶುದ್ಧ ಭಂಡ.

ದೇಶ ಬದಲಾಯಿಸಿತ್ತು. ಕಾಲ ಬದಲಾಯಿಸಿತ್ತು. ವಾತಾವರಣವೂ ಬದಲಾಗಿತ್ತು...... ಆದರೂ ಅವನಲ್ಲಿ ಬದಲಾವಣೆಯೇನೂ ಬಂದಿರಲಿಲ್ಲ.

ಇನ್ನು ಬರುವದಿಲ್ಲವೇನೊ ಕೂಡಾ!

ವಯಸ್ಸು ಹೆಚ್ಚಾದರೆ ಮಾತ್ರ ಪ್ರಯೋಜನ ವೇನು?...

ಯೂನಿವರ್ಸಿಟಿಯಲ್ಲೂ ಒಂದೆರಡು ಸಲ ಸಿಕ್ಕಿ ಹಾಕಿಕೊಳ್ಳಬೇಕಾಗಿದ್ದವನು ಅರೆಪಾಸಿನಲ್ಲಿ ತಪ್ಪಿಸಿ ಕೊಂಡಿದ್ದ.

"ಚೆನ್ನಾಗಿದಾಳಲ್ಲವೆ? ಕ್ಯಾಪ್ಟನ್ ಅದೃಷ್ಟವಂತ," ಅವನ ಕಣ್ಣಿನಲ್ಲಿ ತುಂಟು ನಗೆ ತುಳುಕಿತ್ತು. ಚಲಪತಿಗೆ ಇದು ಸರಿಬರಲಿಲ್ಲ. ಕುಳಿತಲ್ಲಿಯೇ ಮಿಸುಕಾಡಿದ.

"ಹುಟ್ಟಿನಿಂದ ಬಂದ ಗುಣ, ದುರಭ್ಯಾಸ ಹೋಗೋದು ಕಷ್ಟ. ಅಲ್ಲವೇನೋ?" ಸಸಾಕೋಪದಿಂದ ಕೇಳಿದ.

"ಎಗ್ಸಾಕ್ಟ್ಲಿ ಕರೆಕ್ಟ್, ನೋ ಡೌಟ್ ಎಟಾಲ್..." ಎಂದ ರಾಮು, ನಗೆ ತಡೆಹಿಡಿಯುತ್ತಾ.

ಭಂಡ...ಶುದ್ಧ ಮೊಂಡ...

"ವಿದೇಶದಲ್ಲಿ ಭಾರತಕ್ಕೆ ಎಷ್ಟು ಮಟ್ಟಿನ ಕೆಟ್ಟ ಹೆಸರನ್ನು ತಂದು ಉಪಕಾರ ಮಾಡಿದೆ?"

"ನನ್ನ ಪಕ್ಕದಲ್ಲಿ ಶಾಂತ ಇರೋವಾಗ ತಲೆಯೆತ್ತಿ ನೋಡೋದಾದ್ರೂ ಉಂಟೇನ್ರೋ?" ದೊಡ್ಡದಾಗಿ ನಕ್ಕುಬಿಟ್ಟ ರಾಮು. "ಶಾಂತಾನೇ ನನ್ನ ಸರ್ವಸ್ವ ಕಣ್ರಪ್ಪ."

ಯಾರಿಗೆ ಗೊತ್ತು, ಅಲ್ಲಿ ಅವರನ್ನು ನೋಡಿ ಹೆದರಿ ಸುಮ್ಮನಿದ್ದಿರಲೂಬಹುದು.

"ಕಿಟಕಿ ಬಾಗಿಲು ಹಾಕಲೋ, ತಲೆ ಬಗ್ಗಿಸಿಕೊಂಡು ಮರ್ಯಾದೆಯಾಗಿ ತಿಂಡಿ ತಿನ್ನುತ್ತೀಯೋ." ಚಲಪತಿಯ ಕಂಠದಲ್ಲಿ ತುಸು ಬೇಸರ ವ್ಯಕ್ತವಾಗಿತ್ತು.

"ನೀಲೂ, ಚಟ್ನಿ ಬೇಕು," ರಾಮು ಗಟ್ಟಿಯಾಗಿ ಕೂಗಿದ.

"ಬಂದೆ," ಒಳಗಿನಿಂದ ನೀಲೂ ಜವಾಬು ಕೇಳಿಸಿತು.

"ಹೇಳೋ ರಾಮೂ, ಹೇಗಿದೆ ನಿನ್ನ ಕೆಲಸ... ಹೇಗಿದೆ ಜೀವನ... ನಿನ್ನ ವಿದೇಶದ ಬಾಳ್ವೆ?" ಮಾತು ಬದಲಾಯಿಸುತ್ತಾ ಕೇಳಿದ.

ರಾಮೂ ಪಕ್ಕನೆ ನಕ್ಕ. "ಈ ಇಡ್ಲಿಗೆ ನೀಲೂ ಹಾಕುವ ಚಟ್ನಿಯಂತೆ ನಾನು ಆ ದೇಶದಲ್ಲಿ ಬೆರೆತು ಹೋಗಿದ್ದೇನೆ ಕಣೋ. ಐ ಲೈಕ್ ದಟ್ ಕಂಟ್ರಿ... ಓ ನೀಲೂ, ಕಮಾನ್,...ನಿನ್ನ ಪ್ಲೇಟೆಲ್ಲಿ?... ನೀನೂ ಇಲ್ಲಿಯೇ ಬಂದು ಕುಳಿತುಕೊಳ್ಳಬಾರದೆ?"

"ಸರಿಯಪ್ಪ...ಅವಳೂ ಇಲ್ಲಿ ಬಂದು ನಮ್ಮೊಂದಿಗೆ ಮಾತಿಗೆ ಕುಳಿತರೆ ಅಡಿಗೆ ಮನೆಯಲ್ಲಿ ಕೆಲಸ ಹೇಗಾಗುತ್ತೋ?"

"ಹೌದು, ಸುಭದ್ರ ಹೋದ ಮೇಲೆ ನೀನೇಕೆ ಮತ್ತೆ ಮದುವೆ ಮಾಡಿಕೊಳ್ಳಲಿಲ್ಲ?" ರಾಮು ಮುಂದೆ ಬಾಗಿ ಹಠಾತ್ತಾಗಿ ಪ್ರಶ್ನಿಸಿದ. "ಸಂಗೀನೂ ಸರಿ ಕಾಣಲಿಲ್ಲ. ಎಂಜಾಯ್ ದಿ ಲೈಫ್ ಬಾಬಾ."

ಚಟ್ನಿ ಹಾಕುತ್ತಿದ್ದ ನೀಲೂ ಓಟದ ನಡಿಗೆಯಲ್ಲಿ ಒಳಕ್ಕೆ ಹೊರಟುಹೋಗಿದ್ದಳು.

"ಡ್ರಾಪಿಟ್ ಡಿಯರ್ ರಾಮೂ," ನಿಸ್ಸಹಾಯನಾಗಿ, ಸರ್ವಸ್ವವನ್ನು ಕಳೆದುಕೊಂಡವನಂತೆ ದೈನ್ಯದಿಂದ ಹೇಳಿದ ಚಲಪತಿ.

"ನೀಲೂ, ಕಮ್ ಹಿಯರ್...ಯಾಕೆ ಹೊರಟು ಹೋದೆ? ತುಪ್ಪ ಬೇಕು," ರಾಮು ಕೂಗಿದ. "ಈ ಮನೇಲಿ ಸುಭದ್ರ ಇಲ್ಲದ್ದರ ಕೊರತೆ ಎದ್ದು ಕಾಣಿಸುತ್ತಿದೆ ಕಣೋ ಚಲಪತಿ..."

"ನೀಲೂ ಎದುರಿಗೆ..." ನೀಲೂ ಕರ್ಟೇನ್ ಸರಿಸಿ ಬರುತ್ತಿದ್ದ ಹಾಗೇ ಚಲಪತಿ ಕನ್ನಡಕ ತೆಗೆದು ಕಣ್ಣೀರನ್ನು ಒರೆಸಿಕೊಂಡ.

"ಸಾರಿ ಬ್ರದರ್, ವೆರಿ ವೆರಿ ಸಾರಿ," ಗೊಣಗಿದಂತೆ ಮೃದುವಾಗಿ ಹೇಳಿದ ರಾಮು.

"ನೀಲೂ, ಈ ದಿನ ಸ್ಪೆಷಲ್ ಏನು?...ಹತ್ತಿರ ಬಾ ಮತ್ತೆ... ನಿನಗೆ ಈ ಬಾಬ್ ಮಾಡಿಸಿದ್ದು ಯಾರು? ನಿಮ್ಮಪ್ಪ ತಾನೆ? ಶುದ್ಧ ಫೂಲ್ ಅವನು. ಎತ್ತರಕ್ಕಿರುವ ನಿನಗೆ ಉದ್ದನೆಯ ಜಡೆ ಎಷ್ಟು ಚೆನ್ನಾಗಿ ಒಪ್ಪುತ್ತಿತ್ತು...ನೋ...ನೋ," ಎನ್ನುತ್ತಾ ಚಲಪತಿಯ ಮುಖ ನೋಡಿದ.

ಚಲಪತಿ ಶುಷ್ಕ ನಗೆ ನಕ್ಕ.

"ಚಿಕ್ಕಂದಿನಲ್ಲಿ ನಿನ್ನನ್ನು ಎತ್ತಿ ಆಡಿಸಿದೀನಿ ಗೊತ್ತಾ?...ಆಫೀಸು ಮುಗಿದ ತಕ್ಷಣ ನಿನ್ನ–ಗೋಸ್ಕರಾನೇ ಓಡಿ ಬರುತ್ತಿದ್ದೆ. ಈಗಲೂ ಎತ್ತಿಕೊಳ್ಳೋಣ ಅನ್ನಿಸುತ್ತೆ. ಆದ್ರೆ ತಾಂಬಾ ದೊಡ್ಡೋಳಾಗಿ ಬಿಟ್ಟೆ ನೀನು." ನಗು ಹೊಳೆಯಾಗಿ ಹರಿಯುತ್ತಿತ್ತು.

ನೀಲವೇಣಿಯ ಕೆನ್ನೆ ಕೆಂಪಾಯಿತು– ಅವನ ಮಾತಿಗೆ. ಚಲಪತಿ ಆಶ್ಚರ್ಯದಿಂದ ರಾಮೂನ ಕಡೆ ನೋಡಿದ.

"ಅಂಕಲ್, ಕಾಫಿ?"

ಕಾಫಿ ನೀಡುತ್ತಿದ್ದ ನೀಲೂನ ಗುಲಾಬಿ ಬಣ್ಣದ ಕೈಯನ್ನು ತನ್ನ ಕೈಯಲ್ಲಿ ಹಿಡಿದುಕೊಂಡು ಮೃದುವಾಗಿ, "ನೀಲೂ ಐ ಲೈಕ್ ಯೂ," ಎಂದು ಆ

ಕೈಯನ್ನು ಮುದ್ದಿಸಿದ ರಾಮು.

"ನೀಲೂದೆಲ್ಲಾ ಸುಭದ್ರನ ಹೋಲಿಕೇನೇ ಅಲ್ಲವೇನೋ ಚಲಪತಿ?"

ನೀಲೂ ಸರ್ರನೆ ಅಡಿಗೆ ಮನೆಯೊಳಕ್ಕೆ ಓಡಿ ಹೋಗಿದ್ದಳು.

*

ಗಡಿಯಾರ ಹನ್ನೊಂದು ಹೊಡೆದಿತ್ತು.

"ಅಯ್ಯಾ ಸ್ವಾಮಿ, ಈಗ ನಮ್ಮ ಕಾರ್ಯಕ್ರಮ ವೇನು?" -ಆಕಳಿಸುತ್ತಾ, ಹಾಸಿಗೆಯಿಂದ ಮೇಲೆದ್ದ ಚಲಪತಿ ಕೇಳಿದ, ಪಕ್ಕದಲ್ಲಿ ಮಲಗಿದ್ದ ರಾಮುನ ಕಡೆ ಪ್ರೀತಿಯಿಂದ ನೋಡುತ್ತಾ.

"ನೀಲೂ..." ರಾಮು ಗಟ್ಟಿಯಾಗಿ ಕೂಗಿದ.

"ಏನಾದರೂ ಬೇಕೇನೋ?" ಚಲಪತಿ ಕೇಳಿದ.

"ಏನೂ ಬೇಡ, ನೀಲೂ ನನ್ನೆದುರಿಗೆ ಕುಳಿತು ಮಾತನಾಡುತ್ತಿದ್ದರೆ ಸಾಕು," ಅವನ ಕಣ್ಣಿನಲ್ಲಿ ಕಾಂತಿ ಮಿಂಚುತ್ತಿತ್ತು.

ಒಂದು ಕ್ಷಣ ಚಲಪತಿ ರಾಮೂನ ಕಡೆ ತೀಕ್ಷ್ಣ ವಾಗಿ ನೋಡಿದ.

ನಾನು ಅರ್ಧ ಕಣ್ಣು ತೆಗೆದು ಇವನ್ನೆಲ್ಲಾ ನೋಡುತ್ತಲೇ ಇದ್ದೆ.

"ಓಯ್ ನೀಲೂ..."

ಚಲಪತಿ ದಿಗ್ಭ್ರಮೆಯಿಂದೆಂಬಂತೆ ಮೂಕನಾಗಿ ಕುಳಿತಿದ್ದ. ಅತನ–ಚಲಪತಿಯ–ಪರಿಸ್ಥಿತಿ ನನಗೆ ಅರ್ಥವಾಗಿತ್ತು.

ಸಾತ್ವಿಕರು ಎಂದೂ ಅಷ್ಟೇ. ಯಾವ ಮಾತನ್ನೇ ಆಗಲಿ, ಹಿಂದು ಮುಂದೆ ನೋಡದೆ ಆಡಲೂ ಆರರು...ನುಂಗಲೂ ಆರರು.

ರಾಮೂನ ಗುಣಾನೂ ಗೊತ್ತು. ಸುಂದರ ವಾದ ಹುಡುಗಿಯರು ಎದುರಿಗಿದ್ದರೆ ಅವನಿಗೆ ಊಟ ತಿಂಡಿ ಸಹ ಬೇಕಾಗುತ್ತಿರಲಿಲ್ಲ. ಅವನಿಗೆ ಈ ವಿಷಯದಲ್ಲಿ ನಾಚಿಕೆ ಸಂಕೋಚ ಯಾವುದೂ ಅಡ್ಡ ಬರುತ್ತಿರಲಿಲ್ಲ.

ನೀಲೂಳನ್ನು ಪದೇ ಪದೇ ಕೂಗುತ್ತಿದಾನೆಂ–ದರೆ...ಅಂತಹ ಆಲೋಚನೆ ಅವನ ಮನಸ್ಸಿನಲ್ಲಿ ಮೂಡಿದೆಯೋ ಅನ್ನಿಸಿದಾಗ ನನ್ನ ಮನಸ್ಸಿನ ತುಂಬಾ ಜುಗುಪ್ಸೆ ತುಂಬಿಕೊಂಡಿತು.

ಆದರೆ...

ಅವನಲ್ಲಿ ಆ ಉದ್ದೇಶ ಇದೆಯೇ?

ನಲವತ್ತು ವರ್ಷ ದಾಟಿತ್ತು. ಕೂದಲು ನೆರೆ ತಿತ್ತು. ಮುಖದಲ್ಲಿ ವಯಸ್ಸಿಗೆ ಸಹಜವಾದ ನೆರಿಗೆ ಮೂಡಿತ್ತು.

ಊಹೂಂ...ಹೋಗಲಿ...ಅದೆಲ್ಲಾ ಬೇಡ ಅಂದುಕೊಂಡರೂ–

ನೀಲೂ ಯಾರು?

ತನ್ನ ಮಿತ್ರನ ಮಗಳು!

ತನ್ನ ಆತ್ಮೀಯನ ಮಗಳು ! !

–ತಾನು ಯಾರೊಂದಿಗೆ ಎರಡು ದಿನ ಎಲ್ಲ ವನ್ನು ಮರೆತು ಗತಸ್ಮೃತಿಗಳನ್ನು ಮೆಲುಕು ಹಾಕು ತ್ತಾ ಆನಂದದಿಂದ ಕಳೆಯಲೆಂದು ಬಂದಿದ್ದನೋ ಅವನ ಮಗಳು!!

ಈ ಹುಡುಗಿಯನ್ನು ಕೂಡಾ ಈ ರ್‍ಯಾಸ್ಕಲ್ ಅದೇ ದೃಷ್ಟಿಯಿಂದ ನೋಡುತ್ತಿದಾನೇನು?

ಛೆ! ಛೆ!!

ಇದೇ ನಿಜವಾದಲ್ಲಿ ಚಲಪತಿಗೆ ಏಕೆ, ನನಗೂ ಸಹಿಸಲಾರದ ವಿಷಯವೇ.

"ಊಟ ರೆಡಿ," ನೀಲೂ ಬಂದಳು.

"ಲೋ ಚಲಪತಿ, ನೀಲೂಗೆ ಆ ರಿಂಗ್ಸ್ ಚೆನ್ನಾ ಗಿಲ್ಲ ಕಣೋ. ಮುದ್ದಾದ ವಜ್ರದ ಓಲೆ ಮಾಡಿಸು ಲಕ್ಷ್ಮೀದೇವಿಯಂತಿರುತ್ತಾಳೆ," ರಾಮು ನೀಲೂ ಕಡೆ ಎವೆಯಿಕ್ಕದೆ ನೋಡುತ್ತಾ ಹೇಳಿದ.

ಚಲಪತಿ ಬಾರದ ನಗೆಯನ್ನು ತುಟಿಗಳ ಮೇಲೆ ತಂದುಕೊಂಡ.

ಮೂವರೂ ಊಟಕ್ಕೆ ಕುಳಿತೆವು.

ನೀಲೂ ಬಡಿಸುತ್ತಿದ್ದಳು. ಅದು ಬೇಕು ಇದು ಬೇಕು ಎನ್ನುತ್ತಾ, ನೀಲೂನ ಮೇಲಿಂದ ಮೇಲೆ ಕೂಗುತ್ತಾ, ಅವಳ ಕಡೆ ನಗೆ ಚಿಮ್ಮಿಸುತ್ತಾ ಊಟ ಮಾಡುತ್ತಿದ್ದ ರಾಮು.

ನಿಜ, ಹತ್ತು ವರ್ಷಗಳ ಕೆಳಗೆ ನೀಲೂ ಚಿಕ್ಕ ಹುಡುಗೀನೇ. ಆದರೆ ಈಗ ವಯಸ್ಸಿಗೆ ಬಂದು ನಿಂತ ಬೆಳೆದ ಹೆಣ್ಣು!.........

ಒಂದು ಹದ್ದಿನಲ್ಲಿರಬೇಕಾದ ವಯಸ್ಸು...

ಮಧ್ಯಾಹ್ನ ಮೂರಕ್ಕೆ ನಾವು ಮೂವರೂ ಹೊರಗೆ ಹೊರಟಿದ್ದೆವು.

ನೀಲೂನು ಬರುವಂತೆ ಕರೆದ ರಾಮು.

ಆಕೆ ಬರುವುದಿಲ್ಲವೆಂದಳು.

ಚಲಪತಿಯೂ ಬೇಡವೆಂದ.

ಆ ಕ್ಷಣದಲ್ಲಿ ರಾಮೂನ ಕಣ್ಣಲ್ಲಿ ಎಷ್ಟು ನಿರಾಶೆ ಗೂಡು ಕಟ್ಟಿತ್ತೋ, ಚಲಪತಿಯ ಕಣ್ಣಲ್ಲಿ ಅಷ್ಟೇ ರೋಷವೂ ಮೂಡಿದ್ದು ನನಗೆ ಕಾಣಿಸಿತ್ತು.

ರಾಮು ಮನಸ್ಸಿಲ್ಲದ ಮನಸ್ಸಿನಿಂದಲೇ ಕಾರು ಹತ್ತಿದ.

ಕಾರಿನಲ್ಲಿ ಕುಳಿತ ನಂತರ, "ರುಕ್ಮಿಣಿ ಎಲ್ಲಿದಾಳೆ ಈಗ?" ಎಂದು ಕೇಳಿದ.

"ದಿಲ್ಲಿಯಲ್ಲಿದಾಳೇಂತ ಕಾಣುತ್ತೆ. ಅವಳ ಗಂಡ ಸೆಂಟ್ರಲ್ ಸೆಕ್ರೆಟರಿಯೇಟ್‌ನಲ್ಲಿದಾನೆ."

"ಶಾರದ?"

"ಇಲ್ಲಿಯೇ ಹೆವಿ ಎಲೆಕ್ಟ್ರಿಕಲ್ಸ್."

"ರಾಗಿಣಿ?"

"ರಾಗಿಣೀನೇ...ಒಂದು ಸಲ ಎಗ್ಸಿಬಿಷನ್‌ನಲ್ಲಿ ಕಾಣಿಸಿಕ್ಕಿದ್ದಳು. ಗಂಡನಿಗೆ ಡೈವೋರ್ಸ್ ಕೊಡೋ ಪ್ರಯತ್ನದಲ್ಲಿದಾಳಂತೆ..."

"ಅದೇಕೆ?" ಎಂದು ಕುತೂಹಲದಿಂದ ಮುಂದಕ್ಕೆ ಬಾಗಿದ ರಾಮು.

"ಹಳೆಯ ಕತೆಗಳೇನಾದರೂ ಹೊರಬಿದ್ದುವೇ–ನೋ" ಛೇಡಿಸುವವನಂತೆ ನಕ್ಕು ಹಿಂದಕ್ಕೆ ಒರಗಿ ಕುಳಿತೆ ನಾನು.

"ನಿರ್ಮಲ?"

"ಲೋ, ರುಕ್ಮಿಣಿ, ಶಾರದ, ಬಕುಳ, ಪದ್ಮ, ನಿರ್ಮಲ, ಎಲ್ಲಾರೂ ಅವರವರ ಗಂಡಂದಿರ ಜತೆ ಸಂಸಾರ ಮಾಡುತ್ತಾ, ಅವರ ಪಾಲಿಗೆ ಬಂದ ಪಂಚಾಮೃತಾನ ಸೇವಿಸ್ತಾ ಸುಖವಾಗಿದಾರೆ. ಅವರನ್ನು ಕುರಿತು ನಿನಗೇಕೋ ಚಿಂತೆ? ಅವರ–ನ್ನೆಲ್ಲಾ ಮರೆತುಬಿಡು. ಮದುವೆಯಾದ ಮರುಕ್ಷಣ ಅವರೂ ನಿನ್ನನ್ನು ಪೂರ್ತಿ ಮರೆತೇ ಇರುತ್ತಾರೆ..." ಎಂದ ಚಲಪತಿಯ ಧ್ವನಿಯಲ್ಲಿ ಹಾಸ್ಯದ ಜತೆಗೆ ತುಸು ಬೇಸರವೂ ಬೆರೆತಿತ್ತು.

ಆದರೆ ರಾಮು ಅದೇನನ್ನೂ ಗಮನಿಸಲಿಲ್ಲ.

ಹಾಯಾಗಿ ನಕ್ಕು ಹೇಳಿದ: "ಅದಕ್ಕೇ ಕಣೋ ಈ ಚಲಪತಿಯ ಮೇಲೆ ನನಗೆ ಕೋಪ. ಇವನು ತಾನು ಬದುಕನ್ನು ಅನುಭವಿಸಲೂ ಆರ, ಮತ್ತೊಬ್ಬರು ಅನುಭವಿಸಲೂ ಬಿಡ..."

"ಈ ತರಹದ ಅನುಭವಗಳೇ?" ಚಲಪತಿ ಬಿರುಸಾಗಿ ಕೇಳಿದ.

–ತನ್ನ ಮಗಳ ಹಿಂದೆ ಬೀಳುತ್ತಿದ್ದ ರಾಮೂನ ಮೇಲೆ ಚಲಪತಿಗೆ ಎಲ್ಲಿಲ್ಲದ ಸಿಟ್ಟು ಬಂದಿತ್ತು. ಅದನ್ನು ಹೊರಗೆಡಹುವ ಅವಕಾಶ ಸಿಕ್ಕಿತ್ತೀಗ.

"ನೀನು ಏನೆಂದುಕೊಂಡರೂ ಸರಿ ಕಣೋ. ನಾನು ಮಾತ್ರ ಕೈಗೆ ಬಂದ ಅವಕಾಶವನ್ನು ಎಂದೂ ಹೋಗಗೊಡುವವನಲ್ಲ...ಅಷ್ಟೇ ಅಲ್ಲ. ಅದರಿಂದ ಮತ್ತೊಬ್ಬರಿಗೆ ನೋವಾದರೂ ನಷ್ಟವಾದರೂ ಕೇರ್ ಮಾಡೊಲ್ಲ. ನನ್ನ ಆನಂದ ನನ್ನದು, ಅಷ್ಟೇ," ಒತ್ತಿ ಹೇಳಿದ ರಾಮೂ.

ನಮ್ಮ ಮಧ್ಯೆ ಒಂದು ಜುಗುಪ್ಸೆಯ ಮೌನ ಅಲೆಯಲೆಯಾಗಿ ಹಾದು ಹೋಯಿತು.

ಆ ನಂತರ ಹತ್ತು ನಿಮಿಷಗಳಲ್ಲಿಯೇ ನಮ್ಮನ್ನು ಬಾಂಬೇ ಬಜಾರಿನ ಬಳಿ ಕೆಳಗಿಳಿಸಿದ ರಾಮೂ.

ಮೂವರೂ ಒಳಹೊಕ್ಕೆವು.

ಗಾಜಿನ ಬೀರುಗಳ ಒಳಗೆ ಬಣ್ಣ ಬಣ್ಣದ ಬಟ್ಟೆ ಕಣ್ಣು ಕೋರೈಸುವಂತಿತ್ತು....

ರಾಮು ಕೇಳುತ್ತಿದ್ದಂತೆಯೇ ಅಂಗಡಿಯ ಹುಡುಗ ನಮ್ಮ ಮುಂದೆ ರಾಶಿ ರಾಶಿ ಬಟ್ಟೆಗಳನ್ನು ಹರವುತ್ತಿದ್ದ.

"ಎಷ್ಟು ಕೊಳ್ಳುತ್ತೀಯೋ ಶಾಂತನಿಗೆ?" ರಾಮು ಪ್ಯಾಕ್ ಮಾಡಿಸುತ್ತಿದ್ದ ರೀತಿ ನೋಡಿ ಕೇಳಿದ ಚಲಪತಿ.

"ಶಕ್ತಿ ಇದ್ದಷ್ಟೂ," ಕಣ್ಣು ಹಿಗ್ಗಿಸಿ ನಕ್ಕ ರಾಮು.

ನನಗನ್ನಿಸಿತು ಇವನಿಗೆ ಶಾಂತಳ ಮೇಲೆ ಪ್ರೀತಿಗಿಂತ ಭಯಾನೇ ಜಾಸ್ತಿಸೇನೋ ಅಂತ.

ಯಾವ ಕುದುರೆಯನ್ನಾದರೂ ಲಗಾಮಿಲ್ಲದೆ ನಿಲ್ಲಿಸೋದು ಕಷ್ಟ.

ಮೂವರೂ ಹೊರಬಂದಾಗ ಅವನ ಬಿಲ್ಲು ಹತ್ತುನೂರನ್ನು ದಾಟಿತ್ತು.

"ವಾಟ್ ನೆಕ್ಸ್ಟ್ ?"

"ಬಾರ್."

"ಈಗಲೇ?"

"ನಾನು ಇಂಡಿಯಾಗೆ ಬಂದು ಎಷ್ಟು ಹೊತ್ತಾಗಿದೆ ಗೊತ್ತೇನು? ನಾನು ಪಕ್ಕಾ ಕುಡುಕ ಕಣ್ರಪ್ಪಾ."

"ಬರೀ ಕುಡುಕನೇ ಏನು ಬಂತು? ಮತ್ತೊಂದು ಕೂಡಾ ಇದೆ. ಅಲ್ಲವೇ ?" ಚಲಪತಿಯ ಕಂಠದಲ್ಲಿ ಕಹಿ ಇಣಿಕಿ ನೋಡುತ್ತಿತ್ತು.

ನನಗನ್ನಿಸತೊಡಗಿತ್ತು – ರಾಮು ಬರುವುದಕ್ಕೆ ಮುಂಚೆ ಅವನ ಮೇಲಿದ್ದ ಆಪ್ಯಾಯತೆ ಚಲಪತಿಗೆ

ಈಗಿಲ್ಲವೇನೋ ಎಂದು.

ಅದರಲ್ಲಿ ಸಂದೇಹವೇನಿರಲಿಲ್ಲ.

ಕಾರಣವೂ ಸ್ಪಷ್ಟವಾಗಿಯೇ ಇತ್ತು.

ಹಿಂದಿನ ಸೀಟಿನಲ್ಲಿ ಕುಳಿತಿದ್ದ ನಾನು ಡ್ರೈವ್ ಮಾಡುತ್ತಿದ್ದ ಚಲಪತಿಯನ್ನು, ಎಲ್ಲಿಯಾದರೂ ಸುಂದರವಾದ ಹೆಣ್ಣುಗಳು ಕಾಣುತ್ತಾರೇನೋ ಎಂಬಂತೆ ಹೊರಗೆ ನೋಡುತ್ತಿದ್ದ ರಾಮೂನನ್ನೂ ನೋಡುತ್ತಾ ಕುಳಿತಿದ್ದೆ.

ಯಾರ ಮೇಲೆ ಸಹಾನುಭೂತಿ ತೋರಿಸಲಿ?

ದೇವರೇ, ಮನುಷ್ಯನನ್ನು ಏಕೆ ಇಂತಹ ಬಲಹೀನತೆಗೆ ದಾಸರನ್ನಾಗಿ ಮಾಡುತ್ತೀ?

ದೇವರೇ, ನಿನ್ನನ್ನು ಕ್ಷಮಿಸಲಾರೆ ನಾನು. ಇಂತಹ ಮನುಷ್ಯರನ್ನು ಬದಲಾಯಿಸಬಲ್ಲವನೇ ದೇವರು...

ಬಾರಿನಲ್ಲಿ ಗ್ಲಾಸುಗಳ ಸಪ್ಪಳದ ಮಧ್ಯೆ ಬರೀ ಬೀರನ್ನು ಮಾತ್ರ ಸೇವಿಸಿ ಹೊರಬಿದ್ದೆವು.

ರಾಮು ಬಡಬಡಿಸುತ್ತಲೇ ಇದ್ದ—ಕಾಡ್ಯಾದಲ್ಲಿ ತನ್ನ ಕಲೀಗ್ ಲೇಡಿಫ್ರೆಂಡ್ ಸ್ಟೆಲ್ಲಾಳನ್ನು ಕುರಿತು, ತಾನೂ ಅಂದ್ರೆ ಪ್ರಾಣ ಬಿಡ್ತಿದ್ದಳಂತೆ ಅವಳು...ತಾನು 'ಹೂಂ' ಅಂದರೆ ಕೂಡಲೇ ಗಂಡನಿಗೆ ಡೈವೋರ್ಸ್ ಕೊಡಲಿಕ್ಕೂ ಸಿದ್ಧವಾಗಿದ್ದಳಾಕೆ...

"ಆದರೆ..." ನಗುತ್ತಾ ಹೇಳಿದ ರಾಮು, "ಹಾಂತ ಇಂಡಿಯಾದಿಂದ ಬರುವಾಗ ಒಂದು ಕಂಟ್ರಿ ಪೊರಕೇನ ತನ್ನ ಸೂಟ್‌ಕೇಸಿನಲ್ಲಿ ಬಚ್ಚಿಟ್ಟು ತಂದಿದ್ದಳಂತ ಅಲ್ಲಿಗೆ ಹೋಗೋವರೆಗೂ ಗೊತ್ತೇ ಇರಲಿಲ್ಲ..." ರಾಮು ಹೊಟ್ಟೆ ಹುಣ್ಣಾಗುವಂತೆ ನಕ್ಕ.

ನಾವೂ ಅವನ ನಗುವಿನಲ್ಲಿ ಮನಃಪೂರ್ತಿಯಾಗಿ ಭಾಗಿಗಳಾಗಿದ್ದೆವು.

ಮನೆಗೆ ಬರುವ ವೇಳೆಗೆ ರಾತ್ರಿ ಒಂಬತ್ತು ಗಂಟೆಯಾಗಿತ್ತು.

"ನೀಲೂ" ಮೆಟ್ಟಿಲ ಮೇಲಿಂದಲೇ ಗಟ್ಟಿಯಾಗಿ ಕೂಗಿದ ರಾಮು. ಕೋಪದಿಂದ ಬಾಯಿ ತೆರೆಯಬಿದ್ದ ಚಲಪತಿಯ ಭುಜದ ಮೇಲೆ ಕೈಹಾಕಿ ತಡೆದೆ, "ಸಮಾಧಾನ ತಂದುಕೋ" ಎಂಬಂತೆ.

ನನ್ನ ಮನಸಿನಲ್ಲಿ ಚಲಪತಿಯ ಬಗ್ಗೆ ಎಣೆಯಿಲ್ಲದ ಸಹಾನುಭೂತಿ ತುಂಬಿ ಬರುತ್ತಿತ್ತು.

ಆದರೆ ಒಳ್ಳೇ ಇರುಕಿನಲ್ಲಿ ಸಿಕ್ಕಿದಂತಾಗಿತ್ತು.

ಮೂವರೂ ಹಾಲನ್ನು ಪ್ರವೇಶಿಸುವ ವೇಳೆಗೆ ಅರ್ಧ ಸರಿಸಿದ ಕರ್ಟನ್ ಬಳಿ ನಿಂತಿದ್ದಳು ನೀಲೂ...

"ಯೂ...ನೀಲೂ...ಇವು ಹೇಗಿವೇಂತ ಹೇಳು. ಕಮಾನ್, ನಿನಗೋಸ್ಕರಾನೇ ತಂದಿದ್ದು." ಕೈಯಲ್ಲಿದ್ದ ಪ್ಯಾಕೆಟ್ಟುಗಳನ್ನೆಲ್ಲಾ ಸೋಫಾದ ಮೇಲಿಡುತ್ತಾ ಹೇಳಿದ ರಾಮು.

"ರಾಮು!" ಚಲಪತಿ ಹುಚ್ಚನಂತೆ ಕೂಗಿದ. ಇನ್ನು ಕೋಪವನ್ನು ನಿಗ್ರಹಿಸಿಕೊಳ್ಳುವುದು ಅವನಿಗೆ ದುಸ್ಸಾಧ್ಯವಾಗಿತ್ತು.

ನಾನು ಬೇಗ ಬೇಗ ಮುಂದೆ ಬಂದು ರಾಮೂನ ಕೈ ಹಿಡಿದುಕೊಂಡು, "ಮುಂಚೇನೆ ಹೇಳಬಾರದಾಗಿತ್ತೇನೋ. ನಿಂಗೆ ಗೊತ್ತಿಲ್ಲ, ಚಲಪತಿಗೆ ಪ್ರೆಸೆಂಟೇಷನ್ಸ್ ಅಂಥಾದ್ದೆಲ್ಲಾ ಸರಿಬೀಳೋಲ್ಲಾಂತ." ಎಂದೆ. ನನ್ನ ಮಾತಿನಲ್ಲಿ ಸಹಜತೆಯಿಲ್ಲವೆಂದು ನನಗೇ ಗೊತ್ತಾಗುವಂತಿತ್ತು. ಆದರೆ ಪರಿಸ್ಥಿತಿಯನ್ನು ಹತೋಟಿಗೆ ತರಲು ನನ್ನ ಕೈಲಾದಂತೆ ಪ್ರಯತ್ನಿಸಿದ್ದೆ.

ಚಲಪತಿ ತನ್ನನ್ನು ತಾನು ನಿಗ್ರಹಿಸಿಕೊಳ್ಳಲೆಂಬಂತೆ ಸರಸರ ಮಹಡಿಯ ಮೇಲಕ್ಕೆ ಹೊರಟುಹೋದ.

ನೀಲೂ ನಿಂತಿದ್ದ ಕಡೆ ಕರ್ಟನ್ ಅಲ್ಲಾಡುತ್ತಿದ್ದುದು ಕಾಣಿಸಿತು.

"ಐ ಲೈಕ್ ಹರ್...ಐ ಲೈಕ್ ಹರ್, ಪ್ಲೀಸ್..." ಎಂದು ತನ್ನಲ್ಲಿ ತಾನೆ ಹೇಳಿಕೊಳ್ಳುತ್ತಾ ನಿರಾಶೆಯಿಂದ, ನಿಸ್ಸಹಾಯವಾಗಿ ತಾನು ತಂದ ಸೀರೆಗಳ ಪ್ಯಾಕೆಟ್ಸ್ ಕಡೆ ನೋಡುತ್ತಾ ನಿಂತ ರಾಮೂ.

ಅವನ ಕೈ ಹಿಡಿದು ಬೆಡ್ ರೂಮಿನೊಳಕ್ಕೆ ಕರೆದುಕೊಂಡು ಹೋದೆ.

ಸ್ವಲ್ಪ ಬುದ್ಧಿವಾದ ಹೇಳೋಣವೇ ಎನ್ನಿಸಿತು.

ಮಹಾ ಇದ್ದರೆ ಇನ್ನೊಂದು ಇಪ್ಪತ್ತುನಾಲ್ಕು ಗಂಟೆ ನಮ್ಮೊಂದಿಗಿರುತ್ತಾನೆ ಅವನು. ಅವನ ಮನಸ್ಸು ನೋಯಿಸುವುದು ಸರಿಯೇ?

ಆದರೆ ಅವನ ವರ್ತನೆ?

ಮಧ್ಯದಲ್ಲಿ ನಾನು ನೀರಿನಿಂದ ಹೊರಬಿದ್ದ ಮೀನಿನಂತೆ ಚಡಪಡಿಸಬೇಕಾಯಿತು.

ಮೌನವಾಗಿ ಒಬ್ಬರೊಡನೊಬ್ಬರು ಮಾತನಾಡದೆ, ಮುಖ ನೋಡಿಕೊಳ್ಳುತ್ತಾ ಕುಳಿತೆವು.

"ಬನ್ರೋ ಹುಡುಗ್ರಾ, ಊಟ ಮಾಡಿಬಿಡೋಣ," ಎಂದು ನಗುತ್ತಾ ಮೆಟ್ಟಿಲಿಳಿದು ಬಂದ ಚಲಪತಿ.

ಅಂದರೆ ಅವನಿಗೂ ನನ್ನಂತೆಯೇ ಕೆಲವು ಗಂಟೆ

ಗಳಲ್ಲಿಯೇ ನಮ್ಮನ್ನಗಲುವ ರಾಮುವಿನ ಮನಸ್ಸು ನೋಯಿಸಲು ಇಷ್ಟವಿಲ್ಲದೆ ತನ್ನನ್ನು ತಾನು ಸಮಾಧಾನ ಮಾಡಿಕೊಂಡಿದ್ದಾನೆ. ಎನ್ನಿಸಿತು.

ಗುಡ್ ಸ್ಪಿರಿಟ್......

ಚಲಪತಿಯ ಮೇಲೆ ಪೂರ್ಣ ಸಹಾನುಭೂತಿ ಏರ್ಪಟ್ಟಿತ್ತು ನನಗೆ.

ಊಟದ ಟೇಬಲ್ ಬಳಿ ಚಲಪತಿಯೇ ಹೇಳಿದ, "ಅವನ್ನೆಲ್ಲಾ ಶಾಂತನಿಗೇ ತೆಗೆದುಕೊಂಡುಹೋಗಿ ಕೊಡು. ತುಂಬಾ ಚೆನ್ನಾಗಿವೆ."

"ನಾನು ತೆಗೆದುಕೊಂಡು ಹೋದರೂ ಶಾಂತನಿಗೆ ಹಿಡಿಸಬೇಕೂಂತ ಎಲ್ಲಿದೆ?" ಪಕ್ಕನೆ ನಕ್ಕ ರಾಮು.

"ನೀನು ಕೊಂಡದ್ದು ಶಾಂತನಿಗೋಸ್ಕರ ತಾನೇ?"

"ಅಲ್ಲ. ನೀಲೂಗೋಸ್ಕರಾನೇ," ಒತ್ತಿ ಹೇಳಿದ ರಾಮು. "ಆಗಲೇ ಹೇಳಿದರೆ ನೀನು ಒಪ್ಪಿಕೊಳ್ಳುತ್ತಿಯೋ ಇಲ್ಲವೋ ಎಂದು ಸುಳ್ಳು ಹೇಳಿದೆ."

ಆ ರಾತ್ರಿ ಅವರಿಬ್ಬರ ಮಧ್ಯೆ ಮಲಗಿದ್ದರೂ ನನಗೆ ನಿದ್ದೆ ಬರಲಿಲ್ಲ. ಚಲಪತಿಯೂ ನಿದ್ದೆ ಮಾಡಿರಲಾರನೆಂದೇ ನನ್ನ ನಂಬಿಕೆ.

ಮಾರನೆಯ ದಿನ ಮಧ್ಯಾಹ್ನದ ರೈಲಿಗೆ ತಾನು ಹೊರಡುತ್ತೇನೆಂದು ರಾಮು ಹೇಳಿದಾಗ ಚಲಪತಿ ಬೇಡವೆನ್ನಲಿಲ್ಲ. ನನಗೆ ಅವನ ಅಂತರ್ಯ ಅರ್ಥವಾಗಿತ್ತು.

ಹೌದು...ಅದಕ್ಕಿಂತ ಬೇರೇನು ಮಾಡಬಲ್ಲ ಚಲಪತಿ!

ರಾಮು ತನ್ನ ಪ್ರಯಾಣದ ವಿಷಯ ಹೇಳುತ್ತಾ "ನೀಲೂ, ಬೇಗ ರೇಡಿ ಆಗಬೇಕು, ಕ್ವಿಕ್," ಎಂದ.

"ಏತಕ್ಕೆ?" ಚಲಪತಿ ಆಶ್ಚರ್ಯದಿಂದ ಕೇಳಿದ.

"ಸ್ವಲ್ಪ ಷಾಪಿಂಗ್ ಇದೆ, ಇಬ್ಬರೂ ಹೋಗಿ ಬರುತ್ತೇವೆ."

"ನಾನ್ಸೆನ್ಸ್...ಸಾಧ್ಯವಿಲ್ಲ."

ರಾಮು ಗಮನಿಸಿದನೋ ಇಲ್ಲವೋ ಕಾಣೆ. ನಾನು ನೋಡಿದಾಗ ಚಲಪತಿಯ ಕಣ್ಣು ಕಿಡಿ ಕಾರುತ್ತಿತ್ತು.

ಕ್ಷಣದಲ್ಲಿಯೇ ತನ್ನನ್ನು ತಾನು ನಿಗ್ರಹಿಸಿಕೊಂಡ. "ನೀಲೂ ನೀನು ಒಳಗೆ ಹೋಗು," ಎಂದ ಗಂಭೀರವಾಗಿ.

"ಇದಕ್ಕೇನೋ ನೀನು ಹೈದ್ರಾಬಾದಿಗೆ ಬಂದಿದ್ದೂ,ಸಾಯಂಕಾಲದವರೆಗೂ ಇರುತ್ತೇನೆಂದವನು ಮಧ್ಯಾಹ್ನಕ್ಕೆ ಪ್ರಯಾಣ ಇಟ್ಟುಕೊಂಡಿದ್ದೂ ಅಲ್ಲದೆ ಆ ಮಧ್ಯಾಹ್ನದವರೆಗೂ ಕೂಡಾ ನಮ್ಮ ಜತೆಯಲ್ಲಿರದೆ, ನಾವು ನಿನಗೋಸ್ಕರ ರಜೆ ಹಾಕಿ ಕುಳಿತಿದ್ದರೆ ನೀನು ನೀಲೂನ ಜತೆ ಊರು ಸುತ್ತುತ್ತಿಯಾ? ನಾಚಿಕೆಯಿಲ್ಲ ಕಣೋ ನಿನಗೆ!" ಮುಖ್ಯ ವಿಷಯವನ್ನು ಟ್ವಿಸ್ಟ್ ಮಾಡಿ ಎಲ್ಲವನ್ನೂ ಹಾಸ್ಯದಲ್ಲಿ ತೇಲಿಸಿ ವಾತಾವರಣವನ್ನು ಹಗುರಗೊಳಿಸಿದ ಚಲಪತಿಯ ಬಗ್ಗೆ ನನ್ನ ಮನಸ್ಸಿನಲ್ಲಿ ಗೌರವವೇ ಮೂಡಿತ್ತು.

"ನೀನು ಎಲ್ಲಿಯೂ ಹೋಗಕೂಡದು. ನಡೆ ನಮ್ಮ ರೂಮಿನಲ್ಲಿ ಕುಳಿತುಕೊಳ್ಳೋಣ, ಕದಲಿದರೆ ಕಾಲು ಮುರೀತೀನಿ...ನಾವು ಮೂವರೇ ಇರಬೇಕು. ನಮ್ಮ ನಡುವೆ ಬೇರಾರೂ ಇರಕೂಡದು. ನಮ್ಮ ಮೂವರ ವಿಷಯಾನೇ ಮಾತನಾಡಬೇಕು. ಇನ್ನೊಬ್ಬರ ಪ್ರಸಕ್ತಿ ತರಲೇಬಾರದು...ನಾನು ಸಹಿಸಲಾರೆ...ಮತ್ತೆ ಎಷ್ಟು ವರ್ಷಕ್ಕೋ ನಾವು ಒಬ್ಬರನ್ನೊಬ್ಬರು ನೋಡುವುದು...ಸಾಧ್ಯವಿಲ್ಲ ಕಣೋ... ಈ ಕೆಲವು ಗಂಟೆಗಳನ್ನಾದರೂ ಮರೆಯಲಾರದ ಮಧುರಕ್ಷಣಗಳನ್ನಾಗಿ ಮಾಡು..." ಚಲಪತಿ ಉದ್ರೇಕಗೊಂಡಿದ್ದ.

ಅವನ ಆವೇಶದ ಹಿಂದಿದ್ದ ಆತಂಕ, ಕೋಪ ನಿಗ್ರಹ ನನ್ನ ಕಣ್ಣಿಗೆ ಸ್ಪಷ್ಟವಾಗಿ ಕಾಣುತ್ತಲೇ ಇತ್ತು.

*

ಗೋಲ್ಕೊಂಡ ಎಕ್ಸ್‌ಪ್ರೆಸ್ ಬರಲು ಇನ್ನರ್ಧ ಗಂಟೆ ಸಮಯವಿದ್ದಾಗ ಮೂವರೂ ಕಾರಿನಲ್ಲಿ ಹೊರಟೆವು.

ರಾಮೂನ ಆಗಮನ ಚಲಪತಿಯ ಮನಶ್ಶಾಂತಿಯನ್ನು ಕದಡಿತ್ತೆನ್ನುವುದರಲ್ಲಿ ಸಂದೇಹವೇ ಇರಲಿಲ್ಲ.

ನನಗೂ ಅವನ ವರ್ತನೆ ಎಳ್ಳಷ್ಟು ಸರಿ ಬಂದಿರಲಿಲ್ಲ.

ರಾಮು ನಮ್ಮ ಮಧ್ಯೆ ಇಲ್ಲದಿದ್ದಾಗ ಚಲಪತಿ ನೊಂದುಕೊಳ್ಳುತ್ತಾ ಆ ವಿಷಯ ಆಡಿ ತೋರಿಸಿಯೂ ಇದ್ದ.

ನಾನು ಅವನು ಹೇಳಿದ್ದನ್ನೆಲ್ಲಾ ಕೇಳಿ, "ನೀನು ಮಾತು ಜಾರಬೇಡ, ನಾನೇ ಸಮಯ ನೋಡಿ ಅವನಿಗೆ ಬುದ್ಧಿ ಹೇಳುತ್ತೇನೆ," ಎಂದಿದ್ದ.

"ಬೇಡ ಬಿಡೋ, ಯಾರ ಪಾಪ ಅವರದ್ದು, ಈ ಜನ್ಮದಲ್ಲಿ ಮತ್ತೊಂದು ಸಲ ಅವನನ್ನು ನೋಡುತ್ತೇನೋ ಇಲ್ಲವೋ...ನಾಲ್ಕು ಮಾತಾಡಿ ಅವನ ಮನಸ್ಸನ್ನು ನೋಯಿಸಿ, ನೋಯಿಸಿದೆನಲ್ಲಾ ಎಂದು ನಾನೂ, ನಾನು ನೊಂದುಕೊಂಡೆ ಅಂತ ಅವನೂ...ಯಾಕೆ ಬಿಡು...ನಾನೊಬ್ಬನೇ ಅನುಭವಿಸಿದರೆ ಆಯಿತು."

ಅವನ ಮಾತು ನನಗೆ ಅವನ ವಿಷಯದಲ್ಲಿದ್ದ ಗೌರವವನ್ನು ಹೆಚ್ಚು ಮಾಡಿತು. ಅದೇ ಕಾರಣದಿಂದಾಗಿ ರಾಮುನ ಮೇಲಿದ್ದ ಕೋಪ ಎರಡರಷ್ಟಾಯಿತು.

ರೈಲಿನಲ್ಲಿ ಕಿಟಕಿಯ ಪಕ್ಕದಲ್ಲಿ ಕುಳಿತಿದ್ದ ರಾಮು. ಪ್ಲಾಟ್‌ಫಾರಂ ಮೇಲೆ ನಿಂತಿದ್ದೆವು ನಾವು.

ಪ್ಲಾಟಫಾರಂ ಮೇಲೆ ಜನಗಳ ಗದ್ದಲ ವಿಪರೀತವಾಗಿತ್ತು.

"ಚಲಪತಿ, ಏನಾದರೂ ಪುಸ್ತಕ ಕೊಂಡು ತಾರೋ, ರೈಲಿನಲ್ಲಿ ಹೊತ್ತು ಹೋಗುತ್ತೆ ಅವನಿಗೆ," ಎಂದೆ.

ಚಲಪತಿ ಆ ಕಡೆ ಹೊರಟ ಕೂಡಲೇ ರಾಮು ಶುಷ್ಕ ನಗೆ ನಕ್ಕು, "ಹೂಂ, ಇನ್ನು ಸುರೂ ಮಾಡು, ನಿನ್ನ ಮನಸ್ಸಿನಲ್ಲಿರೋದನ್ನೆಲ್ಲಾ ಒದರಿ ಬೈದು ಬಿಡು ನನ್ನ" ಎಂದ.

ಬೆಚ್ಚಿ ಬಿದ್ದೆ ನಾನು—ಅವನು ನನ್ನ ಮನಸ್ಸನ್ನು ಓದುತ್ತಿದ್ದಂತೆನಿಸಿತು.

"ಬೈಯೋಕೆ ಏನಿದೆ? ಆದರೂ..." ತಡವರಿಸಿದೆ ನಾನು.

"ನಿಮಗೆ ನನ್ನಲ್ಲಿರುವ ಆ ದೌರ್ಬಲ್ಯ ಗೊತ್ತು. ಅದರಿಂದಾಗಿಯೇ ನನ್ನನ್ನಷ್ಟು ನೀಚವಾಗಿ ಊಹಿಸಿಕೊಂಡಿರಲ್ಲವೆ?"

ಆ ಕ್ಷಣದಲ್ಲಿ ಅವನ ಮುಖದಲ್ಲಿನ ರಕ್ತವೆಲ್ಲಾ ಹೀರಿಹೋದಂತಾಗಿ ಮುದುಕನಂತೆ ಕಾಣಿಸಿದ.

ನಾನು ಹೇಳಬೇಕಾದ್ದನ್ನು ತಡಮಾಡದೆ ನೇರವಾಗಿ ಹೇಳಿಬಿಡೋಣವೆಂಬ ಉದ್ದೇಶದಿಂದ ಬಾಯಿ ತೆಗೆಯುವಷ್ಟರಲ್ಲಿ ಅವನೇ ಹೇಳಿದ: "ನೀನೇನೂ ಹೇಳಬೇಕಾಗಿಲ್ಲ ಕಣೋ, ಚಲಪತಿ ಪಟ್ಟ ವ್ಯಥೆ, ನಿನ್ನ ಇರಕಾಟ ಎಲ್ಲಾ ನನಗರ್ಥವಾಯಿತು... ಆದರೆ...ಆದರೆ..." ಹೃದಯದಲ್ಲಿದ್ದ ಗೊಂದಲಗಳ ತೀವ್ರತೆಯನ್ನು ತಡೆಯಲಾರದವನಂತೆ ಜೋರಾಗಿ ಕಲೆ ಕೊಡವಿದ.

ಅವನ ದೇಹ ಆವೇಶದಿಂದ ಕಂಪಿಸುತ್ತಿತ್ತು. ನನ್ನ ಕೈಯನ್ನು ಬಿಗಿಯಾಗಿ ಹಿಡಿದುಕೊಂಡ.

"ಲೋ ಸತ್ಯಾ, ನೀಲೂನ ತಾಯಿ ಯಾರೋ?" ಎಂದ ನನ್ನ ಕಣ್ಣಲ್ಲಿ ಕಣ್ಣಿಟ್ಟು.

ಅರ್ಥವಿಲ್ಲದ ಪ್ರಶ್ನೆ!

"ಸುಭದ್ರ."

"ಹಾಗಾದರೆ ನಾನು ನೀಲೂನ ತಂದೆ ಕಣೋ ಪುಟ್ಟಾ..."

ಆ ಕ್ಷಣದಲ್ಲಿ ಅವನ ಕಣ್ಣುಗಳು ತುಂಬಿದ ಕೊಳಗಳಾಗಿದ್ದವು. ಆಶ್ಚರ್ಯದಿಂದ ಅವನ ಕಡೆ ನೋಡಿದೆ.

ಅವನು ಬಂದಾಗಿನಿಂದ ನೀಲೂನ ವಿಷಯದಲ್ಲಿ ಅವನು ನಡೆದುಕೊಂಡ ರೀತಿ, ಕ್ಷಣಾರ್ಧದಲ್ಲಿ ನನ್ನ ಕಣ್ಣಮುಂದೆ ಸುಳಿದುಹೋಯಿತು.

ಕಾಶ್ಮೀರದಿಂದ ನೇರವಾಗಿ ಅವನನ್ನು ಇಲ್ಲಿಗೆ ಎಳೆದು ತಂದಿದ್ದರ ಹಿಂದಿದ್ದ ಸೆಳೆತ ಯಾವುದೆಂದು ಅರ್ಥವಾಗಿ ಮೂಕನಾಗಿ ನಿಂತೆ... ☆

**ಅತ ಬಾಸ್‌ಗೆ ಬಹಳ ಹೆದರುತ್ತಿದ್ದ. ಒಂದು ದಿನ ಅತನಿಗೆ ಕೆಂಡಾಮಂಡಲ ಜ್ವರ. ರಜೆ ಹಾಕಬೇಕೆಂದರೆ ಬಾಸ್‌ನ ಭಯ. ಗೊಣಗಾಡುತ್ತಿದ್ದಂತೆ ಅತನ ಪೇಚಾಟವನ್ನು ಕಂಡ ಸ್ನೇಹಿತ ಹೇಳಿದ: "ಹೆದರ್ಕೋಬ್ಯಾಡ. ಬಾಸ್ ಅನ್ನೋ ಬಾಸ್ ಅವತ್ತು ಹಿಂಗಾಂಗಿಲ್ಲ. ರಜಾಗಿಜಾ ಬ್ಯಾಡ. ಮನೀಗ್ಹೋಗಿ ಮಲಕೋ."**

**ಧೈರ್ಯದಿಂದ ಮನೆಗೆ ಬಂದು ನಿತ್ಯದಂತೆ ಕಿಟಕಿಯಲ್ಲಿ ಮುಖ ಹಾಕಿ ಹೆಂಡತಿಯನ್ನು ಕರೆಯುತ್ತಿದ್ದವನಿಗೆ ಕಾಣಿಸಿದ್ದು - ತನ್ನ ಬಾಸ್‌ನ ತೆಕ್ಕೆಯಲ್ಲಿ ತನ್ನಾಕೆ! ಅತ ಹಾಗೇ ಆಫೀಸಿಗೆ ಓಡಿದ. ಸ್ನೇಹಿತನಿಗೆ, "ಒಳ್ಳೆ ಮನಶಾ ಇದ್ದಿ ನೀನು. ನಾ ಅಕಿನ್ನ ಒದರಿದ್ರ ಬಾಸನ ಬ್ಯಾಸರಾಗ ಬೈಸಿಕೋ ಬೇಕಾಗಿತ್ತು," ಎಂದು ಕೈಯುತ್ತ ಕೆಲಸದಲ್ಲಿ ತೊಡಗಿದ.**

# ತಲೆಭಾರ

ಶಿವರಾಮ ಜೋಶಿ

ನಿತ್ಯವೂ ನನಗೆ ಒಂದಿಲ್ಲೊಮ್ಮೆ ಸರಕಾರ ನೆನಪಾಗುತ್ತಿರುತ್ತದೆ. ನಿಜ ಹೇಳಬೇಕೆಂದರೆ ಸರಕಾರ ನನ್ನ ಕೈಯಲ್ಲಿಯೇ ಇದೆ. ಈ ಸರಕಾರವನ್ನು ಉಸಿಕೊಳ್ಳುವುದಕ್ಕಾಗಿಯೇ ನಾನು ಇತ್ತೀಚೆಗೆ ಬಹಳ ಪರಿತಾಪ ಪಡು-ತ್ತಿದ್ದೇವೆ. ಶ್ರೀರಾಮ ಕಾಡಿಗೆ ಹೋಗಿ ತಪಸ್ಸನ್ನಾದರೂ ಆಚರಿಸಿದ್ದರೆ ಭಗವಾನ್ ಬುದ್ಧನಂತೆ ಜಗತ್ತಿಗೆ ಏನಾದರೂ ಒಂದು ವರ ನೀಡಿ ಹೋಗುತ್ತಿದ್ದ. ಆಗ ನಮ್ಮಂತಹರೆಲ್ಲ ಸುಖವಾಗಿ ರಾಮನು ಹೋದ ಮಾರ್ಗದಲ್ಲಿ ಹೋಗಿಬಿಡಬಹುದಾಗಿತ್ತು. ಆದರೆ ಶ್ರೀರಾಮ ಸೀತೆಯ ಕೊರಗಿನಿಂದ ಹದಿನಾಲ್ಕು ವರ್ಷ ಒದ್ದಾಡಿದ. ಹೆಂಡತಿಯ ಚಿಂತೆ ಹತ್ತಿರುವವನಿಗೆ ಬೇರೇನೂ ತಲೆಗೆ ಹತ್ತುವುದಿಲ್ಲ. ರಾಮನಿಗೂ ಹಾಗೆಯೇ ಆಯಿತು. ಸುಗ್ರೀವನ ಸಖ್ಯ ಬೆಳೆಸಿ ವಿನಾಕಾರಣ ವಾಲಿಯನ್ನು ಬಲಿತೆಗೆದುಕೊಂಡ.

ನನಗೀಗ ಒಂದೇ ಚಿಂತೆ. ಸರಕಾರ ಈಗ ನನಗೆ ಒಂದು ತಲೆಭಾರ. ಒಮ್ಮೊಮ್ಮೆ ಸರಕಾರಕ್ಕೂ ನನಗೂ ಯಾವ ಸಂಬಂಧವೂ ಇರುವುದಿಲ್ಲ. ಸರಕಾರದೊಂದಿಗಿನ ಕೊಂಡಿ ಹೇಗೋ ಕಳಚಿಕೊಂಡುಬಿಟ್ಟಿರುತ್ತದೆ. ಅಂತಹ ವೇಳೆ ನಾನೇನು ಮಾಡಬೇಕು ಎಂದು ವಿಚಾರ ಮಾಡುವುದಿಲ್ಲ. ಸರಕಾರದ ಸಂಬಂಧ ಎಲ್ಲಿ, ಹೇಗೆ ಹುಟ್ಟಿ ಮಾಯವಾಗುತ್ತದೆಂದು ಹೇಳಲು ಬರುವುದಿಲ್ಲ. ನಿಜ ಹೇಳಬೇಕೆಂದರೆ ಸರಕಾರಕ್ಕೂ ನನಗೂ ಸಂಬಂಧವಿದೆ. ಅದೊಂದು ತಂತು. ಅದು ಆಡಿಸಿದಂತೆ ನಾನು ಆಡುತ್ತೇನೆ. ಆಗ ಸರಕಾರದ ಕೈ ಮೇಲಾಗುತ್ತದೆ. ನಾನು ಆಗ ಸಂಪೂರ್ಣ ಸರಕಾರದ ಸ್ವಾಧೀನ. ಆಗ ನಾನು ಎಲ್ಲಿ ಹೋದರೂ ಪಾಸ್‌ಪೋರ್ಟ್ ಹೊಂದಿದ ವಿದೇಶೀಯನಂತೆ ನಿರ್ಭೀತ. ನನ್ನ ಹಕ್ಕು ಬಾಧ್ಯತೆ, ಸ್ವಾತಂತ್ರ್ಯ, ಕರ್ತವ್ಯ ಎಲ್ಲಾ ಜಾಗೃತಗೊಂಡು ಏನಾದರೂ ಮಾಡಿಬಿಡಲೆ ಎಂದು ಚೇತನ ಉಕ್ಕಿ ಹರಿಯುತ್ತದೆ. ಅಂತಹ ಸಮಯದಲ್ಲಿ ನನಗೆ ಯಾವ ಕಾಳಜಿಯೂ ಇರುವುದಿಲ್ಲ. ಏನನ್ನಾದರೂ ಮಾಡಿಬಿಡುತ್ತೇನೆ. ಏಕೆಂದರೆ ಎಲ್ಲ ಕಾಳಜಿಯನ್ನು ಸರಕಾರ ವಹಿಸಿಕೊಂಡುಬಿಟ್ಟಿರುತ್ತದೆ. ಸರಕಾರ ಒಮ್ಮೆ ಇಲ್ಲವಾಯಿತೆಂದರೆ ಅರಾಜಕತೆ ಸುರುವು

ಆದಂತೆಯೆ. ಅರಾಜಕತೆಯು ಹಿಂಸೆ ತಾಳಲಾಗದೆ ರಾಮನಂತೆ ಹದಿನಾಲ್ಕು ವರ್ಷ ವನವಾಸಕ್ಕೆ ತೆರಳಿ ಶಬರಿ ಕೊಟ್ಟ ಹಣ್ಣು ತಿಂದು ಇರಬೇಕಾಗುತ್ತದೆ ಅಥವಾ ಕುಚೇಲನಂತೆ ಕೃಷ್ಣನ ಮನೆಯ ಬಾಗಿಲು ಕಾಯಬೇಕಾಗುತ್ತದೆ. ಎರಡಕ್ಕೂ ಹೊರತಾದರೆ 'ಭಿಕ್ಷಾಂದೇಹಿ' ಎಂದು ಕೈ ಚಾಚಬೇಕಾಗುತ್ತದೆ. ಈ ಮೂರೂ ಅವಸ್ಥೆಗಳಿಗೂ ಸರಕಾರ ಅಡ್ಡ ಬರುವುದಿಲ್ಲ. ನಮ್ಮ ಸರಕಾರ ತಟಸ್ಥನೀತಿ ಅನುಸರಿಸುತ್ತಿದೆಯೆಂದು ಯಾರಿಗೆ ಗೊತ್ತಿಲ್ಲ? ಇನ್ನೊಂದು ದೇಶದ ಆಂತರಿಕ ಹೋರಾಟಗಳಿಗೆ ನಮ್ಮ ಸರಕಾರ ಎಂದೂ ಬದ್ಧವಾಗಿಲ್ಲ. ಚೀನ ದೇಶದಲ್ಲಿ ಎಷ್ಟು ಜನ ಉಪವಾಸ ಬಿದ್ದರೆ ನಮ್ಮ ಸರಕಾರಕ್ಕೇನು ತೊಂದರೆ?

ನಾನೊಮ್ಮೆ ಪ್ರಯಾಣ ಮಾಡಬೇಕಾದ ಪ್ರಸಂಗ ಬಂದಿತು. ಆಗ ಸರಕಾರ ನನ್ನ ಬಳಿಯಲ್ಲಿತ್ತು. ಸರಕಾರವಿಲ್ಲದೆ ಪ್ರಯಾಣ ಪ್ರಯಾಣವಲ್ಲ. ಮಾಡುವುದೇನು? ನನ್ನ ಬಳಿ ಇದ್ದ ಸರಕಾರಕ್ಕೆ ಇದ್ದಕ್ಕಿದ್ದಂತೆ ಹೊರಗೆ ಬೆಲೆ ಹೆಚ್ಚಾಗಿಬಿಟ್ಟಿತ್ತು. ತನ್ನಷ್ಟಕ್ಕೆ ತಾನೇ ಗೌರವ ಹೆಚ್ಚಾಗಿದೆಯೆಂದರೆ ನನ್ನ ಸರಕಾರ ಅಡ್ಡಿ ಆತಂಕವಿಲ್ಲದೆ ಹೊರಗೆ ಹೋಗಿಬಿಡುತ್ತದೆ. ಆಗ ನನಗೆ ಮಾತ್ರ ತಲೆಭಾರ. ದಿನಬೆಳಗಾಗುವುದರಲ್ಲಿ ಬಸ್ ಪ್ರಯಾಣದ ದರ ಒಂದಕ್ಕರ್ಧದಷ್ಟು ಹೆಚ್ಚಿ ಚಿಂತೆಗೀಡಾಗಿತ್ತು. ದಮ್ಮಯ್ಯ ಅಂದರೂ ಭಾರ ತಪ್ಪುವಂತಿಲ್ಲ. ಒಂದಕ್ಕೆರಡು ತೆತ್ತು ಪ್ರಯಾಣ ಮಾಡಬೇಕಾಯಿತು. ವಿಚಾರ ಮಾಡಿದಾಗ ಈ ಎಲ್ಲ ಸರಕಾರಿ ತೊಂದರೆಗಳಿಗೆ ಮೂಲ ಕಾರಣ ನಾನೇ ಎಂದು ತಿಳಿದುಹೋಯಿತು. ಆಗ ನಾನು 'ಏಕಾದರೂ ಪ್ರಯಾಣ? ಅಂಚೆ ಕಚೇರಿಗೆ ಹೋಗಿ ಒಂದು ಪತ್ರ ಹಾಕಿಬಿಟ್ಟರಾಯಿತಲ್ಲ' ಎಂದು ಕೊಂಡು ಪತ್ರ ಹಾಕಲು ಹೋಗುತ್ತೇನೆ. ಹಾಗೆ ಎಷ್ಟೋ ಸಲ ಬೇರೆ ಕಾರಣಗಳಿಗೂ ಹೋಗಿದ್ದೇನೆ. ಪ್ರಯಾಣವಿಲ್ಲದೆ ಮನುಷ್ಯ ಬದುಕಬಹುದು. ಕಾಗದಪತ್ರಗಳಿಲ್ಲದೆ ಬದುಕಲು ಸಾಧ್ಯವಿಲ್ಲ. ಯಾರಾದರೂ ಒಂದು ಪತ್ರ ಹಾಕಿದರೆ ಅದಕ್ಕೆ ಉತ್ತರವಾದರೂ ಬೇಡವೆ ? ಅದೂ ನನಗೆ ತಲೆಭಾರ. ಬರೆಯುವವರೇನೊ ಬರೆದುಬಿಡುತ್ತಾರೆ. ನನಗೆ ಹೇಗೆ ಬರೆಯಬೇಕೋ ತಿಳಿಯುವುದಿಲ್ಲ. ಅಲ್ಲಿಯೂ ಸರಕಾರದತ್ತ ನನ್ನ ಲಕ್ಷ್ಯ ಹೊರಳುತ್ತದೆ. ಪತ್ರಕ್ಕೆ ಹದಿನೈದರಂತೆ ತುಟ್ಟಿ. ಪತ್ರ ಸಮಾಚಾರ ಬರೆದು ತಾಪ ಬಹಳವಾಗಿದೆ. ಕಾರಣ ಹತ್ತಾರು ಪತ್ರಗಳಿಗೆ ಮರು ಜವಾಬು ಇಲ್ಲವೇ ಇಲ್ಲ. ನನ್ನ ಸರಕಾರಕ್ಕೆ ಉಂಟಾದ ನಷ್ಟವನ್ನು ತುಂಬಿಕೊಡಲು ಭಾರತಕ್ಕೆ ಅಮೇರಿಕ, ರಶಿಯಗಳು ನೆರವು ನೀಡುವಂತೆ ನನಗೂ ನೆರವು ಕೊಡುವವರಿದ್ದಾರೆ ನಿಜ. ಐವತ್ತರಿಂದ ನೂರರ ತನಕ ಅಂಚೆ ವೆಚ್ಚಕ್ಕಾಗಿಯೇ ನೆರವು ನೀಡಿದವರಿದ್ದಾರೆಂದು ನಾನು ಹೇಳಿದರೆ ಯಾರೂ ನಂಬಲಿಕ್ಕಿಲ್ಲ. ಅದಕ್ಕೆ ನನ್ನ ಬಳಿ ದಾಖಲೆ ಪತ್ರಗಳಿವೆ. ನಾನಾದರೂ ಅದನ್ನು ಅನ್ಯಕಾರಣಗಳಿಗೆ ವಿನಿಯೋಗ ಮಾಡದಂತೆ ಮುಡಿಪಾಗಿರಿಸಿದ್ದೇನೆ. ಆಂಧ್ರ ಪ್ರದೇಶದಲ್ಲಿ ಚಂಡಮಾರುತವೆದ್ದಂತೆ ನನ್ನ ಜೀವನದಲ್ಲಿ ಪ್ರವಾಹವೆದ್ದು ಏನಿದ್ದುದೆಲ್ಲವೂ ಕೊಚ್ಚಿಕೊಂಡುಹೋದಾಗ ಶ್ರೀ ವೆಂಕಟರಮಣನ ಮುಡಿಪಿನಂತೆ ಅದು ನನ್ನನ್ನು ಕಾಯಲೆಂದು ಭದ್ರವಾಗಿರಿಸಿದ್ದೇನೆ. ಕಾಯುವ ಕೈ ಯಾವಾಗಲೂ ಕೊಡುತ್ತದೆ. ಉಳಿಸುವ ಕೈ ಕಾಪಾಡುತ್ತದೆ. ನಾನು ಈ ಇಬ್ಬರಿಗೂ ಪರಾಧೀನ. ಭಗವಂತ ಭಕ್ತಪರಾಧೀನನಂತೆ. ನನ್ನಂತಹರ ಪಾಡೇನು?

ಇತ್ತೀಚೆಗೆ ನಾನು ಸರಕಾರಿ ಸುದ್ದಿಗಳನ್ನು ಬಹಳವಾಗಿ ಕೇಳುತ್ತಿರುತ್ತೇನೆ. ಅವೆಲ್ಲವೂ ನನ್ನ ಸರಕಾರಕ್ಕೆ ಸಂಬಂಧಿಸಿದವುಗಳೇ ಆಗಿರುತ್ತವೆ. ಆಗ ನನಗನಿಸುತ್ತದೆ, ನನಗೂ ಸರಕಾರಕ್ಕೂ ಅಷ್ಟೇನೂ ಅಂತರವಿಲ್ಲ ಎಂದು. ಎಷ್ಟಾದರೂ ನನ್ನ ಸರಕಾರ ಬಹಳ ಚಿಕ್ಕದು. ಸಾಮಂತ ರಾಜರುಗಳಂತೆ ಆಗಾಗ ಕಪ್ಪಕಾಣಿಕೆ ಕೊಡುತ್ತಿರಬೇಕು. ಅದು ಅನಿವಾರ್ಯ. ಚರಣಸಿಂಗರ ಮುಂಗಡ ಪತ್ರ ನೋಡಿದ ನಂತರ ನನಗೆ ಅನಿಸಿಹೋಗಿದೆ, ಹೆಜ್ಜೆ ಹೆಜ್ಜೆಗೂ ನನ್ನ ಸರಕಾರ ಕರಭಾರ ಹೊರಬೇಕಿದೆ. ಚರಣಸಿಂಗರ ಸರಕಾರದಂತೆ ನನ್ನ ಸರಕಾರಕ್ಕೂ ಒಂದು ಮುಂಗಡ ಪತ್ರವನ್ನು ತಯಾರಿಸಿಬಿಟ್ಟರೆ ಕೊರತೆಯ ಮೂಲಗಳೇ ಹರಿದು ತಿನ್ನುತ್ತವೆ. ಲೋಕಮಾನ್ಯರು 'ಸಂಪೂರ್ಣ

ಸ್ವರಾಜ್ಯ' ಎಂದು ಗರ್ಜಿಸಿ ಸ್ವತಂತ್ರ ಪರಂಪರೆ ಬಿಟ್ಟು ಹೋದನಂತರ ಭಾರತ ಸ್ವತಂತ್ರವಾಗಿ ಮೂವತ್ತು ವರ್ಷ ಕಳೆದಿವೆ. ಆ ಸ್ವರಾಜ್ಯ ಎಲ್ಲಿ ಹುಟ್ಟಿ ಎಲ್ಲಿ ಮರೆಯಾಗಿದೆಯೋ ತಿಳಿಯದಂತಾಗಿದೆ. ಮೂಡುವಲ್ಲಿ, ಮುಳುಗುವಲ್ಲಿ ಇನ್ನೂ ಅವರದೇ ಸರಕಾರ ಇದೆ.

ಏನೇ ಆಗಲಿ, ನಮ್ಮ ಸರಕಾರ ಸಮತಾವಾದವನ್ನು ಸಾಧಿಸಿಬಿಟ್ಟಿದೆ. ಪೇಟೆ, ಕೋರ್ಟು ಕಚೇರಿ, ಬ್ಯಾಂಕು, ತಿಜೋರಿ ಎಲ್ಲಿ ಹೋದರೂ ನೀವು ಅದನ್ನು ಕಾಣಬಹುದು. ನನ್ನ ಮುಂಗಡ ಪತ್ರಕ್ಕೆ ಇದನ್ನೆಲ್ಲ ಲೆಕ್ಕ ಹಚ್ಚಿಬಿಟ್ಟರೆ ನಾನು ನಕ್ಸಲೀಯನೇ ಆಗಿಬಿಡಬೇಕಾಗುತ್ತದೆ. ಅಂದ ಹಾಗೆ ನನ್ನ ಸರಕಾರ ಪಶ್ಚಿಮ ಬಂಗಾಲದ ವರೆಗೂ ಕೈ ಚಾಚಿದೆ. ಪಶ್ಚಿಮ ಬಂಗಾಲದಲ್ಲಿ ನನಗೆ ನೆರವು ನೀಡುವವರು ಇದ್ದಾರೆಂದರೆ ನಿಮಗೆ ಬಂಗಾಲಿಗಳ ಬಗೆಗೆ ಗೌರವ ಹುಟ್ಟುತ್ತದೆ. ಇಂತಹ ಬಂಗಾಲಿಬಾಬುಗಳಿರುವಲ್ಲಿ ನಕ್ಸಲೀಯರು ಹುಟ್ಟಲು ಸಾಧ್ಯವೇ ಎಂದು ನನಗನಿಸುತ್ತದೆ. ನನ್ನ ಬಂಗಾಲಿ 'ದಾದಾ'ನಿಗೆ ಪತ್ರ ಬರೆದಾಗಲೆಲ್ಲ ನಾನು ಬಂಗಾಲಿಗಳನ್ನು ಬಹಳವಾಗಿ ಮೆಚ್ಚಿಕೊಂಡು ಬರೆಯುತ್ತೇನೆ. ರವೀಂದ್ರನಾಥ ಠಾಕೂರರಿಂದ ಮೊದಲು ಮಾಡಿ ಅರವಿಂದರ ತನಕ, ಬಂಕಿಮಚಂದ್ರರಿಂದ ಶರಚ್ಚಂದ್ರರ ತನಕ, ಪರಮಹಂಸರಿಂದ ಎಮ್. ಎನ್. ರಾಯರವರೆಗೆ ಸ್ಮರಿಸುತ್ತೇನೆ. ನಿಜ ಹೇಳಬೇಕೆಂದರೆ ನಾನು ಮೆಚ್ಚಿದ್ದು ಶರಚ್ಚಂದ್ರರನ್ನು ಮಾತ್ರ. ಅದು ಈಗ ಇಪ್ಪತ್ತೈದು ವರ್ಷಗಳಿಗೆ ಮೊದಲು. ನಾನು ದಾದಾನಿಗೆ ಈ ಮಾತು ಹೇಳಿದಾಗ ದಾದಾ ಪಡುವ ಹೆಮ್ಮೆ ಏನೆಂದು ನನಗೆ ಅರ್ಥವಾಗಿಲ್ಲ. ಶರಚ್ಚಂದ್ರನ 'ದಾದಾ'ನನ್ನು ನಾನು ಆಗ ಕಂಡಿದ್ದೇನೆ.

ಸರಕಾರದ ಸಮತಾವಾದದ ಜೊಂಡಿನಲ್ಲಿ ನನ್ನಂತಹರು ಸಿಕ್ಕುಬಿದ್ದು ಒದ್ದಾಡುತ್ತಾರೆ. ಬಲವಾನರು ದುರ್ಯೋಧನನಂತೆ ಜಲಸಮಾಧಿಯಿಂದ ಎದ್ದು ಬರುತ್ತಾರೆ. ಸಮಾಧಿಯಲ್ಲಿರುವವರಿಗೆ ಹೊರ ಜಗತ್ತಿನ ತಾಪವಿರುವುದೇ ಇಲ್ಲವಂತೆ. ಮಾರ್ಕ್ಸ್ ಅಥವಾ ಲೆನಿನ್ನರ ಅರ್ಥಶಾಸ್ತ್ರಗಳನ್ನು ಓದಿ ತಿಳಿದುಕೊಂಡಾದರೂ ನನ್ನ ಮುಂಗಡ ಪತ್ರವನ್ನು ತಯಾರಿಸಬೇಕು. ಏಂಗೆಲ್ಸನ ಅರ್ಥತತ್ತ್ವವನ್ನು ಅರೆದು ನುಂಗಬೇಕು. ಅರ್ಥತಂತ್ರ ಹೂಡಿ ಚಾಣಕ್ಯನಂತೆ ಹೊಸದೊಂದು ರಾಜ್ಯ ಕಟ್ಟಬೇಕು. ಆಗ ಸಮಾಧಿಯಲ್ಲಿರುವವರಿಗೆ ಬಿಸಿ ತಟ್ಟುತ್ತದೆ.

ಈಗ ನಮ್ಮ ದೇಶದಲ್ಲಿ ಚಾಣಕ್ಯರಿಗೇನೂ ಕಡಿಮೆಯಿಲ್ಲ. ಎಂಟು ಲಕ್ಷಕ್ಕೆ ಕೊಡಬೇಕಾದುದನ್ನು ಹದಿನೆಂಟು ಲಕ್ಷಗಳವರೆಗೂ ಉಳಿಸಿಕೊಂಡು ಹತ್ತರ ಕೊರತೆಯನ್ನು ಇಪ್ಪತ್ತಕ್ಕೆ ನೀಗಿಸಿ ಮತ್ತೆ ಹದಿನೆಂಟಕ್ಕೇ ನಿಲ್ಲುತ್ತಾರೆ. ಇಂತಹ ಚಾಣಾಕ್ಷ ಅರ್ಥತಂತ್ರ ಎಂತಹ ಸಾಮ್ರಾಜ್ಯವನ್ನಾಳಿದರೂ ಬುಡಮೇಲು ಮಾಡುತ್ತದೆ. ಆದರೆ ಸರಕಾರಕ್ಕೆ ಕೊಡಬೇಕಾದ್ದನ್ನು ಕೊಟ್ಟುಬಿಟ್ಟರೆ ಅದು ಸುಮ್ಮನಿರುತ್ತದೆ. ಸರಕಾರಕ್ಕೆ ತಲೆಯಿದೆಯೆಂದೆ ಅದು ಬದುಕಿದೆ. ನಮಗೆ ಬೇಕಾದ ಎಲ್ಲಕ್ಕೂ ಅದು ಸುಂಕ ಹೇರಿದೆ. ಆದರೆ ನನ್ನ ಸರಕಾರ ಎಲ್ಲ ಸುಂಕವನ್ನು ಸಹಿಸುವಷ್ಟು ಬಲಶಾಲಿಯಾಗಿಲ್ಲ. ನನ್ನ ಸರಕಾರ ವಿದೇಶಿ ನೆರವಿಗಾಗಿ ವಿದೇಶಾಂಗ ಕಚೇರಿ ತೆರೆಯದೆ ಗೃಹಶಾಖೆಯ ಮಂತ್ರಿಗಳಿಗೆ ಕೊರತೆಯ ಬಜೆಟ್ ತಯಾರು ಮಾಡಲು ಹೇಳಿಬಿಟ್ಟಿದೆ. ನಮ್ಮ ದೇಶಕ್ಕೆ ಇಂದು ಭಾರಿ ಅಣುಶಕ್ತಿ ಉತ್ಪಾದನೆಗಾಗಿ ಇಂಧನದ ಆವಶ್ಯಕತೆಯಿದೆ. ಅಮೇರಿಕಕ್ಕೆ ಕೇಳಿದ್ದಾಗಿದೆ. ಅದು ವಾಗ್ದಾನವಿತ್ತುದೂ ಆಗಿದೆ. ಆದರೆ ಬೇಗುದಿ ಬಿಟ್ಟಿಲ್ಲ. ಅತ್ತ ಪಾಕಿಸ್ತಾನ ಅಣುಬಾಂಬು ತಯಾರಿಸುತ್ತಿದೆಯಂತೆ. ಭಾರತಕ್ಕೆ ತಲೆನೋವು. ಅದು ನಿಜ. ಆದರೆ ಸಣ್ಣ ಪ್ರಮಾಣದಲ್ಲಿ ಚಿಂತಿಸಿದಾಗ ಇದೇನೂ ದೊಡ್ಡ ಸಂಗತಿಯಲ್ಲ. ನಮ್ಮ ದೇಶದಲ್ಲಿಯ ಅನೇಕ ಸರಕಾರಗಳಿಗೆ ಸರಕಾರಿ ಯಂತ್ರದ ಉರುವಲಿಗಾಗಿ ಇಂಧನ ಒದಗಿಸುವುದೂ ದುಸ್ತರವಾಗಿದೆ. ಎಷ್ಟೋ ಸರಕಾರಗಳು ಮುರಿದುಬಿದ್ದಿವೆ. ಎಷ್ಟೋ ಕುಂಟುತ್ತ ನಡೆದಿವೆ. ಮತ್ತೆ ಕೆಲವು ಪರಭಾರೆಯಿಂದ ನಡೆಯುತ್ತಿವೆ. ನಮ್ಮ ದೇಶದ ಸರಕಾರ ಯಾವ ತಾರತಮ್ಯವೂ ಇಲ್ಲದೆ ಅಡುಗೆಮನೆಯವರೆಗೂ ನುಗ್ಗಿ ತನ್ನ ಸಮತಾವಾದವನ್ನು ಅಳವಡಿಸಿಬಿಟ್ಟಿದೆ. ಉದಾರತನೆಗೆ ನೋಡಿ, ಉಪ್ಪು.

ಮೂರಂತಸ್ತಿನ ಮಹಡಿಮನೆಯಲ್ಲೂ ಅಷ್ಟೆ, ಮುರುಕು ಗುಡಿಸಿಲಿನಲ್ಲಿಯೂ ಅಷ್ಟೆ. ಪೇಟೆಯಲ್ಲಿ ಅದಕ್ಕೆ ಒಂದೇ ಧಾರಣೆ.

ನಮಗೂ ಸರಕಾರಕ್ಕೂ ಸಂಬಂಧವಿದೆಯೆಂದರೆ ಸರಕಾರಕ್ಕೆ ನನ್ನ ಮೊರೆ ಮುಟ್ಟಿಸಬೇಕು. ನನ್ನ ಬಜೆಟ್ ಸರಕಾರವನ್ನು ತಲುಪಬೇಕು. ನನ್ನ ಕೊರತೆಗೆ ಸರಕಾರ ನೆರವು ನೀಡುವುದೋ ಪರಿಹಾರ ಕೊಡುವುದೋ ಕಾದು ನೋಡಬೇಕು. ನನ್ನ ಚಾಣಕ್ಯ ಹೊರಬರುವ ತನಕ ನಾನು ಕಾಯುತ್ತೇನೆ. ಆ ಕಾಲ ಬಂದೇ ಬರುತ್ತದೆ ಎಂದು ನನಗೆ ಶತಃಸಿದ್ಧ, ನೂರಕ್ಕೆ ನೂರು ಪೈಸೆ ಎಷ್ಟು ಖಾತ್ರಿ.

ಅತ್ತ ಸರಕಾರ ಕಾಯುತ್ತಿರುವಂತೆ ಇತ್ತ ನಾನೂ ಕಾಯುತ್ತೇನೆ. ನನ್ನದೂ ಒಂದು ಮುಂಗಡ ಪತ್ರ ಸಿದ್ಧಪಡಿಸಿ ಪಾರ್ಲಿಮೆಂಟಿಗೆ ರವಾನಿಸಿ ಬಿಡುತ್ತೇನೆ. ಯಾವುದಕ್ಕೂ ಕಾಲ ಬರಲಿ. ಅಲ್ಲಿಯ ತನಕ ನನಗೂ ಸರಕಾರಕ್ಕೂ ಯಾವ ಸಂಬಂಧವಿರುವುದಿಲ್ಲ. ನನ್ನಿಂದ ಸರಕಾರಕ್ಕೆ ಯಾವ ತೊಂದರೆ ಕೂಡ ಇಲ್ಲವೆಂದ ಮೇಲೆ ಸರಕಾರಕ್ಕೆ ನನ್ನಂತಹವರಿಂದ ಉಂಟಾಗುವ ನಷ್ಟದ ಪ್ರಶ್ನೆಯಂತೂ ದೂರವೇ ಉಳಿಯಿತು. ಹಾಗೆಂದು ಸರಕಾರ ನನ್ನನ್ನು ಅಥವಾ ನನ್ನಂತಹರನ್ನು ಹುಡುಕಿ ಶಹಭಾಸಗಿರಿ ಕೊಡುವುದು ಅಷ್ಟರಲ್ಲೇ ಇದೆ.

ಹಾಗೆ ವಿಚಾರ ಮಾಡಿದಲ್ಲಿ ಸರಕಾರಿ ಲೆಕ್ಕದಲ್ಲಿ ನಾನು ಬದುಕಿದ್ದೇನೆಯೊ ಸತ್ತಿದ್ದೇನೆಯೊ ಗೊತ್ತೇ ಆಗುವುದಿಲ್ಲ. ಇದ್ದೊಂದು ಸಂಬಂಧ ಐದು ವರ್ಷಗಳಿಗೊಮ್ಮೆ ಮರುಕಳಿಸುತ್ತದೆ. ನೀರ ಮೇಲಿನ ಗುಳ್ಳೆಯಂತೆ ಹುಟ್ಟಿದಾಕ್ಷಣ ಒಡೆದುಹೋಗುತ್ತದೆ. ಅದು ಮತದಾನದ ಸಮಯ. ಹತ್ತು ವರ್ಷಗಳ ಹಿಂದೆ ಹುಟ್ಟಿದ್ದೆ, ಮರುಕ್ಷಣ ಸತ್ತು ಹೋಗಿದ್ದೆ. ಆಗ ಅದರ ಅರಿವು ನನಗಿರಲಿಲ್ಲ. ಕ್ರಮೇಣ ಬೆಳಕು ಬೀಳತೊಡಗಿದೆ. ಈಗಂತೂ ನಾನು ಜೀವನ್ಮೃತ. ಸರಕಾರಕ್ಕೆ ನಾನು ಇದ್ದರೂ ಅಷ್ಟೆ, ಇಲ್ಲದಿದ್ದರೂ ಅಷ್ಟೆ. ಸರಕಾರ ಮಾತ್ರ ನನಗೆ ತಲೆಭಾರವಾಗಿ ಪರಿಣಮಿಸಿದೆ. 'ಅನ್ಯಥಾಶರಣಂ ನಾಸ್ತಿ' ಎಂದು ನಾನು ನನ್ನ ಸರಕಾರಕ್ಕೇ ಸಂಪೂರ್ಣ ಶರಣುಹೋಗಿದ್ದೇನೆ. ಉಳಿದವರ ಮಾತು ಏನೋ ನಾನು ಹೇಳಲಾರೆ.



ಮಗನಿಗೋ ನಾಟಕದ ಹುಚ್ಚು. ತಂದೆ ದೊಡ್ಡ ಪೋಲೀಸು ಅಧಿಕಾರಿ. ಮಗ ಹೀಗೆ ಬಣ್ಣದ ಬದುಕಿನತ್ತ ಸಾಗುತ್ತಿರುವುದು ಅವರಿಗೆ ಸಹಿಸದ ವಿಷಯವಾಗಿಬಿಟ್ಟಿತ್ತು. ಓದಿನಲ್ಲಿ ಆಸಕ್ತಿ ಇರಲಿಲ್ಲವೆಂದಲ್ಲ, ಇತ್ತು. ಆದರೆ ರಂಗಭೂಮಿಯ ಬಗ್ಗೆ ಓದಿಗಿಂತ ನೂರ್ಮಡಿ ಆಸಕ್ತಿ. ತಂದೆಯ ಮನಸ್ಸಿಗೆ ವಿರುದ್ಧವಾಗಿ ತಾನು ನಡೆದುಕೊಳ್ಳಬಾರದು, ಅದು ಒಳ್ಳೆಯದಲ್ಲ ಎಂಬ ವಿವೇಕ ಮಗನಿಗಿದ್ದುದರಿಂದ ತಂದೆಯ ಅಪ್ಪಣೆ ಪಡೆದೇ ತಾನು ನಟನಾಗಬೇಕೆಂಬ ಸಂಕಲ್ಪ ಮಾಡಿದ. ಬಹಳ ವಿನಯದಿಂದ ರಂಗಭೂಮಿಯ ಬಗ್ಗೆ ತನ್ನಲ್ಲಿ ಅದರ ಬಗೆಗಿರುವ ಒಲವಿನ ಬಗ್ಗೆ ತಿಳಿಸಿ ಹೇಳಿದ. ತಂದೆಯ ಅಪ್ಪಣೆ ಸಿಕ್ಕೇಬಿಟ್ಟಿತು! ಈಗ ಮಗನಲ್ಲಿ ಎಂಥ ಬದಲಾವಣೆ! ಮೊದಲು ಒಂದೊಂದು ಪರೀಕ್ಷೆಗೆ ಮೂರು ಮೂರು ವರ್ಷ ಓದುತ್ತಿದ್ದವ-ತಂದೆಯ ಅಪ್ಪಣೆ ಸಿಕ್ಕನಂತರ ಎಲ್ಲ ಪರೀಕ್ಷೆಗಳನ್ನೂ ಒಂದೊಂದೇ ಸಲಕ್ಕೆ-ಅದೂ ಪ್ರಥಮ ವರ್ಗದಲ್ಲಿ-ಪಾಸು ಮಾಡತೊಡಗಿದ.

ಮುಂದೆ ಕನ್ನಡ ಹವ್ಯಾಸಿ ರಂಗಭೂಮಿಯಲ್ಲಿ ದೊಡ್ಡ ನಟನಾಗಿ ಹೆಸರು ಗಳಿಸಿದ ಎಂ. ಎಲ್. ಶ್ರೀನಿವಾಸ ಶಾಸ್ತ್ರಿಗಳೇ ಆ ಹುಡುಗ.

ಕಾಡುಗಳಲ್ಲಿ ದೊರೆತ
ಶ್ರೀಮಂತ ಹೃದಯಿಗಳ ಕಥೆ

# ಕತ್ತಲಲ್ಲಿ ಕಂಡ ಬೆಳಕು

**ರೇಣುಕ**

ಎರಡು ವರ್ಷಗಳ ಹಿಂದೆ ಬಿಳಿಗಿರಿರಂಗನ ಬೆಟ್ಟಕ್ಕೆ ಹೋಗಿದ್ದೆ. ಬೆಟ್ಟದಿಂದ ಅನತಿದೂರದಲ್ಲಿ ಕಾಡಿನ ನಡುವೆ ಸ್ವಾಮಿ ನಿರ್ಮಲಾನಂದರ ಪ್ರಶಾಂತವಾದ ಆಶ್ರಮವಿದೆ. ನಾನು ಅಲ್ಲಿ ನೆಲಸಿದ್ದ ಅಲ್ಪಾವಧಿಯಲ್ಲಿ ಪ್ರತಿದಿನ ಸಂಜೆ ಆಶ್ರಮಕ್ಕೆ ಹೋಗಿ ಕೆಲವು ತಾಸುಗಳನ್ನು ಕಳೆಯುತ್ತಿದ್ದೆ. ಆಶ್ರಮದಲ್ಲಿ ಸ್ವಾಮಿಗಳು ಸೋಲಿಗರ ಹುಡುಗನೊಬ್ಬನೊಂದಿಗೆ ವಾಸಿಸುತ್ತಿದ್ದರು.

ಸಂಜೆಯ ಸಮಯದಲ್ಲಿ ಸುತ್ತಮುತ್ತಲ ಕಾಡಿನಲ್ಲಿ ವಾಸಿಸುವ ಆದಿವಾಸಿ ಸೋಲಿಗರ ಹೆಂಗಸರು-ಮಕ್ಕಳು ಆಶ್ರಮದ ಆವರಣದಲ್ಲಿ ಸೇರುತ್ತಿದ್ದರು. ಸ್ವಾಮಿಗಳು ಅವರಿಂದ ಹಾಡುಗಳನ್ನು ಹಾಡಿಸುತ್ತಿದ್ದರು. ಹಾಡುವ ಕಾರ್ಯಕ್ರಮದ ನಂತರ ಸ್ವಾಮಿಗಳು ಪ್ರತಿಯೊಬ್ಬರಿಗೂ ಒಂದೊಂದು ಹಿಡಿ ಹುರಿಗಡಲೆಯನ್ನು ಸ್ವಹಸ್ತದಿಂದ ಕೊಡುತ್ತಿದ್ದರು ಇದು ಅವರ ಅನುದಿನದ ದಿನಚರಿಗಳಲ್ಲೊಂದು.

ಸೋಲಿಗರ ಹಾಡುಗಳು ಕೇಳಲು ಇಂಪಾಗಿರುತ್ತಿದ್ದವು. ವಿಚಿತ್ರ ಗತಿಯಲ್ಲಿ ಹಾಡುತ್ತಿದ್ದ ಅವರ ಹಾಡುಗಳಲ್ಲಿ ಆ ನೆಲದ ಮಣ್ಣಿನ ವಾಸನೆಯ ಸೊಗಡಿದ್ದು ಕೇಳುವವರಿಗೆ ಮತ್ತು ಬರುವಂತಾಗುತ್ತಿತ್ತು. ಆ ದಿನಗಳಲ್ಲಿ ಸೋಲಿಗರ ಹಾಡುಗಳನ್ನು ಸಂಗ್ರಹಿಸುವ ಹಂಬಲ ನನ್ನ ಮನಸ್ಸಿನಲ್ಲಿ ತೀವ್ರವಾಗಿತ್ತು. ಅದಕ್ಕೆ ಸ್ವಾಮಿ ನಿರ್ಮಲಾನಂದರ ಪ್ರೋತ್ಸಾಹವೂ ದೊರೆಯಿತು.

ಪ್ರತಿದಿನ ಬಿಳಿಗಿರಿ ಗುಡ್ಡಗಳ ಗುಡ್ಡಗಾಡಿನ ದಟ್ಟಡವಿಗಳಲ್ಲಿನ ಸೋಲಿಗರ ಪೋಡುಗಳನ್ನು ಹುಡುಕಿಕೊಂಡು ಹೋಗುತ್ತಿದ್ದೆ. ಸೋಲಿಗರು ಪಟ್ಟಣಿಗರನ್ನು ಕಂಡರೆ ಸುಲಭವಾಗಿ ಅವರೊಂದಿಗೆ ಬೆರೆಯುತ್ತಿರಲಿಲ್ಲ. ಸಂಕೋಚ ಪ್ರವೃತ್ತಿಯವರಾದ ಅವರೊಡನೆ ನಾನೇ ಬೆರೆಯಲು ಪ್ರಯತ್ನಿಸುತ್ತಿದ್ದೆ. ಮೊದಮೊದಲು ನನ್ನನ್ನು ಕಂಡೊಡನೆ ಸೋಲಿಗರ ಹೆಂಗಸರು-ಮಕ್ಕಳು ಓಡಿಹೋಗಿ ಪೊದೆಗಳ ಹಿಂದೆ ಅವಿತುಕೊಳ್ಳುತ್ತಿದ್ದರು. ಸೋಲಿಗ ಗಂಡಸರು ಮಾಡುತ್ತಿದ್ದ ಕೆಲಸವನ್ನು ಮರೆತು ಗಾಬರಿಯಿಂದ ನನ್ನೆಡೆಗೇ ಕಣ್ಣುಗಳನ್ನು ಅರಳಿಸಿಕೊಂಡು ನೋಡುತ್ತಿದ್ದರು.

ನನ್ನ ಚೀಲದಲ್ಲಿ ಸೋಲಿಗರಿಗೆಂದು

ರುತ್ತಿದ್ದ ಹೊಗೆಸೊಪ್ಪು, ಬೀಡಿ, ಪೆಪ್ಪರ್ ಮೆಂಟುಗಳನ್ನು ಹೊರಗೆ ತೆಗೆದು ಎಲ್ಲರಿಗೂ ಹಂಚುತ್ತಿದ್ದೆ. ಆಗ ಅವರಿಗೆ ಹೊಸಬನಾದ ನನ್ನ ಬಗೆಗಿನ ಭೀತಿ, ಸಂಕೋಚ ಮಾಯವಾಗಿ ಮೆಲ್ಲನೆ ಬಂದು ನನ್ನ ಸುತ್ತಮುತ್ತ ಕೂಡುತ್ತಿದ್ದರು. ಅವರಿಗೆ ಗೊತ್ತಿರುವ ಹಾಡು ಹಸೆಗಳನ್ನು ಹೇಳುವಂತೆ ಅವರನ್ನು ಪುಸಲಾಯಿಸುತ್ತಿದ್ದೆ. ಆಗಂತೂ ಅವರು ಬಾಯಿಯನ್ನೇ ತೆರೆಯು ತ್ತಿರಲಿಲ್ಲ. ಹಾಡುಗಳನ್ನು ಬಲ್ಲ ಕೆಲವರು ಸಹ ತಮಗೆ ತಿಳಿಯದೆಂದು ಹೇಳುತ್ತಿದ್ದರು. ಮತ್ತೆ ಕೆಲವರು ಕಾಡು ಜನಗಳಾದ ತಾವು ಹಾಡುವ ಹಾಡುಗಳನ್ನು ನಾನು ಬರೆದುಕೊಂಡು ಹೋಗಿ ಲಾಭ ಗಳಿಸಬಹುದೆಂದು ನನ್ನ ಉದ್ದೇಶವನ್ನೇ ಶಂಕಿಸುತ್ತಿದ್ದರು.

ಕೆಲವು ಸಲ ಅವರ ಬಾಯಿ ಬಿಡದ ಮೊಂಡಾ ಟವನ್ನು ನೋಡಿ, ಬೇಸತ್ತು, ಯಾರಿಗೂ ಬೇಡದ ಈ ಶ್ರಮದಾಯಕ ಕೆಲಸದಲ್ಲಿ ಯಾಕಾದರೂ ನನ್ನನ್ನು ನಾನು ತೊಡಗಿಸಿಕೊಂಡೆನೋ ಎಂದು ಬೇಸರವಾಗುತ್ತಿತ್ತು. ಆದರೆ ಆ ಬೇಸರ ಕ್ಷಣಿಕ ವಾದುದಾಗಿರುತ್ತಿತ್ತು. ಕೊನೆಗೆ ಯಾರಾದ ರೊಬ್ಬ ಸೋಲಿಗ 'ಗೋರುಕ' ಹಾಡೊಂದನ್ನು ಹಾಡುತ್ತಿದ್ದ. ಅನಂತರ ಒಬ್ಬೊಬ್ಬರಾಗಿ ಹಾಡಲು ಮುಂದೆ ಬರುತ್ತಿದ್ದರು. ಸಂಜೆಯ ಹೊತ್ತಿಗೆ ಸೋಲಿಗನೊಬ್ಬ ನನ್ನನ್ನು ಕಾಡಿನಿಂದ ಹೊರಗೆ ಕರೆದುಕೊಂಡು ಬಂದು ಬಿಳಿಗಿರಿಯ ಹಾದಿ ಯಲ್ಲಿ ಬಿಟ್ಟು ಹೋಗುತ್ತಿದ್ದ.

ಬಿಳಿಗಿರಿಯಿಂದ ಸುಮಾರು ಐದು ಮೈಲು ದೂರದಲ್ಲಿ ಎತ್ತರವಾದ ಬೆಟ್ಟವೊಂದರ ಮೇಲೆ ಸೋಲಿಗರ ಪೋಡೊಂದಿತ್ತು. ಅದರ ಹೆಸರ ದೊಡ್ಡದೆ ಪೋಡು. ಅಲ್ಲಿ ರಂಗೇಗೌಡನೆಂಬ ಸೋಲಿಗರ ಹಾಡುಗಾರನಿದ್ದ. ಅವನಿಂದ ಹಾಡುಗಳನ್ನು ಸಂಗ್ರಹಿಸುವ ಸಲುವಾಗಿ ಅಂದು ಮಧ್ಯಾಹ್ನ ಮೂರು ಗಂಟೆಗೆ ಬಿಳಿಗಿರಿಯಿಂದ ಹೊರಟೆ. ಹಾದಿಯಲ್ಲಿ ದೊಡ್ಡರೆ ಪೋಡಿಗೇ ಹೋಗುತ್ತಿದ್ದ ಸೋಲಿಗರ ಹೈದನೊಬ್ಬ ಜೊತೆಗೆ ಸಿಕ್ಕಿದ.

ದಟ್ಟ ಕಾಡಿನ ನಡುವೆ ಹಾದು ಹೋಗಿದ್ದ ಡಾಂಬರು ರಸ್ತೆಯಲ್ಲಿ ಐವತ್ತು ಮೈಲಿನ ಕಲ್ಲಿನ ವರೆಗೂ ನಡೆದೆವು. ಅಲ್ಲಿಂದ ಎಡಕ್ಕೆ ಕಾಲು ಹಾದಿಯೊಂದು ಕೆಳಗಿನ ಕಣಿವೆಯಭಿಮುಖ ವಾಗಿ ಕಾಡಿನ ನಡುವೆ ಸಾಗಿತ್ತು. ಜೊತೆಯ ಹೈದನೊಂದಿಗೆ ಕಾಲು ಹಾದಿಯಲ್ಲಿ ಸಾಗಿದಂತೆ ಕಾಡಿನ ದಟ್ಟಣೆ ಹೆಚ್ಚಾಯಿತು. ಸೂರ್ಯ ರಶ್ಮಿಯು ಪ್ರವೇಶಿಸಲಸಾಧ್ಯವಾದ ಕತ್ತಲೆಯ ಕಾಡದು. ಹಳುವಿನಲ್ಲಿನ ಕಾನು ಮರಗಳಿಂದ ಸೋಲಿಗರು ಧೂಪವನ್ನು ಸಂಗ್ರಹಿಸುತ್ತಿದ್ದರು. ಮತ್ತೆ ಕೆಲವು ಸೋಲಿಗರು ವಿಚಿತ್ರ ಧಾಟಿಯಲ್ಲಿ ಹಾಡುತ್ತಾ ಜೇನು ಕೀಳುವ ಸನ್ನಾಹದಲ್ಲಿದ್ದರು.

ನನ್ನ ಜೊತೆಯಲ್ಲಿದ್ದ ಸೋಲಿಗರ ಹೈದ ಕಣಿವೆಯ ಮತ್ತೊಂದು ಬದಿಗಿದ್ದ ಬೆಟ್ಟವನ್ನು ಹತ್ತಲಾರಂಭಿಸಿದ. ಸ್ವಲ್ಪ ಹೊತ್ತಿಗೆಲ್ಲ ಬೆಟ್ಟದ ಮೇಲಿನ ದೊಡ್ಡರೆ ಪೋಡನ್ನು ತಲುಪಿದೆವು. ಹೆಂಗಸರು–ಮಕ್ಕಳು ನನ್ನನ್ನು ಕಂಡೊಡ ನೆಬೆದ ರಿದ ಚಿಗರೆಗಳಂತೆ ಓಡಿಹೋಗಿ ಪೊದೆಗಳ ಹಿಂದೆ ಅಡಗಿಕೊಂಡರು. ನನ್ನ ಜೊತೆಯಲ್ಲಿ ಬಂದಿದ್ದ ಹೈದ ಅವರಿಗೆ ನಾನು ಬಂದಿರುವ ಉದ್ದೇಶವನ್ನು ಕೂಗಿ ಹೇಳಿ ತಿಳಿಸಿದ. ನನ್ನ ಅದೃಷ್ಟಕ್ಕೆ ಸರಿಯಾಗಿ ರಂಗೇಗೌಡ ಅಲ್ಲೇ ಇದ್ದ. ನಾನು ತಂದಿದ್ದ ಪೆಪ್ಪರ್‌ಮೆಂಟು ಹೊಗೆಸೊಪ್ಪಿನ ತುಣುಕುಗಳನ್ನು ಎಲ್ಲರಿಗೂ ಹಂಚಿದಾಗ ಅವರ ಮುಖಗಳ ಮೇಲೆ ಉಲ್ಲಾಸ, ಸಂತೃಪ್ತಿಗಳು ಮೂಡಿದುವು.

ರಂಗೇಗೌಡ ಸುಮಾರು ಎಂಬತ್ತರ ಪ್ರಾಯದ ವೃದ್ಧ. ಯುವಕರನ್ನು ನಾಚಿಸುವಂತಹ ಚಟು ವಟಿಕೆ ಆತನದು. ನನ್ನಿಂದ ಹೆಚ್ಚು ಹೇಳಿಸಿ ಕೊಳ್ಳದೆ ನಡುಗುವ ಧ್ವನಿಯಲ್ಲಿ ತನಗೆ ತಿಳಿದಿದ್ದ ಸೋಲಿಗರ ಜಾನಪದ ಕಾವ್ಯ ಪ್ರಕಾರದ ಅಂಗ ಗಳಾದ ಗೋರುಕ, ಓಲಪದ, ಸೊಡ್ಡಿನ ಹಾಡು, ಕಗ್ಗ ಮೊದಲಾದವುಗಳಿಗೆ ಸಂಬಂಧಿ ಸಿದ ಹಾಡುಗಳನ್ನು ಹಾಡಿದ. ಹಸಿರು ಮಕ್ಕಳಿ ಸುವ ಚೇತೋಹಾರಿಯಾದ ನಿಸರ್ಗದ ನಡುವೆ ರಂಗೇಗೌಡನ ಕಂಠದಿಂದ ಅಂದು ಹೊರಹೊಮ್ಮು ತ್ತಿದ್ದ ಇಂಪಾದ ಹಾಡನ್ನು ಕೇಳುತ್ತಿದ್ದಾಗ ಇದಕ್ಕಿಂತ ಹೆಚ್ಚಿನ ಸುಖವೆಂಬುದು ಬೇರೇನಿದೆ ಯೆಂಬ ಸಂತೃಪ್ತಿ ಮನವನ್ನು ತುಂಬುತ್ತಿತ್ತು.

ನಾನು ಅಲ್ಲಿಂದ ಹೊರಡಲು ಸಿದ್ಧನಾ

ದಾಗ ರಂಗೇಗೌಡ ಗುಡಿಸಲಿನೊಳಗೆ ಹೋಗಿ ಬೆಟ್ಟದ ಬಾಳೆಯಹಣ್ಣಿನ ಚಿಪ್ಪೊಂದನ್ನು ತಂದು ನನ್ನ ಮುಂದಿಟ್ಟ. ಹಾಡಿನ ಸವಿಯನ್ನು ಸವಿಯುವುದರಲ್ಲಿ ಮಗ್ನನಾಗಿದ್ದ ನನಗೆ ದೂರದ ಬೆಟ್ಟಗಳ ಹಿಂದೆ ಸೂರ್ಯ ಕಂತುತ್ತಿದ್ದುದೇ ಅರಿವಾಗಲಿಲ್ಲ. ಬೆಟ್ಟದ ಮೇಲೆ ಸಾಕಷ್ಟು ಬೆಳಕಿದ್ದುದರಿಂದ, ಪೂರ್ಣ ಕತ್ತಲಾಗುವ ಮುನ್ನ ಬಿಳಿಗಿರಿಯನ್ನು ತಲುಪಬಹುದೆಂದುಕೊಂಡು ಅಲ್ಲಿಂದ ಆತುರವಾಗಿ ಹೊರಟೆ.

ಬೆಟ್ಟವಿಳಿದು ಮತ್ತೆ ಹತ್ತು ಹದಿನೈದು ನಿಮಿಷಗಳ ಹದನ್ನು ಹಿಡಿದರೆ ಡಾಂಬರು ರಸ್ತೆ ಸೇರುತ್ತಿದ್ದೆ. ಅಲ್ಲಿಂದ ಬಿಳಿಗಿರಿಯವರೆಗೆ ನೇರ ರಸ್ತೆ. ಚಾಮರಾಜನಗರದಿಂದ ನಾಟಿ ಸಾಗಿಸಲು ಬರುವ ಲಾರಿಗಳು ಸಿಗುವ ಸಂಭವವಿದ್ದಿತು. ದೊಡ್ಡರೆ ಪೋಡಿನಿಂದ ಬರುವಾಗ ದಾರಿ ತೋರಿಸಲು ಯಾರಾದರೊಬ್ಬ ಸೋಲಿಗನನ್ನು ಕರೆದುಕೊಂಡು ಬರದೆ ತಪ್ಪು ಮಾಡಿದೆನೆಂದು ಬೆಟ್ಟದ ಕಿಬ್ಬಿಯನ್ನು ತಲುಪಿದ ಮೇಲೆ ಅರಿವಾಯಿತು. ದೊಡ್ಡರೆ ಪೋಡಿನಿಂದ ಹೊರಡುವಾಗ ಇದ್ದ ಬೆಳಕು ಕಣಿವೆಯ ಕೆಳಗನ್ನು ಸೇರಿದಾಗ ಮರ ಗಿಡಗಳ ಸಂದಣಿಯಿಂದ ಕ್ಷೀಣವಾಗಿ ಮಬ್ಬು ಕತ್ತಲಾವರಿಸಿ ನನಗೆ ದಿಕ್ಕಾಪಾಲಾಗುವಂತೆ ಮಾಡಿತು. ಮೊದಲು ನಾನು ಬಂದ ಹಾದಿಯಂತೆ ತೋರಿದ ಕಾಲುಜಾಡಿನಲ್ಲಿ ಹತ್ತು ಹದಿನೈದು ನಿಮಿಷಗಳ ಕಾಲ ಏರಿನ ಹಾದಿಯನ್ನು ಹತ್ತತೊಡಗಿದರೂ ಡಾಂಬರು ರಸ್ತೆ ಸಿಗದೆ ಗುಡ್ಡವೊಂದರ ತುದಿಯನ್ನು ತಲುಪಿದಾಗ ದಾರಿ ತಪ್ಪಿದುದು ಖಚಿತವಾದಂತಾಯಿತು.



ದೊಡ್ಡರೆ ಪೋಡಿಗೆ ಹಿಂದಿರುಗಿ ಹೋಗೋಣ ವೆಂದರೆ ಬಂದ ಹಾದಿಯೂ ಕತ್ತಲಲ್ಲಿ ಕಾಣ ದಾಗಿತ್ತು. ಕ್ಷಣಕ್ಷಣಕ್ಕೂ ಸುತ್ತಲೆಲ್ಲ ಕತ್ತ ಲಾವರಿಸಿಕೊಂಡು ಮನಸ್ಸಿನಲ್ಲಿ ಭೀತಿ-ಕಳವಳ ತುಂಬಿಕೊಂಡಿತು. ನಾನು ನಿಂತಿದ್ದ ಗುಡ್ಡದ ಕಿಬ್ಬಿಯಲ್ಲಿ ನೀರಿನ ನಡುವಣ್ಣೆಯಿತ್ತೆಂದು ಕಾಣು ತ್ತದೆ. ಅಲ್ಲಿಂದ ಆಗಾಗ ಕಾಡಾನೆಗಳ ಘೀಳಿಡು ವಿಕೆ ಕೇಳಿ ಬರುತ್ತಿತ್ತು. ನನ್ನ ಬಳಿಯಿದ್ದ ಟಾರ್ಚಿನ ಸೆಲ್ಲುಗಳ ಶಕ್ತಿ ತಗ್ಗಿದ್ದರಿಂದಲೋ ಏನೋ ಅದರಿಂದ ಮಂದ ಪ್ರಕಾಶ ಬರುತ್ತಿತ್ತು. ನನ್ನ ಗ್ರಹಚಾರಕ್ಕೆ ಸರಿಯಾಗಿ ಆಕಾಶದಲ್ಲಿ ಮೋಡ ಗಳು ದಟ್ಟೈಸಿ ಸ್ವಲ್ಪ ಹೊತ್ತಿಗೆಲ್ಲ ಮಳೆ ಬೀಳ ಲಾರಂಭಿಸಿತು. ಮಳೆಯಿಂದ ಆಸರೆ ಪಡೆಯಲು ಕಾಡುಮಾವಿನ ಮರವೊಂದರ ಕೆಳಗೆ ನಿಂತೆ.

ಮಳೆ ಸ್ವಲ್ಪ ಹೊತ್ತು ಮುಸಲಧಾರೆಯಾಗಿ ಸುರಿದು ತಟ್ಟನೆ ನಿಂತು ಮತ್ತೆ ಜಡಿ ಹಿಡಿದು ಕೊಂಡಿತು. ಮೈ ಮೇಲಿನ ಬಟ್ಟೆಗಳೆಲ್ಲ ನೆನೆದು ಚಳಿಯಿಂದ ನಡುಗಲಾರಂಭಿಸಿದೆ. ಕಾಡಿನಲ್ಲಿನ ಚಿತ್ರವಿಚಿತ್ರ ಕ್ರಿಮಿ ಕೀಟಗಳ ಸದ್ದು ನರ ನಾಡಿಗಳಲ್ಲಿನ ರಕ್ತವನ್ನು ಹೆಪ್ಪುಗಟ್ಟಿಸುವಂತಿತ್ತು. ಕತ್ತಲಿನ ಬಾನಿನಲ್ಲಿ ಅತಿ ಮಾನುಷ ವ್ಯಕ್ತಿ ಗಳು ಸಮರ ಕಾತುರಾಗಿ ಕತ್ತಿಗಳನ್ನು ಝಳ ಪಿಸುತ್ತಿರುವಂತೆ ಆಗಾಗ ಮಿಂಚುತ್ತಿದ್ದ ಮಿಂಚು ಕಣ್ಣು ಕೋರೈಸುತ್ತಿತ್ತು. ಕಾಡಿನ ಹೆಮ್ಮರಗಳು ಕತ್ತಲಲ್ಲಿ ಅಜ್ಜಿಯ ಕತೆಗಳಲ್ಲಿ ಬರುವ ಭಯಾ ನಕ ಪಾತ್ರಗಳಂತೆ ಭಯ ಹುಟ್ಟಿಸುತ್ತಿದ್ದುವು.

ಹಗಲಿನಲ್ಲಿ ಚೇತೋಹಾರಿಯಾಗಿ ಕಣ್ಣು ಗಳನ್ನು ತಣಿಸುತ್ತಿದ್ದ ವನಶ್ರೀಯ ಮತ್ತೊಂದು ರೌದ್ರ ರೂಪವನ್ನು ರಾತ್ರಿಯಲ್ಲಿ ಕಂಡಾಗ ಎಂತಹ ಧೈರ್ಯಶಾಲಿಯಾದರೂ ಎದೆ- ಗುಂದದಿರಲಾರ. ಹತ್ತಿರದಲ್ಲೆಲ್ಲಾದರೂ ಸೋಲಿ ಗರ ಪೋಡುಗಳಿವೆಯೇನೋ ಎಂದು ಬಳಿ ಯಿದ್ದ ಟಾರ್ಚಿನ ಮಂಕು ಬೆಳಕಿನಲ್ಲಿ ಅಡ್ಡಾ ಡುತ್ತ ನಿಂತ ಸ್ಥಳದಿಂದ ಸ್ವಲ್ಪ ದೂರ ಹೋದೆ ಹೆಜ್ಜೆ ಹೆಜ್ಜೆಗೂ ಎದುರಾಗುವ ದಟ್ಟ ಪೊದೆ ಗಳ ಹಿಂದೆ ಯಾವ ಹಿಂಸ್ರ ಪಶು ಅಡಗಿ ದೆಯೋ ಎಂದು ಭಯವಾಗುತ್ತಿತ್ತು. ಸ್ವಲ್ಪ ದೂರದಲ್ಲಿ ಬೆಟ್ಟದ ಇಳಿಜಾರಿನಲ್ಲಿ ಬೆಂಕಿಯ ಮಂದ ಪ್ರಕಾಶ ಕಾಣಿಸಿ ಜೀವ ಬಂದಂತಾಗಿ ಅತ್ತ ಸಾಗಿದೆ.

ಅದೊಂದು ಚಿಕ್ಕ ಒಂಟಿ ಗುಡಿಸಲು. ಗುಡಿ ಸಿಲ ಮುಂದೆ ಉರಿಯುತ್ತಿದ್ದ ಬೆಂಕಿ ಆರುತ್ತಾ ಬಂದಿತ್ತು. ಗುಡಿಸಿಲಿಗೆ ಬಾಗಿಲೇ ಇರಲಿಲ್ಲ. ಟಾರ್ಚ್ ಲೈಟನ್ನು ಒಳಗೆ ಬಿಟ್ಟಾಗ ಅಲ್ಲಿ ಕಂಡದ್ದು ಒಂದು ಶಿಲೆಯ ತುಂಡು. ಅದಕ್ಕೆ ಅರಿಸಿನ, ಕುಂಕುಮ ಮತ್ತು ಎಣ್ಣೆಯ ಲೇಪನದಿಂದ ಮಂಕು ಬಡಿ ದಿತ್ತು. ಅದು ಸಾಧಾರಣವಾಗಿ ಸೋಲಿಗರು ಅಡವಿಯಲ್ಲಿ ಪೂಜಿಸುವ 'ಜಡೆ ಸ್ವಾಮಿ' ಎಂಬ ಅಡವಿ ದೈವದ ಗುಡಿ. ಇದಕ್ಕೆ ಮೊದಲು ನಾನು ಆ ಗುಡಿಗಳನ್ನು ಬಿಳಿಗಿರಿಯ ಸುತ್ತ ಮುತ್ತಲ ಕಾಡಿನಲ್ಲಿ ಕಂಡಿದ್ದೆ. ಆ ರಾತ್ರಿ ಕಳೆಯಲು ತಾವೊಂದು ದೊರೆಯಿತೆಂದುಕೊಂಡು ಗುಡಿಸಿ ಲನ್ನು ಹೊಕ್ಕು ಮುದುಡಿಕೊಂಡು ಕುಳಿತೆ.

ಅಲ್ಲಿ ನನಗೆ ಮೊದಲು ಸೋಲಿಗರಾರೋ ಬಂದು ಬೆಂಕಿ ಕಾಯಿಸಿಕೊಂಡು ಹೋಗಿರ ಬಹುದೆಂದುಕೊಂಡೆ. ಗುಡ್ಡದ ಕಿಬಿಯಲ್ಲಿನ ನಡುವಣ್ಣೆಯಲ್ಲಿ (ನೀರಿನ ಹಳ್ಳ) ನೀರು ಕುಡಿಯಲು ಬಂದ ಕೊಂಬಿನ ಆನೆಯೊಂದು ಘೀಳಿಟ್ಟಾಗ ಆ ಚಳಿಯಲ್ಲಿಯೂ ಮೈ ಬೆವರಿತು. ಆ ಕತ್ತಲೆಯ ಕಾಡಿನಿಂದ ಹೊರಗೆ ಹೋಗಲು ಬೆಳಗಿನವರೆಗೆ ಬೇರಾವ ದಾರಿಯೂ ಕಾಣದೆ ಜಡೆ ಸ್ವಾಮಿಗೆ ಶರಣು ಹೋದೆ.

ಜಡೆ ಸ್ವಾಮಿಗೆ ನನ್ನ ಮನಸ್ಸಿನ ಮೊರೆ ಕೇಳಿರ ಬೇಕು. ಕೆಳಗಿನಿಂದ ಯಾರೋ ಮಾತನಾಡಿ ಕೊಂಡು ಬೆಟ್ಟವನ್ನು ಹತ್ತಿ ಬರುವ ಸದ್ದು ಕೇಳಿ, ಜೀವ ಬಂದಂತಾಗಿ ಜೋರಾಗಿ ಕೂಗಿ ಕರೆದಾಗ ಅವರಿಂದ ಮಾರುತ್ತರ ಬಂದು ಮನ ಸ್ಸಿಗೆ ನೆಮ್ಮದಿಯೆನಿಸಿತು. ಸ್ವಲ್ಪ ಸಮಯದಲ್ಲಿ ಮೊಲಗಳನ್ನು ಹಿಡಿದುಕೊಂಡು ದೃಢ ಕಾಯ ರಾದ ಕೆದರಿದ ನೀಳ ಕೂದಲಿನ ಸೋಲಿಗರಿಬ್ಬರು ಮೇಲೆ ಬಂದರು.

ಮೊಲದ ಮರಸಿಗೆ ಹೋಗಿದ್ದ ಅವರು ಜಡೆ ಸ್ವಾಮಿಯ ದರ್ಶನಕ್ಕಾಗಿ ಜಡಿ ಮಳೆಯಲ್ಲಿಯೇ ಬೆಟ್ಟವನ್ನು ಹತ್ತಿ ಬರುತ್ತಿದ್ದರು. ಬೇಟೆಯಾಡಿ ತಂದಿದ್ದ ಮೊಲಗಳನ್ನು ಅವರು ದೈವದ ಮುಂದಿಟ್ಟು ಅಡ್ಡಬಿದ್ದರು. ಅವರು ಗುಮ್ಮನ

ಪೋಡಿನವರು. ಅಲ್ಲಿಂದ ಸುಮಾರು ಎರಡು ಮೈಲು ದೂರದಲ್ಲಿದ್ದ ಗುಮ್ಮನ ಪೋಡಿಗೆ ಅವರು ನನ್ನನ್ನು ಕರೆದುಕೊಂಡು ಹೋದಾಗ, ಸೋಲಿಗರೆಲ್ಲ ಹಾಡುತ್ತ ಹರಟೆ ಹೊಡೆಯುತ್ತಾ ಕುಳಿತಿದ್ದರು. ನನ್ನನ್ನು ಕಂಡೊಡನೆ ಬೆಂಕಿಯ ಮುಂದೆ ಕುಳಿತುಕೊಳ್ಳಲು ನನಗೆ ಸ್ಥಳ ಬಿಟ್ಟು ಕೊಟ್ಟರು. ಅವರಿಗಾಗಿಟ್ಟುಕೊಂಡಿದ್ದ ಸುಟ್ಟ ಸೀಮೆ ಗೆಣಸನ್ನು ನನಗೆ ತಿನ್ನಲಿತ್ತು ಸತ್ಕಾರ ಮಾಡಿದರು.

ಗುಮ್ಮನ ಪೋಡಿನಿಂದ ಬಿಳಿಗಿರಿಗೆ ಸುಮಾರು ಎರಡು ಮೈಲು. ಆಗಲೇ ಗಂಟೆ ಹತ್ತಾಗಿತ್ತು. ಸೋಲಿಗರಿಬ್ಬರು ಆಸಾಡ ಸೊಪ್ಪಿನಿಂದ ತಯಾರಿಸಿದ ದೊಂದಿಯನ್ನು ಹಿಡಿದುಕೊಂಡು ಬೆಟ್ಟದ ಹಾದಿಯಲ್ಲಿ ಬೆಳಕನ್ನು ತೋರುತ್ತ ನನ್ನನ್ನು ಕರೆದುಕೊಂಡು ಬಿಳಿಗಿರಿಗೆ ಅಭಿಮುಖವಾಗಿ ಸಾಗಿದರು. ಸೋಮರಸನ ಕೆರೆಯ ಬಳಿ ಬಂದಾಗ ಕಾಟಿಗಳ ಹಿಂಡೊಂದು ಕೆರೆಯಲ್ಲಿ ನೀರು ಕುಡಿಯುತ್ತಿದ್ದು ನಮ್ಮನ್ನು ಕಂಡು ದಡದಡನೆ ಪಕ್ಕದ ಕಾಡಿನೊಳಗೆ ಓಡಿದವು.

ಬಿಳಿಗಿರಿ ಬೆಟ್ಟದ ಕೆಳಗಿನ ಚಿತ್ರದ ಬಳಿಯ ನನ್ನ ಕೋಣೆಯ ಬಳಿ ಬಂದಾಗ ಗಂಟೆ ಹನ್ನೊಂದಾಗಿತ್ತು. ಕತ್ತಲೆಯ ಕಾಡಿನಿಂದ ನನ್ನನ್ನು ಪಾರುಮಾಡಿದ ಆ ಸಹೃದಯಿ ಸೋಲಿಗರಿಗೆ ಕೃತಜ್ಞತೆಯ ಸಂಕೇತವಾಗಿ ಕೆಲವು ನೋಟುಗಳನ್ನು ಕೊಡಲು ಹೋದಾಗ ಅದಕ್ಕೆ ಅವರಿಂದ ಬಂದ ಪ್ರತಿಕ್ರಿಯೆಯನ್ನು ಕಂಡು ಬೆರಗಾದೆ. ಬಿಳಿಗಿರಿ ರಂಗಸ್ವಾಮಿಯ ದೇವಾಲಯದ ಹುಂಡಿಗೆ ಆ ನೋಟುಗಳನ್ನು ಹಾಕುವಂತೆ ಹೇಳಿ ಹಿಂದಿರುಗಿಯೂ ಸಹ ನೋಡದೆ ಅವರು ಬೆಟ್ಟದ ಮೆಟ್ಟಲುಗಳನ್ನಿಳಿಯುತ್ತ ಕತ್ತಲಲ್ಲಿ ಕಣ್ಮರೆಯಾಗಿ ಹೋದರು.

ಊರಿನ ನಾಗರಿಕರಿಂದ ಅನಾಗರಿಕ ಕಾಡು ಜನರೆಂದು ಕರೆಸಿಕೊಳ್ಳುವ ನಿಸರ್ಗದ ಮುಗ್ಧ ಕೂಸುಗಳಾದ ಈ ಸೋಲಿಗರ ಹೃದಯ ಶ್ರೀಮಂತಿಕೆಯನ್ನು ಕಂಡು ಮೂಕನಾದೆ.

✡



**ಬೌದ್ಧ ಸೂತ್ರಗ್ರಂಥ ಆಗ ಕೇವಲ ಚೀನೀ ಲಿಪಿಯಲ್ಲಿ ಪ್ರಕಟಗೊಳ್ಳುತ್ತಿದ್ದವು. ಬೇರೆ ಭಾಷೆಗಳಿಗೂ ಅವನ್ನು ತರ್ಜುಮೆ ಮಾಡಿ ಮುದ್ರಿಸಬೇಕೆಂದು ಹಲವಾರು ಜನ ಪ್ರಯತ್ನಿಸಿದರು. ಅಂಥವರಲ್ಲಿ ಜಪಾನದ ಬೌದ್ಧ ಯತಿ ತೆತ್ಸುಗೆನ್ ಕೂಡ ಒಬ್ಬ.**

**ಜಪಾನಿ ಭಾಷೆಯಲ್ಲಿ ಅವನ್ನು ಅಚ್ಚು ಮಾಡಿಸಲು ಬಹಳ ಖರ್ಚು ಬರುತ್ತಿತ್ತು. ಆ ಖರ್ಚಿಗಾಗಿ ತೆತ್ಸುಗೆನ್ ಜನರಿಂದ ವಂತಿಗೆ ಸಂಗ್ರಹಿಸತೊಡಗಿದ. ಹತ್ತು ವರ್ಷಗಳ ವರೆಗೆ ವಂತಿಗೆ ಸಂಗ್ರಹಿಸಿದಾಗ ಮುದ್ರಣ ವೆಚ್ಚಕ್ಕೆ ಬೇಕಾದ ಹಣ ಕೂಡಿತು. ಆದರೆ ಅಷ್ಟರಲ್ಲೇ ಯೂಜಿನದಿಗೆ ಮಹಾಪೂರ ಬಂತು. ನೆರೆಯ ಹಳ್ಳಿಗಳೆಲ್ಲ ನೆರೆಹಾವಳಿಗೆ ಬಲಿಯಾದುವು. ತೆತ್ಸುಗೆನ್ ತಾನು ಸಂಗ್ರಹಿಸಿದ್ದ ಹಣವನ್ನು ನೆರೆ ಸಂತ್ರಸ್ತರಿಗೆ ಆಹಾರ, ಪುನರ್ವಸತಿಗಾಗಿ ವಿನಿಯೋಗಿಸಿಬಿಟ್ಟ. ಆದರೆ ಸೂತ್ರಗ್ರಂಥದ ಪ್ರಕಟನೆಯ ಕಾರ್ಯಕ್ಕಾಗಿ ಮತ್ತೆ ಜನರಿಂದ ವಂತಿಗೆ ಕೂಡಿಸತೊಡಗಿದ. ಮತ್ತೆ ಹತ್ತು ವರ್ಷಗಳ ವರೆಗೆ. ಆಗ ಎಲ್ಲೆಡೆಗೂ ಮಹಾಮಾರಿ ರೋಗ ಆವರಿಸಿತ್ತು. ಮತ್ತೆ ತೆತ್ಸುಗೆನ್ ಆ ಹಣವನ್ನು ಜನೋಪಯೋಗಕ್ಕೆ ಬಳಸಿದ.**

**ಕೊನೆಗೂ ಸೂತ್ರಗ್ರಂಥಗಳು ಪ್ರಕಟವಾದವು. ಸುಂದರವಾಗಿದ್ದವು. ಇದಕ್ಕೆ ಮತ್ತೆ ಇಪ್ಪತ್ತು ವರ್ಷ ತೆತ್ಸುಗೆನ್ ಕಷ್ಟ ಪಡಬೇಕಾಯಿತು. ಈಗ ಜಪಾನಿನಲ್ಲಿ ಬೌದ್ಧ ಮತಸ್ಥರು ಈ ಗ್ರಂಥವನ್ನು 'ಮೂರನೆಯ ಮುದ್ರಣ' ಎನ್ನುತ್ತಾರೆ. ಮೊದಲಿನೆರಡು ಮುದ್ರಣಗಳು ಅದೃಶ್ಯವಾಗಿಯೂ ಅತಿ ಸುಂದರವಾಗಿಯೂ ಇವೆಯೆಂದು ಅವರು ತಮ್ಮ ಮಕ್ಕಳಿಗೆ ಹೇಳುತ್ತಾರೆ.**

# ಒಕಾಪಿ

ಜಿ. ಎಸ್. ಭಟ್ಟ

೧೯೦೦ರವರೆಗೂ ವಿಜ್ಞಾನ ಪ್ರಪಂಚಕ್ಕೆ ಒಕಾಪಿ ಎಂಬ ಪ್ರಾಣಿಯ ಕಲ್ಪನೆಯೇ ಇರಲಿಲ್ಲ. ಆಫ್ರಿಕದ ದಟ್ಟ ಕಾಡುಗಳಲ್ಲಿ ಕಾಣಸಿಗುವ ಈ ಅಪರೂಪದ ಪ್ರಾಣಿ ಜಿರಾಫೆ ಜಾತಿಗೆ ಸೇರಿದ್ದು.

ಆಶ್ಚರ್ಯಕರವಾದ ಪ್ರಾಣಿಯೊಂದು ತಮ್ಮ ಕಾಡಿನಲ್ಲಿ ಇದೆ ಎಂದು ಆಫ್ರಿಕದ ಕಾಂಗೋದಲ್ಲಿ ವಾಸಿಸುತ್ತಿದ್ದ ಪಿಗ್ಮಿಗಳು ಹೇಳುತ್ತಿದ್ದರು. ಇದು ನೋಡಲು ಜಿರಾಫೆಯಂತಿದೆ. ಜೀಬ್ರಾದಂತೆ ಮೈಮೇಲೆ ಪಟ್ಟೆಗಳಿವೆ. ಇದರ ಕಿವಿಗಳು ನಾಯಿಯ ಕಿವಿಗಳಂತಿವೆ ಎಂಬುದನ್ನು ಅವರು ಗಮನಿಸಿದರು. ಬಹಳ ಕಾಲ ಇವರು ಗಮನಿಸಿದ ಈ ಪ್ರಾಣಿ ಪಾಶ್ಚಾತ್ಯ ಅನ್ವೇಷಕರ ಹಾಗೂ ಬೇಟೆಗಾರರ ಕಣ್ಣಿಗೆ ಬಿದ್ದಿರಲಿಲ್ಲ. ದಟ್ಟವಾದ ಅರಣ್ಯದಲ್ಲಿ ಈ ಪ್ರಾಣಿಯನ್ನು ಪತ್ತೆ ಹಚ್ಚಲು ಅವರು ಹಲವಾರು ದಿನ ತಿರುಗಾಡಿದರು. ಈ ಪ್ರಾಣಿಯ ಚರ್ಮವನ್ನು ಪಿಗ್ಮಿಗಳು ತೋರಿಸಿದಾಗ ಅವರು ಹೇಳಿದುದರಲ್ಲಿ ಸತ್ಯ ಇರುವುದು ಮನವರಿಕೆಯಾಯಿತು. ಆಗ ಬಿಳಿಯರ ಕುತೂಹಲ ಇನ್ನೂ ಹೆಚ್ಚಿತು. ಇದೊಂದು ಬಗೆಯ ಜಿಂಕೆಯಾಗಿರಬಹುದು ಅಥವಾ ಕುದುರೆಯಾಗಿರಬಹುದು ಎಂದು ಅವರು ಭಾವಿಸಿದರು. ಆದರೆ ಅವರ ಊಹೆ ನಿಜವಾಗಿರಲಿಲ್ಲ. ಅದು ಜಿರಾಫೆಯ ಜಾತಿಗೆ ಸೇರಿದ ಒಂದು ವಿಶಿಷ್ಟ ಪ್ರಾಣಿ. ಪ್ರಸಿದ್ಧ ಪತ್ರಿಕೋದ್ಯಮಿ ಮತ್ತು ಅನ್ವೇಷಕ ಹೆನ್ರಿ ಎಂ. ಸ್ಟೇನ್ಲಿ ಎಂಬುವನು ಈ ಪ್ರಾಣಿಯನ್ನು ಮೊತ್ತ ಮೊದಲಿಗೆ ಕಂಡ. ಆತ ಇದನ್ನು ಕುರಿತು ಆಗ ಉಗಾಂಡಾದ ಗವರ್ನರನಾಗಿದ್ದ ಸರ್ ಹ್ಯಾರಿ ಜಾನ್ಸನ್ನನಿಗೆ ಹೇಳಿದ. ಜಾನ್ಸನ್ ಸಹಿಯರಿಂದ ಈ ಪ್ರಾಣಿಯ ಚರ್ಮವನ್ನು ಪಡೆದುಕೊಂಡು ಲಂಡನ್ನಿನಲ್ಲಿದ್ದ ಪಿ.ಎಲ್.ಸ್ಕ್ಲೇಟರ್ ಎಂಬಾತನಿಗೆ ಅದನ್ನು ಕಳಿಸಿದ. ಆತ ಇದು ಜೀಬ್ರಾ ಜಾತಿಗೆ ಸೇರಿರಬಹುದೆಂದು ಊಹಿಸಿದ.

ಎರಡು ವರ್ಷಗಳ ನಂತರ ಸರ್ ಹ್ಯಾರಿ ಜಾನ್ಸನ್ ಈ ಪ್ರಾಣಿಯ ಚರ್ಮ ಮತ್ತು ಎರಡು ತಲೆಬುರುಡೆಗಳನ್ನು ಸಂಪಾದಿಸಿದ. ೨೦ನೆಯ ಶತಮಾನದ ವಿಜ್ಞಾನಿಗಳು ಇಂಥ ಪ್ರಾಣಿಯನ್ನು ಅರಿತೇ ಇರಲಿಲ್ಲ. ವಿಶ್ವದಾದ್ಯಂತ ಪ್ರಾಣಿಶಾಸ್ತ್ರಜ್ಞರ ಕುತೂಹಲವನ್ನು ಇದು ಕೆರಳಿಸಿತು. ಗವರ್ನರ್ ಜಾನ್ಸನ್ನನ ಗೌರವಾರ್ಥವಾಗಿ ಈ ಪ್ರಾಣಿಗೆ ಒಕಾಪಿಯ ಜಾನ್ಸಟೋನಿಯ ಎಂಬ ಹೆಸರಿಡಲಾಯಿತು. ಜೀವಂತ ಒಕಾಪಿಯೊಂದು ನ್ಯೂಯಾರ್ಕಿನ ಮೃಗಾಲಯವನ್ನು ಪ್ರವೇಶಿಸಿದ್ದು ೧೯೩೭ರಲ್ಲಿ.

ಒಂದೂವರೆ ಕೋಟಿ ವರ್ಷಗಳ ಹಿಂದೆ ಜೀವಿಸಿದ್ದ ಜಿಲಾಫೆಗಳು ಇಂದಿನ ಜಿರಾಫೆ ಮತ್ತು ಒಕಾಪಿಯ ಪೂರ್ವಜರು ಎನ್ನಲಾಗಿದೆ. ಒಕಾಪಿಯ ಕತ್ತು ಜಿರಾಫೆಯ ಕತ್ತಿನಷ್ಟು ಉದ್ದವಾಗಿಲ್ಲ. ಹಿಂದಿನ ಕಾಲದ ಜಿರಾಫೆಗಳು ಇಂದಿನ ಒಕಾಪಿಯಂತೆ ಇದ್ದುವೆಂದು ತರ್ಕಿಸಲಾಗಿದೆ. ಬಹಳ ವರ್ಷಗಳ ಅನಂತರ ಜಿರಾಫೆಯ ಕುತ್ತಿಗೆ ಉದ್ದವಾಗಿರಬೇಕು. ತನ್ನ ಆಹಾರವಾದ ಸೊಪ್ಪಿನ ಬೇಟೆಗಾಗಿ ಜಿರಾಫೆ ತನ್ನ ಕತ್ತನ್ನು ಹೆಚ್ಚು ಹೆಚ್ಚು ಎತ್ತರಕ್ಕೆ ಚಾಚತೊಡಗಿದ್ದರಿಂದ



ಚಿತ್ರ: ಕೆ. ಬಿ. ಸದಾನಂದ

ಕ್ರಮೇಣ ಇವರ ಸಂತತಿಯ ಕತ್ತುಗಳು ಉದ್ದವಾಗತೊಡಗಿರುವವೆಂದು ಹೇಳಲಾಗಿದೆ.

ಒಕಾಪಿ ದಟ್ಟವಾದ ಕಾಡುಗಳಲ್ಲಿ ವಾಸಿಸುತ್ತದೆ. ಇದರ ದೃಷ್ಟಿ ಮಂದ. ಆದರೆ ಅದರ ಘ್ರಾಣೇಂದ್ರಿಯ ಮತ್ತು ಶ್ರವಣೇಂದ್ರಿಯ ಬಹಳ ಸೂಕ್ಷ್ಮವಾಗಿದೆ. ವೈರಿಗಳಿಂದ ತನ್ನನ್ನು ರಕ್ಷಿಸಿಕೊಳ್ಳಲು ಸೂಕ್ಷ್ಮವಾದ ಘ್ರಾಣಶಕ್ತಿ ಅದಕ್ಕೆ ನೆರವಾಗಿದೆ. ಒಕಾಪಿ ನಿಶಾಸಂಚಾರಿ. ಅದು ಒಂಟಿಯಾಗಿಯೋ ಇಲ್ಲವೆ ಸಣ್ಣ ಸಣ್ಣ ಗುಂಪುಗಳಲ್ಲಿಯೋ ಸಂಚರಿಸುತ್ತದೆ. ಸಾಮಾನ್ಯವಾಗಿ ಮನುಷ್ಯ, ಹಾವು ಮತ್ತು ಚಿರತೆಗಳನ್ನು ಕಂಡರೆ ಒಕಾಪಿಗೆ ಹೆದರಿಕೆ. ಎಲೆ, ಹಣ್ಣು, ಬೀಜಗಳು ಇದರ ಆಹಾರ. ತಲೆಯೂ ಸೇರಿದಂತೆ ಇದರ ಉದ್ದ ೨ ಮೀಟರ್. ಬಾಲದ ಉದ್ದ ೪೧೯ ಮಿಲಿಮೀಟರ್. ಮೈಮೇಲೆ ಸಣ್ಣ ಸಣ್ಣ ಬಿಡಿ ಕೂದಲುಗಳು ತುಂಬಿವೆ. ಇದರ ಮೈ ಚಾಕಲೇಟಿನ ಬಣ್ಣದ್ದಾಗಿದೆ. ಮುಖ ಬಿಳಿದು. ನೀಳವಾದ ಕುತ್ತಿಗೆ, ವಿಶಾಲವಾದ ಕಿವಿಗಳು– ಇದರ ವೈಶಿಷ್ಟ್ಯ. ಇದು ತನ್ನ ಉದ್ದ ನಾಲಗೆಯಿಂದ ಕಣ್ಣುಗಳನ್ನು ಸ್ವಚ್ಛ ಮಾಡಿಕೊಳ್ಳುವುದು. ಹೆಣ್ಣು ಒಕಾಪಿಯ ಗರ್ಭಧಾರಣೆಯ ಅವಧಿ ಸುಮಾರು ೪೨೫ ದಿವಸಗಳು.

ಒಕಾಪಿ ಏಕಾಂತಪ್ರಿಯ, ಪುಕ್ಕಲು ಸ್ವಭಾವದ ಪ್ರಾಣಿ. ಆಫ್ರಿಕದ ಮೂಲ ನಿವಾಸಿಗಳಿಗೆ ಇದರ ಮಾಂಸ ತುಂಬ ರುಚಿ.

ಒಕಾಪಿಯ ಕೊಂಬುಗಳು ಸುಮಾರು ೧೫ ಸೆಂಟಿಮೀಟರ್ ಉದ್ದವಾಗಿದ್ದು ಅದನ್ನು ಕೂದಲುಗಳು ಮುಚ್ಚಿರುತ್ತದೆ. ಜಿಗರೆಯ ಕೊಂಬುಗಳಂತೆ ಇದರ ಕೊಂಬುಗಳು ತಲೆಬುರುಡೆಯಲ್ಲಿ ಬೆಳೆದಿರುವುದಿಲ್ಲ. ಅದು ಹುಟ್ಟುವ ಮುಂಚೆಯೇ ಮಾಂಸದಲ್ಲೇ ಇದ್ದು ಅನಂತರ ಕೆಳಮೊಗವಾಗಿ ಬೆಳೆದು ಗಟ್ಟಿಯಾಗಿ ಮುಗಿದುಕೊಂಡಿರುತ್ತದೆ. ವಿಶ್ವದ ಅಪರೂಪದ ಪ್ರಾಣಿಯಾದ ಒಕಾಪಿಯ ಬೇಟೆಯನ್ನು ಬೆಲ್ಜಿಯಮ್ ಸರಕಾರ ಬಹು ಹಿಂದೆಯೇ ನಿಷೇಧಿಸಿತು. ಪ್ರಪಂಚದ ಅನೇಕ ಮೃಗಾಲಯಗಳಲ್ಲಿ ಈಗ ಈ ಪ್ರಾಣಿಯನ್ನಿಟ್ಟಿದ್ದಾರೆ. ✡



ಮುಂಜಾನೆ ಎದ್ದಾಗ ಛಳಿ–ಛಳಿ. ಬಿಟ್ಟ ಕಣ್ಣು ಪಿಳಿ ಪಿಳಿ,
ಮುಖವ ತೊಳೆದು ಗಡ್ಡ ಕೆರೆದು–ಹೆಜ್ಜೆ ಇಡಲು
ಹಿಮದ ಗುಡ್ಡೆ ಬಿಳಿ–ಬಿಳಿ!
ಕೊರೆವ ಹಿಮದಿ ನೆನೆದ ಕಾರು; ನಡುಗಿ ನಿಂತು ಮುದುಡಿ ಮಲಗಿ,
ಗುಡುಗಿ–ಗುಡುಗಿ ಮೊಂಡು ಹಿಡಿದು; ಹೊರಟು–ನಿಂತು, ಹೊರಟು–ನಿಂತು,
ಮುಗ್ಗರಿಸುತ ಧಸ್ಸೆಂದು; ಕೊನೆಯುಸಿರನು ಉಸುರಿ ಅಲ್ಲೆ
ಸತ್ಯಾಗ್ರಹ ಹೂಡಿತು!
ಕಾರ ಶಪಿಸಿ; ಛಳಿಗೆ ನಡುಗಿ; ನಡೆದು–ನಡೆದು ಬಸ್ಸು ಹಿಡಿದು.
ಅಂತೂ ಇಂತೂ ಕೆಲಸದೆಡೆಯ; ಸತ್ತು–ಬದುಕಿ ಸೇರಿ ಕೊನೆಗೆ,
ಬಾಸಿನೆದುರು ಬೆವರಿ ನಿಂತು; ಹಲ್ಲು ಕಿರಿದು; ತಲೆಯ ಕೆರೆದು,
ಕಾರು ಕೈಕೊಟ್ಟ ಕತೆಯ ಬಣ್ಣವಾಗಿ ಬಣ್ಣಿಸುತ್ತ–
ಕೆಲಸದಲ್ಲಿ ಮಗ್ನನಾಗಿ ಮೈಯ ಮರೆತೆನು(?)
ನೆನ್ನೆ ಅಲ್ಲಿ: ಇಂದು ಇಲ್ಲಿ; ನಾಳೆ ಎಲ್ಲೋ ಶಿವನೆ ಬಲ್ಲ!
ನಾಡಿಗಿಲ್ಲ ನೆಂಟಗಿಲ್ಲ: ಕರುಳಿಗಿಲ್ಲ ಒಡಲಿಗಿಲ್ಲ.
(ಮಡದಿಯೊಡನೆ ಸರಸಕಂತು ಕೊಂಚಾದರೂ ಸಮಯವಿಲ್ಲ)
ಮಕ್ಕಳೊಡನೆ ಆಟಕಿಲ್ಲ: ಮಿತ್ರರೊಡನೆ ಕೂಟಕಿಲ್ಲ.
ಅರ್ಧ ಆಯು ಕಳೆದಮೇಲೂ–ಅಲ್ಲೂ ಇಲ್ಲ–ಇಲ್ಲೂ ಇಲ್ಲ!
ತೌರೂ ಇಲ್ಲ–ಗೌರೂ ಇಲ್ಲ: ಮನೆಯೂ ಇಲ್ಲ–ಮಠವೂ ಇಲ್ಲ,
ಹೆಸರೂ ಇಲ್ಲ–ಬಸರೂ ಇಲ್ಲ: ಹಣವೂ ಇಲ್ಲ–ಗುಣವೂ ಇಲ್ಲ,
ಶಾಂತಿ ಇಲ್ಲ–ಸುಖವೂ ಇಲ್ಲ–ಏನೂ ಇಲ್ಲವಲ್ಲ!
ಎಲ್ಲ ಸಿಗುವ ಸ್ವರ್ಣಭೂಮಿ ಇದೇ ಎಂದು ನಂಬಿ ಬಂದು.
ಮೂಲಂಗಿಯ ಕಡಿವೆನೆಂದು ಮುಂದೆ ನಡೆವ ಕತ್ತೆಯಂತೆ–
ಬಾರ ಹೊತ್ತು ಸೋತು ಸತ್ತು–ಮುಗ್ಗರಿಸುತ ಮುನ್ನಡೆದರೆ–
ಪಂಢ್ರಪುರಕ್ಕೆ ಹೊರಟ ಭಕ್ತ–ಒಂದು ಹೆಜ್ಜೆ ಮುಂದೆ ಇಟ್ಟು
ಎರಡು ಹೆಜ್ಜೆ ಹಿಂದೆ ಇಟ್ಟು ಮುಂದೆ ನಡೆವೆನೆಂದು ಬಗೆದು
ಹಿಂದೆ ಹಿಂದೆ ಸರಿದನಲ್ಲ!



ಊರು ಬಿಟ್ಟು ಕೇರಿ ಬಿಟ್ಟು ಎಲ್ಲೋ ಬಂದು ಬಿದ್ದೆನಲ್ಲ,
ಭಾರಿ ಗಂಟು ಮಡಿವೆನೆಂದು ದೇಶಕೋಶ ಬಿಟ್ಟೆನಲ್ಲ,
(ಕೈಗೆ ಬಂದ ಡಾಲರೆಲ್ಲ ಕೊಚ್ಚಿಕೊಂಡು ಹೋಯಿತಲ್ಲ!)
ಮಾಮ – ಸ್ವಾಮ್ಯಗೆಲ್ಲ ತೆತ್ತು ಮೂರ್ಖನಾಗಿ ಹೋದೆನಲ್ಲ
ವಿಶ್ವ ಮಾರುಕಟ್ಟೆಯಲ್ಲಿ ಡಾಲರ್ ಜಾರಿಹೋಯಿತಲ್ಲ–
ಬಂದ ಇನ್‌ಕ್ರಿಮೆಂಟಿಗಿಂತ ಇನ್‌ಫ್ಲೇಷನ್ ಏರಿತಲ್ಲ !
ಚಕ್ರವ್ಯೂಹದಲ್ಲಿ ಸಿಕ್ಕಿ ಅಭಿಮನ್ಯುವಾದೆನಲ್ಲ.
ಕೆಲಸ ಬಿಟ್ಟು ಸಂಜೆ ಹೊರಟು ಟ್ರಾಫಿಕ್ಕಿಗೆ ಸಿಕ್ಕಿಬಿದ್ದು,
ಹೆಣಗಿ ಹೆಣಗಿ ಹೆಣವಾಗಿ: ಸೊರಗಿ ಸೊರಗಿ ಸೋರೆಯಾಗಿ,
ನೆನೆದು ನೆನೆದು ತೊಪ್ಪೆಯಾಗಿ: ನಡೆದು ಹಿಮದಿ ಜಾರಿ.
ಮನೆಯ ಸೇರಿ ಉಸಿರು ಬಿಡಲು……
ಹಿಮದ ಗುಡ್ಡೆ ಬೆಟ್ಟವಾಗಿ ನಕ್ಕು ನನ್ನ ನೋಡಿತಲ್ಲ!
(ಅಗೆದು ಅಗೆದು ತೋಡಿ ಎಸೆದು ಹಿಡಿದ ಸೊಂಟ ಶಿವನೆ ಬಲ್ಲ)
ಸಂಜೆ ಕಳೆದು ಕತ್ತಲಾಗಿ ಸೋತು ಗೂಡ ಸೇರಿದಾಗ–
ಮಡದಿ ಮಕ್ಕಳ ಕಳಕಳಿ
ಕಾದ ಹೊಟ್ಟೆ ತಂಪಿಗಾಗಿ ಬಿಸಿಯ ಸಾರು ಶಿಳಿ–ಶಿಳಿ!
ಹಗಲು ಕಳೆದು ರಾತ್ರಿ ಬಂತು. ಊಟವುಂಡು ಮತ್ತು ಬಂತು,
ಮತ್ತೆ ಮತ್ತೆ ಒರಗಿ ಮಲಗಿ ಅಂತೂ ಇಂತೂ ನಿದ್ರೆ ಬಂತು.
(ಪುನಃ ಬರುವ ಹಗಲ ಬಗ್ಗೆ ಮುಸುಕಿನಲ್ಲಿ ಕನಸು ಬಂತು)
ಮುಂಜಾನೆ ಎದ್ದಾಗ ಛಳಿ–ಛಳಿ: ಮತ್ತೆ ಆಖಾಡಕ್ಕೆ ಇಳಿ–ಇಳಿ!
ಅಂತ್ಯವಿಲ್ಲದೋಟದಲ್ಲಿ ಸೋತು ಸೋತು ಜೈಸಬೇಕು–
ಇಲಿಯ ಪಂದ್ಯಾಟದಲ್ಲಿ ಸೋತಮೇಲೂ ಈಸಬೇಕು!

–ಮೈ. ಶ್ರೀ. ನಟರಾಜ

( ಮೇ ೧೯೭೯ ರಲ್ಲಿ ನಡೆದ ಈಶಾನ್ಯ ಅಮೇರಿಕ ಕನ್ನಡ ಸಮ್ಮೇಲನದಲ್ಲಿ ಓದಲಾದ ಕವನ )


ಅಸಿಧಾರಾ
ಮೂಲ:
ಸಾಮರ್‌ಸೆಟ್ ಮಾಮ್
ಕನ್ನಡಕ್ಕೆ:
ಶ್ರೀಮತಿ ಗೀತಾ ಮೋಹನ ಮುರಳಿ.

# ಅಸಿಧಾರಾ

**‘ಹರಿತವಾದ ಅಲಗಿನ ಅಂಚನ್ನು ಕ್ರಮಿಸುವುದು ಅತಿಕಠಿಣ; ಹಾಗೆಯೇ ಮುಕ್ತಿಯ ಮಾರ್ಗವೂ ಅತ್ಯಂತ ಕಠೋರವಾದದ್ದೆಂದು ಜ್ಞಾನಿಗಳು ನುಡಿದಿದ್ದಾರೆ’- ಎಂದು ಕಠೋಪನಿಷತ್ತಿನಲ್ಲಿ ಹೇಳಲಾಗಿದೆ. ಜಗತ್ತಿನಲ್ಲಿ ದೇವ-ಮಾನವ, ಪಾಪ-ಪುಣ್ಯ, ಸತ್ಯ-ಜ್ಞಾನ, ಕರ್ಮ-ಮುಕ್ತಿ ಇವುಗಳ ರಹಸ್ಯ ಭೇದಿಸಿ, ಜೀವನದಲ್ಲಿ ಆತ್ಮಪರಿಪೂರ್ಣತೆಯ ಆದರ್ಶಧ್ಯೇಯವನ್ನು ಸಾಧಿಸಲು ಹೊರಟ ಅಮೇರಿಕದ ಯುವಕನ ಸಾಹಸ...... ಭಾರತಕ್ಕೆ ಬಂದು ಜ್ಞಾನಮಾರ್ಗದಿಂದ ಪರಮಾತ್ಮನನ್ನು ಅರಿಯುವ ಅನುಭವ... ಇದು ಸಾಮರ್‌ಸೆಟ್ ಮಾಮರ ‘ರೇಜರ್ಸ್ ಎಜ್’ ಕಥೆಯ ಸಾರಾಂಶ.**

ಈ ಕಥೆ ನನ್ನೊಡನೆ ನಿಕಟಸಂಬಂಧವುಳ್ಳ ವ್ಯಕ್ತಿಯ ಸ್ಮರಣೆಗಳ ವೃತ್ತಾಂತ. ಈ ವ್ಯಕ್ತಿಯೊಡನೆ ನನಗೆ ದೀರ್ಘಕಾಲಾಂತರಗಳಲ್ಲಿ ಪುನಃ ಪುನಃ ಸಂಪರ್ಕ ಸಂಭವಿಸುತ್ತಿತ್ತು. ನಾನು ವಿವರಿಸುವ ವ್ಯಕ್ತಿ ಪ್ರಖ್ಯಾತಪುರುಷನಲ್ಲ; ಬಹುಶಃ ಆತ ಎಂದಿಗೂ ಪ್ರಸಿದ್ಧಿ ಪಡೆಯಲಿಕ್ಕಿಲ್ಲ. ಕಡೆಗೊಮ್ಮೆ ಅವನು ಕೊನೆಯುಸಿರು ಎಳೆದಾಗ ಬದುಕಿನಲ್ಲಿದ್ದಾಗಿನ ಒಂದು ಅಲ್ಪ ಕುರುಹು ಕೂಡ ಬಿಟ್ಟು ಹೋಗಲಿಕ್ಕಿಲ್ಲ. ನದಿಯಲ್ಲಿ ಕಲ್ಲೆಸೆದಾಗ ನೀರಿನ ಮೇಲೆ ಉಳಿಯುವ ಅದರ ಸುಳಿವಿನಷ್ಟೇ ಆತನು ಭೂಮಿಯ ಮೇಲೆ ಬಾಳಿದ ಗುರುತು. ಆದರೆ ಆತ ತನಗಾಗಿ ಆಯ್ದುಕೊಂಡ ಜೀವನದ ರೀತಿ, ಹಾಗು ಅವನ ವ್ಯಕ್ತಿತ್ವದ ವಿಶಿಷ್ಟ ಶಕ್ತಿ, ಸೊಬಗುಗಳು, ತನ್ನ ಸಹಜೀವಿಗಳ ಮೇಲೆ ಎಂದಿಗೂ ಅಭಿವೃದ್ಧಿಯಾಗುವ ಪ್ರಭಾವ ಬೀರಿ ಆತನ ಮರಣಾನಂತರವೂ ಚಿರಕಾಲದ ವರೆಗೆ ಈ ಯುಗದಲ್ಲಿ ಅವನೊಬ್ಬ ಅಪೂರ್ವ ಪ್ರಾಣಿಯೆಂದು ಸ್ಥಿರಪಡಿಸುವುವು.

೧೯೧೯ರಲ್ಲಿ ನಾನು ದೂರದ ಈಶಾನ್ಯ ದೇಶಗಳಿಗೆ ಹೊರಟಾಗ ಅಮೇರಿಕದ **ಶಿಕಾಗೋ** ನಗರದಲ್ಲಿ ಎರಡು ಮೂರು ವಾರಗಳ **ಕಾಲ** ಇರಬೇಕಾಯಿತು. ಒಂದು ದಿನ ನನ್ನ ಮಿತ್ರ ಎಲಿಯಟ್ ಟೆಂಪಲ್‌ಟನ್ ನನಗೆ ಫೋನ್ ಮಾಡಿ, ತನ್ನ ಸೋದರಿಯ ನಿವಾಸದಲ್ಲಿ ಭೋಜನಕ್ಕೆ ಬರಲು ಆಮಂತ್ರಿಸಿದ. ಅಲ್ಲಿಯೇ ನನಗೆ ಲೊರೆನ್ಸ್ ಡ್ಯಾರೆಲ್‌ನ ಪ್ರಪ್ರಥಮ ಭೇಟಿಯಾದದ್ದು. ಲ್ಯಾರಿ ಅಂತೆ ಎಲ್ಲರೂ ಅವನನ್ನು ಕರೆಯುತ್ತಿದ್ದರು. ಕೇವಲ ಇಪ್ಪತ್ತು ವರುಷದ ಯುವಕ. ತೆಳ್ಳಗೆ ಸಾಧಾರಣ ಎತ್ತರವಾಗಿದ್ದ. ಸೌಮ್ಯ, ಶಾಂತ ಸ್ವಭಾವ, ತುಸು ಸಂಕೋಚದ ಪ್ರವೃತ್ತಿ. ಅಂಡವಾದ ಮುಖದಲ್ಲಿ ಗಾಂಭೀರ್ಯ, ಆತ್ಮಾಕರ್ಷಕ ಮುಗುಳು ನಗೆ; ಕಪ್ಪು ಕಂದು ಬಣ್ಣದ ಗುಂಗುರು ಕೂದಲು, ಅವನ ಕಣ್ಣುಗಳಲ್ಲಿ ವಿಚಿತ್ರ ತೀಕ್ಷ್ಣತೆ, ಪ್ರಖರ ತೇಜಸ್ಸು, ನೀಳವಾದ ಕೋಮಲವಾದ ಬಲವುಳ್ಳ ಕೈ-ಬೆರಳುಗಳು. ಅವನ ವ್ಯಕ್ತಿತ್ವದ ಸಹಜಸೌಂದರ್ಯ ಮನಸೆಳೆಯುವಂತಿತ್ತು.

ಎಲಿಯಟ್ಟನ ಸೋದರಿಯ ಮಗಳು ಇಸಾಬೆಲ್ ಬ್ರಾಡ್ಲೆಯೊಡನೆ ಲ್ಯಾರಿಯ ವಿವಾಹ ನಿಶ್ಚಯ

ವಾಗಿತ್ತು. ಅವಳು ಹತ್ತೊಂಬತ್ತರ ಚೆಲುವೆ. ಬಾದಾಮಿಯಾಕಾರದ ಮುಖ, ನೆಟ್ಟಗಿನ ಮೂಗು ಕಾಂತಿಯುಳ್ಳ ಕಣ್ಣುಗಳು, ಮನೋಹರ ಕೆಂದು–ಟಿಗಳು. ಅವಳು ಅಂದಚೆಂದದ ಯುವತಿ, ಸ್ಫುರದ್ರೂಪಿ, ಸದಾ ಉಲ್ಲಾಸಭರಿತಳಾದವಳು. ಅವಳಿಂದ ಪ್ರಫುಲ್ಲಿತ ಪ್ರಕೃತಿ ಸೌಮ್ಯ. ಪ್ರಭಾಪ್ರಾನ್ನ ಛಾಯ ಸದಾ ಹೊರಸೂಸುತ್ತಿತ್ತು. ಲ್ಯಾರಿ ಮತ್ತು ಇಸಾಬೆಲ್ಲರಲ್ಲಿಯ ಪ್ರೇಮ ಅನ್ಯೋನ್ಯವಾದದ್ದು. ನನಗೆ ತಿಳಿದ ಮಟ್ಟಿಗೆ ಅವರ ಸಂಸಾರಸುಖದಲ್ಲಿ ಯಾವ ಅಡ್ಡಿ ಆತಂಕಗಳೂ ಬರಲು ಕಾರಣವೇ ಇಲ್ಲ. ಅವರು ನಿಶ್ಚಿಂತೆಯಿಂದ ಮದುವೆಯಾಗಿ ಆಜನ್ಮಪರ್ಯಂತ ಸುಖವಾಗಿ ಬಾಳಬಹುದಾಗಿತ್ತು.

ಅದೊಂದು ಚಿಕ್ಕ ಭೋಜನಕೂಟ. ಆಮಂತ್ರಿತರಲ್ಲಿ ಡಾಕ್ಟರ್ ನೆಲ್ಸನ್ ಅಂತ ಲ್ಯಾರಿಯ ಪಾಲಕ ಹಾಗು ನಾನು ಇಬ್ಬರೇ ಮಧ್ಯವಯಸ್ಸಿನವರು. ಉಳಿದವರೆಲ್ಲರೂ ಇಸಾಬೆಲಳ ಸ್ನೇಹಿತರು. ನನ್ನ ಪಕ್ಕದಲ್ಲಿ ಕುಳಿತವಳು ಸೋಫೀ ಅಂತ ಸಾಧಾರಣರೂಪದ ಹದಿನೇಳು ವರ್ಷದ ಬಾಲಿಕೆ, ಅತ್ಯಂತ ಲಜ್ಜೆಯುಳ್ಳವಳಾಗಿ ಕಂಡಳು. ಅವಳ ವಿನಯ, ಚುರುಕುಬುದ್ಧಿ, ಹಾಗು ಹಾಸ್ಯ ಪ್ರವೃತ್ತಿ ಪರಿಣಾಮಕಾರಿಯಾಗುವಂತಹದು. ಆಚೆಯ ಬದಿಗೆ ಒಬ್ಬ ಪ್ರಭಾವಶಾಲಿ ತರುಣ ನನ್ನ ಕಣ್ಸೆಳೆದ. ಎತ್ತರವಾದ ದೃಢಕಾಯ, ಬಿರುಸಿನ ಮುಖಭಾವ, ಮೊಂಡು ಮೂಗು, ದಟ್ಟ ಕಪ್ಪು ಕೂದಲು, ದಪ್ಪಗಿನ ಹುಬ್ಬುಗಳು. ಅವನು ಯಾರೆಂದು ಸೋಫಿಯನ್ನು ವಿಚಾರಿಸಿದೆ.

'ಅವನು ಗ್ರೇ ಮ್ಯಾಟುರಿನ್' ಅಂತ ಹೇಳಿದಳು. 'ಅವನ ತಂದೆ ಕೋಟ್ಯಾಧೀಶ್ವರ, ನಮ್ಮ ಮಾರ್ವಿನ್ ಊರಲ್ಲಿಯೇ ಅತಿ ಗಣ್ಯ ವ್ಯಕ್ತಿ. ನದೀತೀರದಲ್ಲಿ ಅವರ ಭವ್ಯ ಬಂಗಲೆಯಿದೆ. ಗ್ರೇ ಅವರ ಏಕಮೇವ ಪುತ್ರ. ಅವನು ಇಸಾಬೆಲಳನ್ನು ಪ್ರೇಮಿಸುತ್ತಾನೆ; ಆದರೆ ಅವಳು ಲ್ಯಾರಿಯನ್ನೆ ಪ್ರೇಮಿಸುತ್ತಾಳೆ.'

'ಗ್ರೇ ಲ್ಯಾರಿಯೊಡನೆ ಮೇಲಾಡುವದಿಲ್ಲವೇ?'

'ಅವನು ಲ್ಯಾರಿಯ ಆಪ್ತಮಿತ್ರನೂ ಆಗಿದ್ದಾನೆ. ಗ್ರೇನ ಮನೋಭಾವ ಬಹಳ ಉನ್ನತ ಮಟ್ಟದ್ದು. ಲ್ಯಾರಿ. ಇಸಾಬೆಲರ ಪ್ರಣಯದಲ್ಲಿ ಆತ ಆತಂಕಪಡಿಸುವವನಲ್ಲ.'

ಭೋಜನಾನಂತರ, ಯುವಕ-ಯುವತಿಯರು ಕ್ಲಬ್‌ಗೆ ತೆರಳಿದರು. ನಾವಷ್ಟು ಹಿರಿಯರು ಮನೆಯಲ್ಲುಳಿದು, ಲ್ಯಾರಿಯ ವಿಷಯ ಚರ್ಚಿಸುವದಕ್ಕೆ ಆರಂಭವಾಯಿತು.

ಲ್ಯಾರಿಯು ಚಿಕ್ಕಂದಿನಲ್ಲಿಯೇ ಅವನ ತಾಯಿ–ತಂದೆ ತೀರಿಹೋಗಿದ್ದರು. ತನ್ನ ಹದಿನಾರನೆಯ ಎಳೆಯ ವಯಸ್ಸಿನಲ್ಲಿ ಅವನು ಶಾಲೆಯಿಂದ ತಪ್ಪಿಸಿಕೊಂಡು ಹೋಗಿ ವಾಯುಪಡೆಯಲ್ಲಿ ಸೇರಿಕೊಂಡು, ವಿಮಾನಚಾಲಕನಾಗಿ ಯುದ್ಧಕಾಲದಲ್ಲಿ ಫ್ರಾನ್ಸಿನಲ್ಲಿ ಸೇವೆ ಸಲ್ಲಿಸಿದ್ದ. ಅಲ್ಲಿಂದ ಮರಳಿದ ಬಳಿಕ, ಕಾಲೇಜು ಸೇರಬೇಕೆಂಬ ತಮ್ಮ ಸೂಚನೆಯನ್ನು ತಿರಸ್ಕರಿಸಿದ್ದನೆಂದು ಡಾ. ನೆಲ್ಸನ್ ಹೇಳಿದರು. ಯುದ್ಧದ ಕಟು ಅನುಭವಗಳಿಂದ ಒಂದು ವರ್ಷ ವಿರಾಮ ಪಡೆದಾಗಿದ್ದರೂ ಅವ–ನಿಗೆ ಯಾವ ಉದ್ಯೋಗವನ್ನು ಕೈಕೊಳ್ಳುವ ಪ್ರವೃತ್ತಿಯಿರಲಿಲ್ಲ. ಅನೇಕ ವ್ಯವಹಾರಸ್ಥರಿಂದ ಅವನಿಗೆ ಅಧಿಕಾರದ ಹುದ್ದೆಗಳು ದೊರೆತರೂ ಅವರಿಗೆಲ್ಲ ತನ್ನ ಧನ್ಯವಾದ ತಿಳಿಸಿ, ಉದ್ಯೋಗವನ್ನು ನಿರಾಕರಿಸಿದ್ದ. ಬೇರೆ ಯಾವ ಕಾರಣವನ್ನೂ ಕೊಡದೆ ತನ್ನ ಮನಸ್ಸಿನಲ್ಲಿ ಏನು ಮಾಡಬೇಕೆಂದು ಇನ್ನೂ ನಿರ್ಧಾರವಾಗಿಲ್ಲವೆಂದಷ್ಟೇ ಹೇಳುತ್ತಿದ್ದ. ಯಾವ ಕೆಲಸವನ್ನೂ ಮಾಡದೇ ಇರುವದರಲ್ಲಿಯೇ ಅವನಿಗೆ ಸಂಪೂರ್ಣ ತೃಪ್ತಿ. ಕೆಲವೇ ದಿನಗಳ ಹಿಂದೆ ಗ್ರೇ ಮ್ಯಾಟುರಿನ್ನನ ತಂದೆಯ ಆಫೀಸಿನಲ್ಲಿ ಉತ್ತಮ ಹಣ ಸಂಪಾದನೆಯಾಗುವಂಥ ಉದ್ಯೋಗವನ್ನು ನಿರಾಕಸಿದ್ದ.

ಏನೇ ಆದರೂ, ಅವನು ಅತ್ಯಂತ ಗುಣವಂತ ಸುಸ್ವಭಾವದವನೆಂದು ಎಲ್ಲರೂ ಒಪ್ಪಿದರು. ಯುದ್ಧರಂಗದಲ್ಲಿರುವಾಗ, ಅವನ ವ್ಯಕ್ತಿತ್ವವನ್ನೇ ಸಂಪೂರ್ಣ ಬದಲಾಯಿಸುವಂಥ ಯಾವುದೋ ಘಟನೆ ನಡೆದಿರಬೇಕೆಂದು ಭಾವಿಸಿದರು.

ಇಸಾಬೆಲ್ ಗ್ರೇ ಮ್ಯಾಟುರಿನ್ನನ್ನು ಮದುವೆಯಾಗಬೇಕೆಂದು ಅವಳ ತಾಯಿಯ ಅಭಿಲಾಷೆ. ಗ್ರೇನ ತಂದೆ ಶಿಕಾಗೋನಲ್ಲಿಯೇ ಅತ್ಯಂತ ಯಶಸ್ವಿ ದಲ್ಲಾಳಿ ವ್ಯವಹಾರಸ್ಥ. ಗ್ರೇನೂ ಅದೇ ಉದ್ಯೋಗದಲ್ಲಿ ಮುಂದುವರಿದು ಸಮೃದ್ಧಿ ಶಿಖರವನ್ನೇರುವದರಲ್ಲಿ ಸಂದೇಹವಿಲ್ಲ. ಇಸಾಬೆಲ್

ಒಪ್ಪಿದರೆ ಗ್ರೇಯೊಡನೆ ಸಂಬಂಧ ಅವಳಿಗೆ ಅತ್ಯುತ್ತಮ ಮತ್ತು ಸುಖದಾಯಕವೆಂದು ಎಲ್ಲರ ಅಭಿಪ್ರಾಯ.

ಮರುದಿನ ಬೆಳಿಗ್ಗೆ ನಾನು ಕ್ಲಬ್ಬಿನಲ್ಲಿಯ ಪುಸ್ತಕಾಲಯಕ್ಕೆ ಹೋದಾಗ, ಅಲ್ಲಿ ಕುಳಿತುಕೊಂಡು ಡಬ್ಲ್ಯು. ಜೇಮ್ಸರ "ಪ್ರಿನ್ಸಿಪಲ್ಸ್ ಆಫ್ ಸೈಕಾಲಜಿ"ಯನ್ನು ಲ್ಯಾರಿ ಓದುತ್ತಿದ್ದುದನ್ನು ನೋಡಿ ಆಶ್ಚರ್ಯಚಕಿತನಾದೆ. ಇಂಥ ಪುಸ್ತಕವನ್ನು ಒಬ್ಬ ಯುವಕ ಅದರಲ್ಲಿಯೂ ವಿಮಾನ ಚಾಲಕನಾದವನು ಓದಬಹುದೆಂದು ನಾನು ನಿರೀಕ್ಷಿಸಿರಲಿಲ್ಲ.

'ಇದನ್ನೇತಕ್ಕಾಗಿ ಓದುತ್ತಿರುವಿ'? ಅಂತ ಅವನ ಹತ್ತಿರ ಕುಳಿತು ಕೇಳಿದೆ.

'ನಾನು ತುಂಬಾ ಅಜ್ಞಾನಿ.'

'ನೀನು ತುಂಬಾ ಎಳೆಯವನು' ಅಂತ ನಸುನಕ್ಕೆ.

ಅವನು ಶೂನ್ಯವನ್ನು ದಿಟ್ಟಿಸುವಂತೆ, ವಿಚಾರ ಮಗ್ನನಾಗಿದ್ದ. ದೀರ್ಘ ಮೌನಾನಂತರ ಗಂಭೀರವಾಗಿ ನುಡಿದ: 'ಫ್ರಾನ್ಸಿನಿಂದ ತಿರುಗಿ ಬಂದ ಮೇಲೆ ನಾನು ಕಾಲೇಜು ಸೇರಬೇಕೆಂದು ಎಲ್ಲರೂ ಒತ್ತಾಯ ಮಾಡಿದರು. ನನಗದು ಸರಿ ಎನಿಸಲಿಲ್ಲ. ಅಲ್ಲಿಯ ಅಧ್ಯಾಪಕರು ನನಗೆ ಬೇಕಾಗಿರುವ ಜ್ಞಾನವನ್ನು ನೀಡಬಹುದೆಂಬುದರಲ್ಲಿ ನನಗೆ ನಂಬಿಕೆಯಾಗಿರಲಿಲ್ಲ.'

'ಆದರೆ ಮಾರ್ಗದರ್ಶಕರಿಲ್ಲದೆ ತಪ್ಪು ದಾರಿಯಲ್ಲಿ ಎಡವುತ್ತ ಬರೀ ಅಂಧಕಾರದಲ್ಲಿ ಅಲೆದಾಡುತ್ತ ವ್ಯರ್ಥ ಕಾಲಕ್ಷೇಪವಾಗುದುಂಟು.'

'ಅಂಧಕಾರದ ಮಾರ್ಗಗಳಲ್ಲಿಯೇ ನನ್ನ ಧ್ಯೇಯಕ್ಕನುಗುಣವಾದದ್ದು ಲಭಿಸಬಹುದು.'

'ಏನು ನಿನ್ನ ಧ್ಯೇಯ?'

ಆತ ಅನುಮಾನಿಸಿದ: 'ಅದೇ ನನಗೇ ಇನ್ನೂ ಅರ್ಥವಾಗಿಲ್ಲ.'

ನಾನು ಸುಮ್ಮನಿದ್ದೆ. ಈ ಯುವಕನ ಅಂತರಂಗದಲ್ಲಿ ಯಾವುದೋ ಭಾವನೆ, ಕಲ್ಪನೆಗಳ ತುಮುಲವೆದ್ದು, ಚಿತ್ತಚಂಚಲತೆಯಿಂದ ಗೊತ್ತುಗುರಿಯಿಲ್ಲದೆ ಮುಂದೆ ನುಗ್ಗುತ್ತಿದ್ದಾನೆಂದು ನನಗೆನಿಸಿತು. ಈತ ವಿಚಿತ್ರವಾಗಿ ನನ್ನ ಸಹಾನುಭೂತಿಯನ್ನು ಕೆರಳಿಸಿದ್ದ. ಅವನಲ್ಲಿ ಪ್ರೀತಿಪಾತ್ರನಾಗುವಂಥ ವಿಶೇಷಾಂಶವಿತ್ತು.

'ನಿನಗೊಂದು ಉತ್ತಮ ಉದ್ಯೋಗದ ಪ್ರಸ್ತಾಪ ಬಂದಿದೆಯಂತೆ?'

'ಅತ್ಯುತ್ತಮ ಉದ್ಯೋಗ?'

'ಅದಕ್ಕೆ ಒಪ್ಪುವಿಯಾ?'

'ಬಹುಶಃ ಇಲ್ಲ.'

'ಯಾಕೆ?'

'ಅದನ್ನು ಮಾಡಬೇಕೆಂಬ ಮನಸ್ಸಿಲ್ಲ.'

'ಯಾವ ಕೆಲಸದಲ್ಲಿಯೂ ಒಲವಿಲ್ಲದವರು ಲೇಖಕರಾಗುತ್ತಾರೆ' ಚೇಷ್ಟೆ ಮಾಡಿದೆ.

'ನನ್ನಲ್ಲಿ ಆ ಪ್ರತಿಭೆಯಿಲ್ಲ.'

'ಹಾಗಾದರೆ ಏನು ಮಾಡಬೇಕೆಂದು ಮನಸ್ಸಿದೆ?'

'ಸುಮ್ಮನೆ ಅಲೆದಾಡಬೇಕೆಂದು...' ಅವನು ಮುಗುಳುನಗೆ ಬೀರಿದ.

ನನಗೂ ನಗುವಂತೆ ಆಯಿತು. 'ಶಿಕಾಗೋನಲ್ಲಿ ಮಾತ್ರ ಸುಮ್ಮನೆ ಅಲೆದಾಡಿಕೊಂಡಿರಲು ಸಾಧ್ಯವಿಲ್ಲ' ಎಂದು ಹೇಳಿ ಹೊರಟೆ.

ಕಟ್ಟಕಡೆಗೆ ಮ್ಯಾಟುರಿನ್ ವ್ಯವಹಾರದಲ್ಲಿ ಉದ್ಯೋಗವನು ಲ್ಯಾರಿ ನಿಶ್ಚಿತವಾಗಿ ನಿರಾಕರಿಸಿದಾಗ ಇಸಾಬೆಲ್ ಬಹಳೇ ಉದ್ವಿಗ್ನಗೊಂಡಳು. ನಿರುದ್ಯೋಗಿಯನ್ನು ಮದುವೆಯಾಗಲು ಅವಳಿಗೆ ಎಳ್ಳಷ್ಟೂ ಇಷ್ಟವಿರಲಿಲ್ಲ. ಈ ವಿಷಯ ಅವಳು ಲ್ಯಾರಿಯೊಂದಿಗೆ ಚರ್ಚಿಸಲೇಬೇಕೆಂದು ಅವಳ ತಾಯಿಯ ಅಭಿಪ್ರಾಯ. ಕೊನೆಗೊಂದು ದಿನ ಅವನೊಡನೆ ಮಾರ್ವಿನ್‌ಗೆ ವನಭೋಜನಕ್ಕೆಂದು ಹೋಗಿ, ಊಟವಾದ ಮೇಲೆ ಪ್ರಾರಂಭಿಸಿದಳು.

'ಲ್ಯಾರಿ, ನೀನು ಯಾವುದಾದರೊಂದು ಉದ್ಯೋಗ ಕೈಕೊಳ್ಳಬೇಕು. ಹೆಚ್ಚು ದಿನ ಹೀಗೇ ಬಿಟ್ಟಲ್ಲಿ ಮುಂದೆ ಇನ್ನೂ ಕಠಿಣವಾಗುವದು.'

'ನಾನು ಕೇವಲ ಕರಾರುಪತ್ರಗಳನ್ನು ಮಾರುವದಕ್ಕಿಂತ ಹೆಚ್ಚಿನ ಕಾರ್ಯವನ್ನು ಈ ಜೀವಮಾನದಲ್ಲಿ ಸಾಧಿಸಬೇಕೆಂದು ಯೋಚಿಸಿದ್ದೇನೆ.'

'ಹಾಗಾದರೆ ಕಾಯದೆ ಅಥವಾ ವೈದ್ಯವೃತ್ತಿಯನ್ನು ಅನುಸರಿಸು.'

'ಇಲ್ಲ. ನನಗದನ್ನೂ ಮಾಡುವ ಮನಸ್ಸಿಲ್ಲ.'

'ಮತ್ತೇನು ಮಾಡಬೇಕೆಂದು ಇಷ್ಟಪಡುತ್ತಿ'?

'ಸುಮ್ಮನೆ ಅಲೆದಾಡಬೇಕೆಂದು......'

ಅವಳ ಕಣ್ಣುಗಳು ಹನಿಗೂಡಿದವು. 'ತಮಾಷೆ ಮಾಡಬೇಡ, ಲ್ಯಾರಿ. ಇದು ತುಂಬಾ ಗಂಭೀರ

ವಿಷಯ'.

ಲ್ಯಾರಿ ಅವಳ ಹತ್ತಿರ ಸರಿದು ಕುಳಿತು, ಅವಳ ತೋಳನ್ನು ಸುತ್ತುವರಿಸಿ. 'ಅಳಬೇಡ ಪ್ರಿಯೇ ನೀನು ದುಃಖಿಸಬಾರದೆಂದು ನನ್ನ ಆಸೆ.'

ಅವನ ಧ್ವನಿಯಲ್ಲಿನ ಮೃದುತ್ವ ಅವಳ ಹೃದಯ ಕಲಕಿ. ಕಣ್ಣೀರು ತಡೆಯಲಿಕ್ಕಾಗಲಿಲ್ಲ. 'ನನಗೆ ಇದೆಲ್ಲಾ ಹೇಳಲು ಬಲು ಸುಲಭ ಲ್ಯಾರಿ. ಆದರೆ ನೀನು ನಾನು ದುಃಖಿಸುವಂತೆಯೇ ಮಾಡುವಿಯಲ್ಲ! ನೋಡು. ಲ್ಯಾರಿ, ನಾನು ನಿನ್ನ ಎಷ್ಟು ಪ್ರೇಮಿಸುತ್ತೇನೆ!'

'ನಾನೂ ನಿನ್ನ ತುಂಬಾ ಪ್ರೇಮಿಸುತ್ತೇನೆ.'

'ಇಸಾಬೆಲ್ ತುಸು ದೂರ ಸರಿದು. ನುಡಿದಳು: 'ನಾವು ವಿವೇಕವುಳ್ಳರಾಗಬೇಕು; ಲ್ಯಾರಿ ಗಂಡಸು ಏನಾದರೊಂದು ಉದ್ಯೋಗ ಮಾಡಲೇಬೇಕು. ಅದು ಆತ್ಮಗೌರವ, ಸ್ವಪ್ರತಿಷ್ಠೆಯ ಸಂಕೇತ. ಹಣವಿಲ್ಲದೆ ಯಾರಿಗೂ ಜೀವಿಸಲು ಅಸಾಧ್ಯ.'

'ನನಗೆ ಹಣ ಗಳಿಸುವದರಲ್ಲಿ ಆಸ್ಥೆಯೇ ಇರುವದಿಲ್ಲ. ಮೇಲಾಗಿ ನನಗೆ ಸಾಕಷ್ಟು ದುಡ್ಡಿದೆ'.

ಮತ್ತೆ ಮೌನ. ಆನಂತರ ಅವನ ಮಾತಿನಿಂದ ಅವಳು ಬೆದರಿದಳು.

'ಸತ್ತವರು ಸಾವಿನಲ್ಲಿ ಎಷ್ಟು ಭಯಂಕರವಾಗಿ ಸತ್ತಂತೆ ಕಾಣುತ್ತಾರೆ.'

'ಅಂದರೆ...?'ಗಾಬರಿಯಾಗಿ ಕೇಳಿದಳು.

ಅಷ್ಟೇ, ವಿಷಣ್ಣನಾಗಿ ನಸುನಕ್ಕ. 'ಆಕಾಶದಲ್ಲಿ ಏಕಾಂಗಿಯಾಗಿ ಹಾರಾಡುವಾಗ, ಅನೇಕ ವಿಚಿತ್ರ ಅನಿಶ್ಚಿತ ಸಂಬಂಧ ಕಲ್ಪನೆಗಳು ಬರುತ್ತವೆ.'

'ನೀನು ಫ್ರಾನ್ಸಿಗೆ ಹೋಗಿ ಬಂದ ನಂತರ ನಿನ್ನಲ್ಲಿ ಬಹಳೇ ಪರಿವರ್ತನೆಯಾದಂತಿದೆ.'

'ಅದರಲ್ಲಿ ವಿಚಿತ್ರವೇನಿಲ್ಲ. ಅಲ್ಲಿದ್ದಾಗ ನನ್ನ ಜೀವನದಲ್ಲಿ ಏನೆಲ್ಲಾ ಸಂಭವಿಸಿತು, ನಿನಗೆ ಗೊತ್ತಿಲ್ಲ. ನನ್ನ ಜೀವ ಉಳಿಸಲು ಹೋಗಿ, ನನ್ನ ಆಪ್ತಮಿತ್ರ ಮಡಿದ ಭೀಕರ ಘಟನೆಯನ್ನು ನಾನೆಂದಿಗೂ ಮರೆಯಲು ಸಾಧ್ಯವಿಲ್ಲ. ಆ ದುರಂತ ನನ್ನ ಮನಸ್ಸನ್ನು ಸದಾ ಕೊರೆಯುತ್ತಿದೆ.' ವ್ಯಥೆ ತುಂಬಿದ ಕಣ್ಣುಗಳಿಂದ ಅವಳತ್ತ ನೋಡಿದ.

'ನನಗೆಲ್ಲಾ ಹೇಳು, ಲ್ಯಾರಿ. ನಿನಗೆ ಸಂತಾಪವಾಗಿದೆಯಲ್ಲವೇ?'

'ನಿನ್ನನ್ನು ಸಂತಾಪಪಡಿಸುತ್ತಿದ್ದೇನೆಂದೆಷ್ಟೇ ನನಗೆ ಸಂತಾಪ.' ಅವಳ ಕೈಯನ್ನು ತನ್ನ ಕೈಯಲ್ಲಿ ಹಿಡಿದುಕೊಂಡ. ಅವನ ಸ್ಪರ್ಶದಲ್ಲಿ ವ್ಯಕ್ತವಾದ ಪ್ರೇಮ ಮಮತೆಯಿಂದ ಅವಳ ಹೃದಯ ಅರಳಿತು.

'ನನ್ನ ಮನಸ್ಸಿನಲ್ಲಿ ನಿರ್ಧಾರವಾಗುವವರೆಗೆ ಶಾಂತಿ ಸಿಗುವದಿಲ್ಲ' ಗಂಭೀರವಾಗಿ ನುಡಿದ. 'ಆದರೆ ನನ್ನ ವಿಚಿತ್ರ, ಸಂದಿಗ್ಧ ಭಾವನೆಗಳನ್ನು ಶಬ್ದಗಳಲ್ಲಿ ರೂಪಿಸುವದು ಬಲು ಕಠಿಣವಾಗಿದೆ...ಒಂದು ಗಂಟೆಯ ಹಿಂದಷ್ಟೇ ಉಲ್ಲಾಸದಿಂದ ನಕ್ಕು ನಲಿದಾಡುತ್ತಿದ್ದ ಮನುಷ್ಯ, ಒಮ್ಮಿಂದೊಮ್ಮೆ ಸತ್ತು ಬಿದ್ದದ್ದನ್ನು ನೆನೆದರೆ...ಜೀವನವೆಂದರೇನು, ಅದಕ್ಕೆ ನಿಜವಾದ ರೂಪ, ಅರ್ಥವಿದೆಯೋ ಅಥವಾ ಸೃಷ್ಟಿಯೆಲ್ಲಾ ಅಂಧ ಅದೃಷ್ಟದ ಒಂದು ದಾರುಣ ಪ್ರಮಾದವೋ ಅಂತ ನನ್ನೊಳಗೇ ಚಿಂತಿಸಿಕೊಳ್ಳಬೇಕೆನಿಸುತ್ತದೆ.'

ಸದ್ಯ ಪ್ಯಾರಿಸ್ಸಿಗೆ ಹೋಗಿ ಇರಬೇಕೆಂದು ಲ್ಯಾರಿಯು ನಿರ್ಧರಿಸಿದ್ದ. ಒಂದೆರಡು ವರ್ಷ ಅಲ್ಲಿದ್ದು




"...ಆಕಾಶವಾಣಿ ಬೆಂಗಳೂರು............ ......ಹವಾಮಾನ ವರದಿಯ ಪ್ರಕಾರ ಇಂದು ಕೋಲಾರ ಮತ್ತು ಸುತ್ತಮುತ್ತಲ ಪ್ರದೇಶದಲ್ಲೆಲ್ಲಾ ಬಿಸಿಲಿನಿಂದ ಕೂಡಿದ ವಾತಾವರಣವಿರುತ್ತೆ......"



ಭಾರತೀಯ ಪರಂಪರೆಯಲ್ಲಿ ನೃತ್ಯವು ಧಾರ್ಮಿಕ ಆರಾಧನೆಯ ಒಂದು ವಿಧವಾಗಿದೆ. ದೇವಾಧಿದೇವತೆಗಳ ಗೌರವಾರ್ಥವಾಗಿ ಮತ್ತು ಸ್ತುತಿರೂಪವಾಗಿ ರೂಪಶ್ರೀಯ ಅಂಗ ಭಾವಗಳ ತುಡಿತ ಮಿಡಿತಗಳ ಪ್ರದರ್ಶನವಾಗಿದೆ. ಈಶ್ವರನು ತಾನೇ ನೃತ್ಯ ದೇವನಾಗಿದ್ದ ಮತ್ತು ಈಶ್ವರನ ನೃತ್ಯವೆಂದರೆ ಜಗತ್ತಿನ ಚಲನೆಯ ಮೂರ್ತಸ್ವರೂಪವೆಂದು ಪರಿಗಣಿಸಲಾಗುತ್ತದೆ.

ಇದೇ ರೀತಿಯಲ್ಲಿ ದಾವಣಗೆರೆ ಕಾಟನ್ ಮಿಲ್ಸ್ ತಮ್ಮ ಪರಂಪರಾಗತ ಕೌಶಲ್ಯವನ್ನು ಹಲವು ವಿಧದ ಉತ್ಕೃಷ್ಟ ಬಟ್ಟೆಗಳ ರೂಪದಲ್ಲಿ ನಿಮಗೆ ನೀಡುತ್ತಾರೆ. ಚೆಲುವಾಗಿ ನೇಯ್ದು ಮತ್ತು ಕೌಶಲ್ಯಪೂರ್ಣವಾಗಿ ಮಿಶ್ರ ಮಾಡಿದ ಈ ಬಟ್ಟೆಗಳು ಪ್ರತಿಯೊಬ್ಬರ ಅಭಿರುಚಿಗೆ ಅನುರೂಪವಾಗಿವೆ.

ಒಡಿಸ್ಸಿ ಅತ್ಯಂತ ಪುರಾತನವಾದ ಭಾರತೀಯ ನೃತ್ಯ ಶೈಲಿ ಎಂದು ಹೇಳಲಾಗುತ್ತದೆ. ಇದಕ್ಕೆ ಒರಿಸ್ಸಾದಲ್ಲಿರುವ, ಕ್ರಿಸ್ತ ಶಕ ಪೂರ್ವ 2ನೆಯ ಶತಮಾನದ ರಾಣಿ ಗುಂಫಾ ಗುಹೆಗಳಲ್ಲಿನ ಪ್ರಾಚೀನ ಶಿಲ್ಪಕಲೆಯ ಶೋಧನೆಯು ಆಧಾರವಿದೆ. 7ನೇ ಶತಮಾನದ ಆದಿಯಿಂದ 14ನೆಯ ಶತಮಾನದ ವರೆಗಿನ ದೇವಾಲಯಗಳಲ್ಲಿನ ಶಿಲ್ಪ ಕೃತಿಗಳಲ್ಲಿ ಒಡಿಸ್ಸಿ ನೃತ್ಯವನ್ನು ನಿರೂಪಿಸದ ಕೃತಿ ಒಂದೂ ಇಲ್ಲ. ಒಬ್ಬರ ನಂತರ ಒಬ್ಬರಂ ಕಳಿಂಗದ ರಾಜರು ನೃತ್ಯವನ್ನು ದೇವಾಲಯಗಳಲ್ಲಿನ ಪೂಜಾ ವಿಧಿಗಳಲ್ಲಿ ಒಂದು ಭಾಗವನ್ನಾಗಿ ಉಳಿಸಿಕೊಂಡಿದ್ದರು. ಒಡಿಸ್ಸಿ ನೃತ್ಯ ಶೈಲಿಯು ಭರತ ನಾಟ್ಯದ ಹಾಗೆಯೇ ಕಂಡುಬರುವುದಾದರೂ, ಅದರಲ್ಲಿ ಅದರದ್ದೇ ಆದ ನಿಶ್ಚಿತ ವೈಲಕ್ಷಣ್ಯಗಳಿವೆ. ಇತರ ಪ್ರಾಚೀನ ನೃತ್ಯರೂಪಗಳಲ್ಲಿ ಸಾಧಾರಣವಾಗಿ ಕಾಣಬರದಂತಹ 'ತ್ರಿಭಂಗ'ವು ಒಡಿಸ್ಸಿ ನೃತ್ಯದ ಅತ್ಯಂತ ವಿಶೇಷ ಮಾದರಿಯ ಭಂಗಿಗಳಲ್ಲೊಂದಾಗಿದೆ.

ಉತ್ತಮ ಬಟ್ಟೆಗಳ ಉತ್ಪಾದನಾ ಪರಂಪರೆಯಿರುವ

# ದಾವಣಗೆರೆ

ದಿ ದಾವಣಗೆರೆ ಕಾಟನ್ ಮಿಲ್ಸ್ ಲಿಮಿಟೆಡ್, ದಾವಣಗೆರೆ 577 002.

ಶೋ ರೂಮ್‌ಗಳು:

ಕಾವೇರಿ ಭವನ, ಬೆಂಗಳೂರು-560 009. ದಾಜಿಬಾನ್‌ಪೇಟೆ, ಹುಬ್ಬಳ್ಳಿ-580 020. ಚಿತ್ರದುರ್ಗ ರೋಡ್, ದಾವಣಗೆರೆ-577 002.

ತನ್ನ ವಿಚಾರ, ಸಮಸ್ಯೆಗಳನ್ನು ಪರಿಹರಿಸಿಕೊಂಡು ಮುಂದಿನ ಧ್ಯೇಯವನ್ನು ಅರಿತುಕೊಳ್ಳಬಹುದೆಂದು ಅವನಿಗೆನಿಸಿತ್ತು. ಆ ಮೇಲೆ ಶಿಕಾಗೋಗೆ ತಿರುಗಿ ಬಂದು ಯಾವುದಾದರೊಂದು ಉದ್ಯೋಗವನ್ನು ಕೈಕೊಳ್ಳಬೇಕೆಂದಿದ್ದ. ಇಸಾಬೆಲ್ ಅವನಿಗಾಗಿ ದಾರಿ ನೋಡಲು ವಚನ ಕೊಟ್ಟಳು.

೨

ಬರುವ ವರ್ಷ ಪ್ಯಾರಿಸ್ಸಿನಲ್ಲಿ ನನಗೆ ಮತ್ತೆ ಲ್ಯಾರಿಯ ಭೇಟಿಯಾಯಿತು. ಪ್ಯಾರಿಸ್ ತನಗೆ ಬಹಳಷ್ಟು ಹಿಡಿಸಿದೆ ಅಂತ ನನಗೆ ಹೇಳಿದ. ಇಷ್ಟು ದಿನ ಏನು ಮಾಡುತ್ತಿರುವಿಯೆಂಬ ನನ್ನ ಪ್ರಶ್ನೆಗೆ ಸುಮ್ಮನೆ ಅಲೆದಾಡಿಕೊಂಡು, ತುಂಬಾ ಓದುತ್ತಿದ್ದೇನೆಂದೂ ಉತ್ತರಿಸಿದ. ಅವನು ತುಸು ಇಳಿದು ಹೋದ ಹಾಗೆ ಕಂಡರೂ ಮುಖದಲ್ಲಿ ಅದೇ ಮನಸ್ಸಿನ ದೃಢ ನಿರ್ಧಾರ, ಅದೇ ನಿಷ್ಕಪಟ ಮಂದಹಾಸ.

ಅದೇ ವರ್ಷ ಇಸಾಬೆಲ್ ತಾಯಿಯೊಡನೆ ಪ್ಯಾರಿಸ್ಸಿಗೆ ವಾಸಕ್ಕಾಗಿ ಬಂದಳು. ಪ್ಯಾರಿಸ್ಸಿನಲ್ಲಿ ಕಳೆದ ಎರಡು ವರ್ಷದ ಕೊನೆಗೆ ಲ್ಯಾರಿ ಶಿಕಾಗೋಗೆ ತಿರುಗಿ ಬಂದು ಉದ್ಯೋಗಸ್ಥನಾಗದಿದ್ದರೆ ಅವನ ಜೊತೆ ವಿವಾಹ ನಿಶ್ಚಯವನ್ನು ಮುರಿದುಬಿಡುವುದೆಂಬ ತಾಯಿಯ ಮಾತಿಗೆ ಒಪ್ಪಿದಳು.

ಲ್ಯಾರಿ ಹಾಗು ಇಸಾಬೆಲ್ ಮತ್ತೆ ಅತ್ಯಂತ ಸಂತೋಷದಿಂದ ಕೂಡಿಕೊಂಡಿದ್ದರು. ಕ್ಲಬ್‌ಗೆ ಹೋಗುವುದು, ಔತಣಕೂಟ ಇತ್ಯಾದಿ ಸಮಾರಂಭಗಳಲ್ಲಿ ಆನಂದಿಸುತ್ತಲೇ ಕಾಲ ಕಳೆಯಿತು. ಆದರೆ ಲ್ಯಾರಿ ಪ್ಯಾರಿಸ್ಸಿನಲ್ಲಿ ಎಲ್ಲಿ ಇರುತ್ತಿದ್ದ, ಏನು ಮಾಡುತ್ತಿದ್ದನೆಂದು ಯಾರಿಗೂ ಸುಳಿವಿಲ್ಲ. ಬಹುಶಃ ಆತ ಅನೈತಿಕ ಜೀವನವನ್ನು ನಡೆಸಿದ್ದನೆಂದು ಎಲಿಯಟ್ ಸಂಶಯಪಡುತ್ತಿದ್ದ. ಇಸಾಬೆಲ್ಲಳಿಗೂ ಲ್ಯಾರಿಯ ಜೀವನದ ಬಗ್ಗೆ ಕುತೂಹಲ. ಒಂದು ದಿನ ಅವನ ವಾಸದ ಕೋಣೆಯನ್ನು ತನಗೆ ತೋರಿಸಲೇಬೇಕೆಂಬ ಅವಳ ಒತ್ತಾಯಕ್ಕೆ ಕಟ್ಟುಬಿದ್ದು ಲ್ಯಾರಿ ಅವಳನ್ನು ಸಣ್ಣದೊಂದು ವಸತಿಗೃಹದಲ್ಲಿನ ತನ್ನ ಮುರುಕು, ಮಾಸಲು ಕೋಣೆಗೆ ಕರೆದುಕೊಂಡು ಹೋದ. ಆ ಚಿಕ್ಕ ಕೋಣೆಯಲ್ಲಿ ಒಂದು ಮಂಚ, ಕುರ್ಚಿ ಮತ್ತು ಭಾರೀ ಗ್ರಂಥಗಳನ್ನು ಹೊತ್ತು ನಿಂತ ಒಂದು ಮೇಜು ನೋಡಿ ಅವಳಿಗೆ ನಿರಾಶೆಯಾಗಿ ಮತ್ತೆ ಅದೇ ವಿಷಯ ಪ್ರಸ್ತಾಪಿಸಿದಳು.

'ಪ್ಯಾರಿಸ್ಸಿನಲ್ಲಿ ಇಷ್ಟುದಿನ ನೀನೇನು ಮಾಡುತ್ತಿದ್ದೆಯೆಂದು ನನಗೆ ಹೇಳಬಹುದಲ್ಲವೇ, ಲ್ಯಾರಿ?'

'ತುಂಬಾ ಓದಿಕೊಂಡಿದ್ದೇನೆ. ದಿನಾಲು ಎಂಟು ತಾಸು. ಹತ್ತು ತಾಸು ಓದುವದೇ ನನ್ನ ಕೆಲಸ. ಫ್ರೆಂಚ್ ಸಾಹಿತ್ಯ, ಲ್ಯಾಟಿನ್ ಭಾಷೆ, ಈಗ ಗ್ರೀಕ್ ಕಲಿಯುತ್ತಿದ್ದೇನೆ.'

'ಇದರಿಂದೆಲ್ಲಾ ಏನು ಪ್ರಯೋಜನ?'

'ಜ್ಞಾನಸಂಪಾದನೆ.'

'ಓಹ್, ತುಂಬಾ ಅವ್ಯವಹಾರಿಕವಾದದ್ದು.'

'ಇರಬಹುದು. ಆದರೆ ಎಷ್ಟು ಸ್ಫೂರ್ತಿಗೊಳಿಸುವಂತಹದು ಗ್ರೀಕ್ ಸಾಹಿತ್ಯ ಓದುವಾಗ ನನಗೆ ತುದಿಗಾಲಿನ ಮೇಲೆ ನಿಂತುಕೊಂಡು ಕೈ ಚಾಚಿದರಷ್ಟೇ ತಾರೆಗಳನ್ನು ಸ್ಪರ್ಶಿಸಬಹುದೆಂಬ ರೋಮಾಂಚಕ ಅನುಭವ.'

'ಶಿಕಾಗೋಕ್ಕೆ ಎಂದು ತಿರುಗಿ ಬರುವಿ?'

'ಶಿಕಾಗೋ ? ನನಗೆ ಗೊತ್ತಿಲ್ಲ. ಅದರ ಬಗ್ಗೆ ನಾನು ವಿಚಾರಮಾಡಿಲ್ಲ.'

'ಆದರೆ ಲ್ಯಾರಿ, ನೀನು ಹೇಳಿದ್ದೆಯಲ್ಲ; ಎರಡು ವರ್ಷಗಳಲ್ಲಿ ನಿನಗೆ ತಿಳಿಯಬೇಕಾದದ್ದು ತಿಳಿಯದೇ ಹೋದರೆ ಅದನ್ನು ಬಿಟ್ಟುಬಿಡುತ್ತೇನೆ ಅಂತ?'

'ಈಗ ನನಗೆ ಕೈಬಿಡಲು ಸಾಧ್ಯವಿಲ್ಲ. ನಾನು ಹೊಸ್ತಿಲಮೇಲೆ ನಿಂತಿದ್ದೇನೆ.ನನ್ನೆದುರಿಗೆ ಹರಡಿರುವ ಅಂತರಂಗದ ಅನಂತವಿಸ್ತಾರವು ನನ್ನನ್ನು ಆಹ್ವಾನಿಸುತ್ತಿದೆ. ಅದನ್ನೆಲ್ಲ ಸಂಚರಿಸಲು ನಾನು ಆತುರನಾಗಿರುವೆ.'

'ಅಲ್ಲಿ ನಿನಗೇನು ಸಿಗುವುದು?'

'ನನ್ನ ಪ್ರಶ್ನೆಗಳಿಗೆ ಉತ್ತರಗಳು' ಅವಳತ್ತ ಹುಡುಗಾಟಿಕೆಯ ನಸುನೋಟ ಬೀರಿದ. ಆದರೆ ಅವನ ಸ್ವಭಾವ ತಿಳಿದ ಅವಳಿಗೆ ಆತ ತಮಾಷೆಯಿಂದ ಮಾತನಾಡುತ್ತಿಲ್ಲವೆಂದು ಗೊತ್ತು. 'ದೇವರು ಇರುವನೋ ಅಥವಾ ಇಲ್ಲವೋ, ಜಗತ್ತಿನಲ್ಲಿ ಪಾಪ ಹೇಗೆ ಹುಟ್ಟಿ ಬೆಳೆದಿದೆ; ನನ್ನ ಆತ್ಮ ಅಮರವಾಗಿದೆಯೇ ಅಥವಾ ನಾನು ಸತ್ತುಹೋದ ಬಳಿಕ ಅದೇ ಅಂತ್ಯವೋ...'

'ಆದರೆ ಲ್ಯಾರಿ, ಅನೇಕ ಜನರು ಸಾವಿರಾರು ವರ್ಷಗಳಿಂದ ಇವೇ ಪ್ರಶ್ನೆಗಳನ್ನು ಕೇಳುತ್ತಾ ಇದ್ದಾರೆ.

ಅವುಗಳಿಗೆ ಉತ್ತರ ಸಿಗುವದಾಗಿದ್ದರೆ ಇಷ್ಟರಲ್ಲಿ ಸಿಗಬಹುದಿತ್ತು.'

'ಆದರೆ ಪ್ರಶ್ನೆ ಕೇಳುವದನ್ನು ಬಿಡಲು ಸಾಧ್ಯವಿಲ್ಲ; ಪ್ರಶ್ನೆ ಕೇಳುತ್ತಲೇ ಇರಬೇಕು ಅಂತಿಷ್ಟೇ ಅದರ ಸಮರ್ಥನೆ. ಎಷ್ಟೋ ಜನರಿಗೆ ತೃಪ್ತಿಕರ ಉತ್ತರಗಳೂ ಸಿಕ್ಕಿವೆ.'

ಇಸಾಬೆಲ್ ಉಸಿರೆಳೆದುಕೊಂಡಳು.' ಹಾಗಾದರೆ ಇದಕ್ಕಿಲ್ಲ ನಿನಗೆ ಇನ್ನೆಷ್ಟು ದಿನ ಹಿಡಿಯುವದು?'

'ನನಗೆ ಗೊತ್ತಿಲ್ಲ. ಐದು ವರ್ಷ, ಹತ್ತು ವರ್ಷಗಳಾಗಬಹುದು.'

'ಮತ್ತೆ ನನ್ನ ಗತಿ? ನಾನು ನಿನಗೆ ಎಳ್ಳಷ್ಟು ಮಹತ್ವದವಳಲ್ಲವೆ?'

'ನೀನು ನನಗೆ ತುಂಬಾ ಮಹತ್ವದವಳು. ನೀನು ನನ್ನ ಮದುವೆಯಾಗಬೇಕು.'

'ಯಾವಾಗ? ಹತ್ತು ವರ್ಷದ ನಂತರವೇ?'

'ಇಲ್ಲ, ಈಗಲೇ. ಆದಷ್ಟು ಬೇಗನೆ.'

'ಅದ್ಹೇಗೆ? ನಿನಗೆ ಉದ್ಯೋಗವಿಲ್ಲದೆ ನಾನು ಜೀವಿಸುವದು ಅಸಾಧ್ಯ.'

'ಯಾಕಿಲ್ಲ? ನನಗೆ ವರ್ಷಕ್ಕೆ ಮೂರು ಸಾವಿರ ಡಾಲರುಗಳ ಆದಾಯವಿದೆ. ನಾವು ಸುಖವಾಗಿರಬಹುದು. ಜಗತ್ತೆಲ್ಲ ಪರ್ಯಟನ ಮಾಡಬಹುದು.'

'ಆದರೆ ನನಗೆ ಮಕ್ಕಳು ಬೇಕು, ಲ್ಯಾರಿ.'

'ಅದ್ಸರಿ, ಮಕ್ಕಳನ್ನೂ ಕರೆದುಕೊಂಡು ಹೋಗೋಣ.'

'ನೀನೆಷ್ಟು ತಿಳಿಗೇಡಿಯಿರುವಿ? ಎಂಥ ಅವ್ಯವಹಾರಿಕ! ನಾನು ಠೀವಿಯಿಂದ ಜೀವಿಸಬೇಕು. ಯೌವನದ ಆಶಾಕಾಂಕ್ಷೆಗಳನ್ನು ಅನುಭವಿಸಬೇಕು. ನನಗೆ ದೊಡ್ಡ ಮನೆ, ಒಳ್ಳೆ ಬಟ್ಟೆ, ಸ್ವಂತ ಕಾರು, ಶ್ರೀಮಂತ ಸ್ನೇಹಿತರು ಬೇಕು. ನಿನ್ನ ರೀತಿಯೆಂದರೆ ನಾವು ಜೀವಮಾನವೆಲ್ಲಾ ಬಡತನದಲ್ಲಿ ಕಳೆಯಬೇಕು. ನೀನೇ ಹೇಳಿದಂತೆ, ಪರಿಹರಿಸಲಾಗದ ಪ್ರಶ್ನೆಗಳಿಗೆ ನಿನ್ನ ಆಯುಷ್ಯವೆಲ್ಲಾ ಉತ್ತರಗಳ ಅನ್ವೇಷಣೆಯಲ್ಲಿರುವಾಗ ನಾನು ಸಾಯುವ ವರೆಗೂ ಗುಲಾಮಗಿರಿಯಲ್ಲಿ ಕೊಳೆಯಬೇಕು. ಇದೆಷ್ಟು ಅನ್ಯಾಯ!'

'ಅಂದರೆ ನಾನು ಶಿಕಾಗೋಕ್ಕೆ ಮರಳಿ ಬಂದು ಉದ್ಯೋಗಸ್ಥನಾಗದಿದ್ದರೆ, ನೀನು ನನ್ನನ್ನು ಮದುವೆಯಾಗುವದಿಲ್ಲವೆಂದೇನು ಇದರ ಅರ್ಥ?'

ಇಸಾಬೆಲ್ ಅನುಮಾನಿಸಿದಳು. ಅವಳು ಲ್ಯಾರಿಯನ್ನು ಮನಸಾ ಪ್ರೇಮಿಸುತ್ತಿದ್ದು ಅವನನ್ನು ಮದುವೆಯಾಗಲು ಹಾತೊರೆಯುತ್ತಿದ್ದಳು. ಅವನಾದರೂ ತನ್ನನ್ನು ತೀವ್ರ ಬಯಸುತ್ತಾನೆಂದು ಅವಳು ಬಲ್ಲಳು. ತನಗೆ ಭಯವೆನಿಸಿದರೂ ಈ ಗಂಡಾಂತರವನ್ನು ಎದುರಿಸಬೇಕು. 'ಹೌದು. ಅಷ್ಟೇ ಇದರ ಅರ್ಥ' ಮೆಲ್ಲನೆ ನುಡಿದಳು.

ಅವನು ಎದ್ದು ಹೋಗಿ ಕಿಟಕಿಯಿಂದ ಹೊರಗೆ ನೋಡುತ್ತ ನಿಂತ. ಅವಳ ಹೃದಯ ಶಂಕೆಯಿಂದ ಬಡಿದುಕೊಳ್ಳುತ್ತಿತ್ತು. ಅವನು ಮೌನವಾಗಿದ್ದ ವೇಳೆ ಅನಂತಕಾಲವೆನಿಸಿತು. ಅಂತೂ ಅವಳ ಕಡೆಗೆ ತಿರುಗಿ ನುಡಿದ.

'ನಾನು ನಿನಗೆ ನೀಡುತ್ತಿರುವ ಈ ಅಂತರಂಗದ ಜೀವನ ಎಷ್ಟು ಪರಿಪೂರ್ಣವಾದದ್ದು, ಎಷ್ಟು ಪ್ರೋತ್ಸಾಹಕವಾದದ್ದು, ಎಷ್ಟು ಸತ್ಯಸಂಪನ್ನವಾದದ್ದೆಂದು ನಿನಗೆ ತಿಳಿಯಪಡಿಸಲು ನನಗೆ ಸಾಧ್ಯವಾಗಲೆಂದು ಬಯಸುತ್ತೇನೆ. ಇದು ಅಪಾರವಾದ ಅಪರಿಮಿತ ಸುಖದ ಜೀವನ. ಇದರಲ್ಲಿ ಎಂಥ ಆನಂದೋಲ್ಲಾಸದ ಅನುಭವವಾಗುವದೆಂದರೆ, ಜಗತ್ತಿನ ಯಾವ ಪ್ರಭುತ್ವ, ಪ್ರತಿಷ್ಠೆಗಳಿಗಾಗಿಯೂ ಅದನ್ನು ವಿನಿಮಯ ಮಾಡುವದು ಅಸಂಭವ.'

'ಆದರೆ , ಲ್ಯಾರಿ, ಇದರಲ್ಲೆಲ್ಲಾ ನನಗೆ ಆಸಕ್ತಿಯಿಲ್ಲವೆಂದು ನಿನಗೆ ಅರ್ಥವಾಗುವದಿಲ್ಲವೇ? ನಾನೊಬ್ಬ ಸಾಮಾನ್ಯ ಹುಡುಗಿ. ನಿನ್ನನ್ನು ಪೂರ್ಣಹೃತ್ಪೂರ್ವಕವಾಗಿ ಪ್ರೇಮಿಸುತ್ತೇನೆ. ಅದೆಲ್ಲಾ ಕ್ಷುಲ್ಲಕ ವಿಷಯ. ನಿನಗೆ ಮಾರ್ಗದರ್ಶನ ಮಾಡಬಾರದು. ಲ್ಯಾರಿ, ಪುರುಷನಾಗಿ, ಪುರುಷನ ಕಾರ್ಯ ಸಾಧಿಸು. ಅಮೇರಿಕಕ್ಕೆ ಹಿಂತಿರುಗು.'

'ಇಲ್ಲ ಪ್ರಿಯೆ ಅದು ನನಗೆ ಮರಣಸಮಾನ. ನನ್ನ ಆತ್ಮದ್ರೋಹ ಮಾಡಿದಂತೆಯೇ.'

ಇಸಾಬೆಲ್ ನಿಧಾನವಾಗಿ ತನ್ನ ಬೆರಳಿನಿಂದ ಲ್ಯಾರಿ ತೊಡಿಸಿದ ನಿಶ್ಚಯದುಂಗುರವನ್ನು ತೆಗೆದು. ಅಂಗೈಯಲ್ಲಿಟ್ಟು, ಅವನ ಮುಂದೆ ಹಿಡಿದಳು. ಅವಳ ತುಟಿಗಳು ಕಂಪಿಸುತ್ತಿದ್ದವು. 'ತೆಗೆದುಕೋ ಲ್ಯಾರಿ ಎಂದಳು.'

'ಬೇಡ ಇಸಾಬೆಲ್. ನಮ್ಮ ಸ್ನೇಹಸಂಕೇತವೆಂದು ಈ ಉಂಗುರ ನೀನೇ ಇಟ್ಟುಕೋ. ಇದರಿಂದ ನಮ್ಮ ಮೈತ್ರಿಗೆ ಪೂರ್ಣವಿರಾಮವಿಲ್ಲವಷ್ಟೇ!'

ಅವರ ವಿವಾಹ ನಿಶ್ಚಯ ಮುರಿದುಹೋದ

ಬಳಿಕವೂ ಅವಳೊಡನೆ ಅವನ ಸ್ನೇಹಭಾವ ವ್ಯತ್ಯಾಸವಿಲ್ಲದೆ ಮುಂದುವರಿಯಿತು. ಲ್ಯಾರಿ ಮೊದಲಿನಂತೆ ಉಲ್ಲಾಸದಿಂದಿದ್ದು, ಇಸಾಬೆಲಳೆಡೆ ಮುಂಚಿನಂತೆ ಗಮನಕೊಡುತ್ತಿದ್ದ. ಅವರ ಮನೆಗೆ ಹೋಗಿ ಬರುತ್ತ ಇಸಾಬೆಲ್ಳನ್ನು ಹೊರಗಡೆ ಕ್ಲಬ್‌ಗೆ, ಸಮಾರಂಭಗಳಿಗೆ ಕರೆದುಕೊಂಡು ಅಡ್ಡಾಡುತ್ತ, ಅವಳೊಡನೆ ತನ್ನ ಮೊದಲಿನ ಸೌಹಾರ್ದದಿಂದಲೇ ವರ್ತಿಸುತ್ತಿದ್ದ. ಅವಳಾದರೂ ತನ್ನ ನಿರ್ಧಾರದ ಬಗ್ಗೆ ಅಸಮಾಧಾನಪಡುತ್ತಿದ್ದರೂ ಲ್ಯಾರಿ ತನ್ನ ಜೀವನವನ್ನು ಹಾಳುಗೆಡಿಸಿಕೊಳ್ಳುತ್ತಿದ್ದಾನೆಂದು ವ್ಯಾಕುಲಗೊಂಡಿದ್ದರೂ, ಒಟ್ಟಿನಲ್ಲಿ ನಿಶ್ಚಿಂತೆಯಿಂದ ಇದ್ದಂತೆ ಕಾಣಿಸುತ್ತಿದ್ದಳು.

ಇದೆಲ್ಲಾ ಸಂಗತಿಯನ್ನು ಒಂದು ದಿನ ಇಸಾಬೆಲ್ ನನಗೆ ವಿವರಿಸಿ, ನನ್ನ ಅಭಿಪ್ರಾಯವನ್ನು ಕೇಳಿದಳು. ನನಗೆ ಮಾತ್ರ ಲ್ಯಾರಿಯ ಮನೋವೃತ್ತಿಯು ಮನವರಿಕೆಯಾಗಿತ್ತು. ಅವನ ಅಲೆದಾಡುವಿಕೆಯಲ್ಲಿಯೊಂದು ಮಹತ್ಕಾರ್ಯ ಸಾಧನೆ ಅಡಕವಾಗಿದೆಯೆಂದು ಅವಳಿಗೆ ತಿಳಿಸಿ ಹೇಳಿ, ಅವನ ನಿರ್ಲಿಪ್ತ ಜ್ಞಾನಪಿಪಾಸೆ, ಚಿತ್ತೈಕಾಗ್ರತೆಯ ಬಲ, ಹಾಗು ಸ್ಥಿರ ಪ್ರಯತ್ನದಿಂದ ಕೊನೆಗೆ ಅವನ ಅನ್ವೇಷಣಾರ್ಥದ ವಸ್ತು ನಿಃಸಂದೇಹವಾಗಿ ದೊರೆಯುವುದೆಂದು ಆಶ್ವಾಸನೆ ನೀಡಿದೆ.

## ೩

ಇದರ ನಂತರ ನಾನು ಹತ್ತು ವರ್ಷಗಳ ವರೆಗೆ ಇಸಾಬೆಲಳಾಗಲಿ ಲ್ಯಾರಿಯಾಗಲಿ ಇಬ್ಬರನ್ನೂ ಕಾಣಲಿಲ್ಲ. ನನ್ನ ಮಿತ್ರ ಎಲಿಯಟ್‌ನಿಂದ ಇಸಾಬೆಲಳ ಸಮಾಚಾರ ಸಿಗುತ್ತಿತ್ತು. ಆದರೆ ಲ್ಯಾರಿಯ ಬಗ್ಗೆ ಅವನಿಗೆ ಏನೂ ಹೇಳಲಿಕ್ಕಾಗಲಿಲ್ಲ. ಲ್ಯಾರಿ ಸುಮ್ಮನೆ ಅದೃಶ್ಯನಾಗಿಬಿಟ್ಟಂತಾಗಿತ್ತು.

ಲ್ಯಾರಿಯೊಡನೆ ಅವಳ ವಿವಾಹನಿಶ್ಚಯ ಮುಕ್ತಾಯಗೊಂಡ ಮಾರನೆ ವರ್ಷವೇ ಇಸಾಬೆಲ್ ಗ್ರೇ ಮ್ಯಾಟುರಿನ್‌ನನ್ನು ಮದುವೆಯಾಗಿದ್ದಳು. ಅವರ ವೈವಾಹಿಕ ಜೀವನ ಸುಖದಿಂದ ಸಾಗಿತ್ತು. ಅವರ ಎರಡೂ ಚಿಕ್ಕ ಹೆಣ್ಣು ಮಕ್ಕಳು ತುಂಬಾ ಮುದ್ದಾಗಿದ್ದವು. ಗ್ರೇನ ಉದ್ಯೋಗವೂ ಅಭಿವೃದ್ಧಿ ಹೊಂದುತ್ತ ಅವನು ವ್ಯಾಪಾರದಲ್ಲಿ ಅಗ್ರಸ್ಥಾನವನ್ನೇ ಪಡೆದಿದ್ದ.

ಅನಂತರ ೧೯೨೯ರಲ್ಲಿ ನ್ಯೂಯಾರ್ಕ್ ಪೇಟೆ ಕುಸಿದಾಗ, ಅವನ ವ್ಯಾಪಾರವೆಲ್ಲ ಹಾಳಾಗಿ, ಸಂಪೂರ್ಣ ಆತ ಭಾರೀ ಆರ್ಥಿಕ ತೊಂದರೆಗಳಿಗೀಡಾದ. ಅವನ ತಂದೆಯೂ ಹೃದಯಾಘಾತದಿಂದ ತೀರಿಕೊಂಡಾಗ ಒಬ್ಬಂಟಿಗನಾಗಿ ಪರಿಸ್ಥಿತಿಯನ್ನು ಎದುರಿಸಬೇಕಾಯಿತು. ಸ್ವಂತ ಮನೆಯನ್ನು ಅಡವಾಗಿಟ್ಟು, ಮಾರಿಬಿಡಬೇಕಾದ ಪ್ರಸಂಗವೂ



ಬಂದಿತು. ತನ್ನ ವ್ಯವಹಾರವೆಲ್ಲ ಕುಸಿದ ಮೇಲೆ ಗ್ರೇ ಎಷ್ಟೋ ಉದ್ಯೋಗಗಳನ್ನು ಹುಡುಕುವ ಪ್ರಯತ್ನದಲ್ಲಿ ವಿಫಲನಾಗಿದ್ದ. ಕಡಿಮೆ ವೇತನದ ಗುಮಾಸ್ತನ ಕೆಲಸವಾದರೂ ಪರವಾಗಿಲ್ಲವೆಂದು ಅರ್ಜಿ ಸಲ್ಲಿಸಿದರೂ ವ್ಯರ್ಥವಾಗಿತ್ತು. ಚಿಂತೆಗಳ ಭಾರದಿಂದ ಕುಗ್ಗಿ, ಗೌರವನಾಶದಿಂದ ತಗ್ಗಿ, ಗ್ರೇನ ಆರೋಗ್ಯ ಸಂಪೂರ್ಣ ಕುಸಿದುಹೋಗಿತ್ತು. ಗಂಟೆಗಟ್ಟಲೆ ಬಾಧಿಸುವ ತೀವ್ರ ತಲೆನೋವಿನಿಂದ ಆತ ಅತೀವ ನಿರ್ವಿಣ್ಣನಾಗುತ್ತಿದ್ದ. ಇದೇ ಸಮಯ ದಲ್ಲಿ ಇಸಾಬೆಲಳ ತಾಯಿಯೂ ತೀರಿಕೊಂಡಳು. ಈ ವಾತಾವರಣದಿಂದ ಅವನಿಗೆ ಬದಲಾವಣೆ ಅವಶ್ಯವೆಂದು ಇಸಾಬೆಲಳ ಸೋದರಮಾವ ಎಲಿಯಟ್ ಪ್ಯಾರಿಸ್ಸಿನಲ್ಲಿರುವ ತನ್ನ ಸ್ವಂತ ಕೊಠಡಿಯನ್ನು ಅವರಿಗೆ ವಾಸವಾಗಿರಲು ನೀಡಿ, ಅಮೇರಿಕದಲ್ಲಿ ಪರಿಸ್ಥಿತಿ ಸುಧಾರಿಸುವವರೆಗೆ ಅವರು ಪ್ಯಾರಿಸ್ಸಿನಲ್ಲಿರಬಹುದೆಂದು ಸೂಚಿಸಿದ.

ಇಸಾಬೆಲ್ ಪತಿಯೊಡನೆ ಪ್ಯಾರಿಸ್ಸಿನಲ್ಲಿ ವಾಸ ಮಾಡಲು ಬಂದ ಬಳಿಕ ನನಗಲ್ಲಿ ಅವರ ಭೇಟಿಯಾಯಿತು. ನಾನವಳನ್ನು ನೋಡಿ ಹತ್ತು ವರ್ಷವಾಗಿತ್ತು. ಈ ಅವಧಿಯಲ್ಲಿ ಆಕರ್ಷಕ ಹುಡುಗಿಯಾಗಿದ್ದವಳು ಸುಂದರ ಸ್ತ್ರೀಯಾಗಿ ಮಾರ್ಪಟ್ಟಿದ್ದನ್ನು ಸಂತೋಷದಿಂದ ಗಮನಿಸಿದೆ. ಅವಳೀಗ ನೆಮ್ಮದಿ, ಧೈರ್ಯ ಹಾಗು ಶಾಂತಿಯಿಂದ ವರ್ತಿಸುತ್ತಿದ್ದಳು. ಆದರೆ ಗ್ರೇನ ಮುಖಲ ಕ್ಷಣನನ್ನನ್ನು ವಿಸ್ಮಯ-ಗೊಳಿಸಿತು. ಅವನ ತಲೆ ಬೋಳಾಗಿ, ಹೊಟ್ಟೆ ಬೆಳೆದು ಭಾರೀ ದಪ್ಪನಾಗಿದ್ದ. ಕಣ್ಣುಗಳಲ್ಲಿ ಮೊದಲಿನ ಸಂತಸ, ಭರವಸೆಯ ಭಾವವಿರದೆ, ದಿಗ್ಭ್ರಮೆಯ ಭಯ, ಅಧೈರ್ಯಗಳ ಲಕ್ಷಣಗಳನ್ನು ಕಂಡೆ. ಆಗಾಗ್ಗೆ ಅವರ ಭೇಟಿಗೆ ಹೋಗುವುದು ನನಗೆ ರೂಢಿಯಾಯಿತು.

ಪ್ಯಾರಿಸ್ಸಿನಲ್ಲಿ ನಾನು ಸುಮಾರು ಎರಡು ವಾರ ಕಳೆದ ನಂತರ, ಒಂದು ಸಂಜೆ, ಉಪಾಹಾರಗೃಹದ ಹೊರಾಂಗಣದಲ್ಲಿ ಕುಳಿತಿದ್ದೆ. ನನ್ನ ಹತ್ತಿರವೇ ಹಾಯ್ದುಹೋಗುತ್ತಿದ್ದ ಯಾವನೋ ಅಪರಿಚಿತ ಒಮ್ಮೆಲೆ ನನ್ನೆದುರು ನಿಂತು, ಮುಗುಳುನಗುತ್ತ 'ಹಲೋ' ಅಂದ. ನಾನು ಶೂನ್ಯದೃಷ್ಟಿಯಿಂದ ಅವನನ್ನು ದಿಟ್ಟಿಸಿದೆ. ತೆಳ್ಳಗೆ, ಎತ್ತರವಾಗಿದ್ದ, ಕಪ್ಪು ಕಂದುಬಣ್ಣದ ಹುಲುಸಾಗಿ ಬೆಳೆದ ತಲೆಗೂದಲು, ಮುಖವೆಲ್ಲಾ ವ್ಯಾಪಿಸಿದ ದಟ್ಟ ಕಂದುಬಣ್ಣದ ಗಡ್ಡ ಮೀಸೆಗಳು. ಮೈಮೇಲೆ ಧರಿಸಿದ ಬಟ್ಟೆಯೆಲ್ಲ ಹಳೆಯದಾಗಿ, ಹರಕುಚಿಂದಿಯಾಗಿದ್ದವು. ಪ್ಯಾರಿಸ್ಸಿನ ಯಾವನೋ ನಿರುದ್ಯೋಗಿ, ನನ್ನಿಂದ ಕೆಲವು ಕಾಸು ಕಿತ್ತುಕೊಳ್ಳಲು ಕಟ್ಟುಕಥೆಯನ್ನೇನೋ ಹೇಳುತ್ತಾನೆ ಎಂದುಕೊಂಡೆ. ಜೇಬಿನೊಳಗೆ ಕೈ ಸೇರಿಸಿಕೊಂಡು, ಸಮವಾದ ಬೆಳ್ಳನೆಯ ದಂತಪಂಕ್ತಿಯನ್ನು ಪ್ರದರ್ಶಿಸುತ್ತ ಹಾಗೇ ನನ್ನೆದುರಿಗೆ ನಿಂತುಕೊಂಡ. ಅವನ ಕಪ್ಪು ಕಣ್ಣುಗಳಲ್ಲಿ ವಿನೋದದ ಛಾಯೆ ಮಿನುಗುತ್ತಿತ್ತು.

'ನಿಮಗೆ ನನ್ನ ನೆನಪಿಲ್ಲವೇ?' ಅಂತ ಕೇಳಿದ.

'ಈ ಜನ್ಮದಲ್ಲಿ ನಾನು ಇದುವರೆಗೆ ನಿನ್ನನ್ನು ನೋಡಿಲ್ಲವಪ್ಪ.'

'ನಾನು ಲ್ಯಾರಿ...'

'ಓಹ್ ಹೋ! ಹೌದೇ? ಇಂಥ ಅವತಾರದಲ್ಲಿ ನಿನ್ನನ್ನು ಹೇಗೆ ಗುರುತಿಸಲಿ ಹೇಳು ! ಕುಳಿತುಕೋ ಬಾ, ಪ್ಯಾರಿಸ್ಸಿನಲ್ಲಿದ್ದು ಎಷ್ಟು ದಿನವಾಯಿತು?'

'ಒಂದು ತಿಂಗಳು'

'ಇನ್ನೆಷ್ಟು ದಿನ ಇಲ್ಲಿರುವಿ?'

'ಇನ್ನೂ ಕೆಲವು ದಿನ.'

ಅವನೆಷ್ಟು -ದರಿದ್ರ, ಕಡುಬಡವನ ಹಾಗೆ ಕಂಡನೆಂದರೆ ನನಗೆ ಮರುಕವುಂಟಾಗಿ, 'ನಿನಗೆ ಹಣದ ತೊಂದರೆಯೇ?' ಎಂದು ಕೇಳಿದೆ.

'ಇಲ್ಲವಲ್ಲಾ, ಎಲ್ಲಾ ಸರಿಯಾಗಿದೆ. ಹಾಗೇಕೆ ತಿಳಿಯುತ್ತೀರಿ?'

'ನೀನು ಒಪ್ಪತ್ತೂಟಕ್ಕೂ ಇಲ್ಲದವನ ಹಾಗೆ ಕಾಣಿಸುತ್ತೀ. ನಿನ್ನ ಬಟ್ಟೆಗಳನ್ನು ಕಸದ ಕುಪ್ಪೆಯಲ್ಲಿ ಎಸೆಯಬೇಕಪ್ಪೇ.'

ಆತ ಜೋರಾಗಿ ನಕ್ಕ. 'ಅಷ್ಟು ಅಸಹ್ಯವಾಗಿರುವೆನೇ? ಇಷ್ಟು ದಿನ ಹೊಸ ಬಟ್ಟೆ ಕೊಳ್ಳಲು ನನಗೆ ಬಿಡುವೇ ಸಿಕ್ಕಿಲ್ಲ.'

'ದುಡ್ಡು ಬೇಕಾದರೆ ನಾನು ಕೊಡುತ್ತೇನೆ.'

'ಏನೂ ಬೇಡ, ಸಾಕಷ್ಟು ದುಡ್ಡಿದೆ, ನನಗೆ ಖರ್ಚು ಮಾಡಲು ಸಾಧ್ಯವಿಲ್ಲದಷ್ಟು ಹೆಚ್ಚು ಹಣವಿದೆ.'

'ಸದ್ಯ ಎಲ್ಲಿಂದ ಬಂದಿರುವಿ?'

'ಭಾರತದಿಂದ.'

'ಹೌದು, ನೀನಲ್ಲಿಗೆ ಹೋಗಿರುವ ಸಂಗತಿ ನನಗೆ ಇಸಾಬೆಲ್ ಹೇಳಿದ್ದಳು.'

'ಇಸಾಬೆಲ್ ? ಅವಳ ಭೇಟಿ ನಿಮಗೆಂದು ಆಗಿತ್ತು ?'

'ನಿನ್ನೆಯೇ.'

'ಅಂದರೆ ಈಗ ಪ್ಯಾರಿಸ್ಸಿನಲ್ಲಿ ಇರುವಳೇ?'

'ಹೌದು, ಅವಳ ಸೋದರಮಾವನ ಮನೆಯಲ್ಲಿ.'

'ಅದ್ಭುತ! ಅವಳನ್ನು ನೋಡಲು ನನಗೆ ತುಂಬಾ ಸಂತೋಷ.'

ಈ ಮಾತಿನ ಸಂದರ್ಭದಲ್ಲಿ ಅವನ ಮುಖಭಾವವನ್ನೇ ಪರೀಕ್ಷಿಸುತ್ತಿದ್ದ ನನಗೆ, ಅವನಲ್ಲಿ ಸಹಜ ಆನಂದ ಆಶ್ಚರ್ಯದ ಹೊರತು ಮತ್ತಾವ ಜಟಿಲವಾದ ಭಾವನೆ ಕಾಣಬರಲಿಲ್ಲ. 'ಗ್ರೇ ಮ್ಯಾಟುರಿನ್ ಸಹ ಇಲ್ಲೇ ಇದ್ದಾನೆ. ಅವರ ಮದುವೆ ಆಗಿದ್ದು ನಿನಗೆ ಗೊತ್ತೇ ?'

'ಹೌದು, ನನ್ನ ಪಾಲಕ ಡಾ. ನೆಲ್ಸನ್ ಪತ್ರ ಬರೆದು ತಿಳಿಸಿದ್ದರು... ಅವರ ವಿಳಾಸ ಟೆಲಿಫೋನ್ ಡಿರೆಕ್ಟರಿಯಲ್ಲಿ ಸಿಗಬಹುದು. ಅವರನ್ನು ಖಂಡಿತ ಭೇಟಿಯಾಗುವೆ.'

'ಈ ವೇಷಭೂಷಣದಲ್ಲಿ ಮಾತ್ರ ಹೋಗಿ ಅವರನ್ನು ಹೆದರಿಸಬೇಡ!' ನಾನು ತಮಾಷೆಮಾಡಿದೆ.

ಲ್ಯಾರಿನ್ನ ನಾನು ಕಂಡಿದ್ದೇನೆಂಬ ವಾರ್ತೆ ಕೇಳಿದಾಗ ಇಸಾಬೆಲ್ ಸಹ ಅಷ್ಟೇ ಭಾವವಿಪ್ಲವಗೊಂಡಳು. ದಿನಾಲು ತವಕದಿಂದ ಅವನ ದಾರಿ ನೋಡುತ್ತಿದ್ದಳು. ಆದರೆ ಲ್ಯಾರಿ ಆ ದಿನ ಬರಲೇ ಇಲ್ಲ; ಮರುದಿನವಾಗಲಿ, ಅದರ ಮರುದಿನವಾದರೂ ಅವನ ಸುಳಿವಿಲ್ಲ. ಕೊನೆಗೊಂದು ದಿನ ಅವರ ಮನೆಯಲ್ಲಿ ಪ್ರತ್ಯಕ್ಷನಾದ. ಇಸಾಬೆಲ್ ಜಿಗಿದೆದ್ದು ಹಾರಿ ಹೋಗಿ ಅವನನ್ನು ಅಪ್ಪಿಕೊಂಡು ಎರಡೂ ಕೆನ್ನೆಯ ಮೇಲೆ ಮುತ್ತಿಟ್ಟಳು. ಗ್ರೇ ಸಹ ಉತ್ಸಾಹಪೂರ್ವಕವಾಗಿ ಅವನ ಕೈ ಕುಲುಕಿದ. ಅವರಿಬ್ಬರಿಗೂ ತನ್ನ ಮೇಲಿರುವ ಪ್ರೇಮಾದರವನ್ನು ಗಮನಿಸಿ ಲ್ಯಾರಿ ಸಂತೋಷದಿಂದ ನಸುನಗುತ್ತಿದ್ದ. ಆದರೆ ಆತ ನಿರುದ್ವಿಗ್ನನಾಗಿದ್ದ. ಅವನ ಶಾಂತ, ಸ್ವಸ್ಥಚಿತ್ತ ಅರ್ಥವತ್ತಾಗಿತ್ತು. ತಲೆಗೂದಲು ಸಣ್ಣವಾಗಿ ಕತ್ತರಿಸಿಕೊಂಡು, ಗಡ್ಡ-ಮೀಸೆಯೆಲ್ಲಾ ತೆಗೆದು, ಅಚ್ಚುಕಟ್ಟಾದ ಹೊಸ ಬಟ್ಟೆಯಲ್ಲಿ ಅಂದವಾಗಿ, ಮತ್ತಿಷ್ಟು ಎಳೆಯನಂತೆ ಕಾಣಿಸುತ್ತಿರುವುದನ್ನು ವಿಸ್ಮಯದಿಂದ ನೋಡಿದೆ. ಹಳೆಯ ಸ್ನೇಹಿತರಲ್ಲಿ ಸಂಭಾಷಣೆ ಸ್ವಾರಸ್ಯದಿಂದ ಸಾಗಿತ್ತು. ಲ್ಯಾರಿಯಾದರೂ ಹರಟೆ, ಹಾಸ್ಯ, ನಗೆಚಾಟಿಕೆಯಲ್ಲಿ ನೇರವಾಗಿ ಆನಂದಿಸುತ್ತಿದ್ದರೂ ಅವನಲ್ಲಿ ಏನೋ ಒಂದು ತರಹದ ನಿರ್ಲಿಪ್ತಭಾವ, ವಿಷಯದಲ್ಲಿ ವಿಚಿತ್ರ ವಿರಕ್ತಿಯನ್ನು ಕಂಡೆ.

ಇಸಾಬೆಲ್ ತಮ್ಮೆಲ್ಲರ ವೃತ್ತಾಂತವನ್ನು ಲ್ಯಾರಿಗೆ ಒಪ್ಪಿಸಿದ ನಂತರ ತಾವು ಹಿಂದೆ ಭೇಟಿಯಾದಾಗಿನಿಂದ ಆ ಹತ್ತು ವರ್ಷಗಳಲ್ಲಿ ಅವನ ಕಾರ್ಯಕಲಾಪಗಳ ಬಗ್ಗೆ ವಿಚಾರಿಸಹತ್ತಿದಳು. ಅವನ ನಿಷ್ಕಪಟ. ನೇರವಾದ ಉತ್ತರಗಳು ಅನಿಶ್ಚಿತ ಮತ್ತು ಸಮಸ್ಯಾತ್ಮಕವಾಗಿದ್ದವು. ಜರ್ಮನಿ, ಸ್ಪೇನ್. ಇಟಲಿಯಲ್ಲೆಲ್ಲಾ ಅಲೆದಾಡಿಕೊಂಡು ಸದ್ಯ ಭಾರತದಿಂದ ಹಿಂತಿರುಗಿದ್ದೇನೆಂದು ಹೇಳಿದ.

'ಭಾರತದಲ್ಲಿ ಎಷ್ಟು ದಿನವಿದ್ದೀ?'

'ಐದು ವರ್ಷ.'

'ಅಲ್ಲಿ ತುಂಬಾ ತಮಾಷೆಯಿತ್ತೇ?' ಗ್ರೇ ಕೇಳಿದ, 'ಹುಲಿ ಬೇಟೆಯಾಡಿದೆಯಾ ?'

ಲ್ಯಾರಿ ಮುಗುಳುನಗುತ್ತ 'ಇಲ್ಲ' ವೆಂದ.

'ಯೋಗಿಗಳನ್ನು ಕಂಡೆಯಾ?' ನಾನು ಪ್ರಶ್ನಿಸಿದೆ.

'ಒಬ್ಬ ಯೋಗಿಯ ಆಶ್ರಮದಲ್ಲಿ, ಎರಡು ವರ್ಷ ಇದ್ದೆ.'

'ಅಲ್ಲಿ ಏನು ಮಾಡುತ್ತಿದ್ದಿ?'

'ಅಭ್ಯಾಸ ಮಾಡಿದೆ. ವನಮಾರ್ಗಗಳಲ್ಲಿ ನಡೆದಾಡುತ್ತಿದ್ದೆ. ಸರೋವರದ ಮೇಲೆ ದೋಣಿಯಲ್ಲಿ ವಿಹರಿಸಿದೆ. ಸಾಹಿತಿಗಳನ್ನೂ ತತ್ವಜ್ಞಾನಿಗಳನ್ನೂ ಭೇಟಿಯಾದೆ. ಅನೇಕ ಭಾರತೀಯ. ಭಾಷೆಗಳನ್ನು ಕಲಿತೆ. ಧ್ಯಾನಮಾಡಿದೆ......ಅದೆಲ್ಲಾ ಅದ್ಭುತ ಅನುಭವ.'

ಇಸಾಬೆಲ್ ಹುಬ್ಬು ಗಂಟಿಕ್ಕಿದಳು. ಈತ ಮೊದಲಿನ ಲ್ಯಾರಿಯಲ್ಲವೆಂದು ಅವಳಿಗರಿಯಾಯಿತು. ಸೂರ್ಯರಶ್ಮಿಯನ್ನು ಹಿಡಿಯಲು ಹೋಗಿ, ಅದು ಕೈಯಿಂದ ಜಾರಿಕೊಂಡಂತೆ ಅವಳಿಗೆ ನಿರಾಶೆಯಾಯಿತು.

'ಅದರಿಂದೆಲ್ಲಾ ನಿನಗೇನು ಲಭಿಸಿತು?'

'ಶಾಂತಿ' ಲ್ಯಾರಿ ಸರಳವಾಗಿ ಹೇಳಿದ.

*

ಮಾರನೆಯ ದಿನ ನಾವೆಲ್ಲರೂ ಒಂದು ಆಧುನಿಕ ಹೋಟೆಲಿನಲ್ಲಿ ಭೋಜನ ಕಾರ್ಯಕ್ರಮ ಇಟ್ಟುಕೊಂಡಿದ್ದೆವು. ಆದರೆ ಅದೇ ಸಂಜೆ ಗ್ರೇ ವಿಪರೀತ

ತಲೆನೋವಿನಿಂದ ಬಿಡುಗಡೆ ಹೊಂದುತ್ತಿದ್ದರಿಂದ ಈ ಸ್ಥಿತಿಯಲ್ಲಿ ಅವನೊಬ್ಬನನ್ನೇ ಬಿಟ್ಟು ಇಸಾಬೆಲ್ ಹೊರಗೆ ಬರಲಿಕ್ಕಾಗುವದಿಲ್ಲವೆಂದಳು.

ಲ್ಯಾರಿ ಅವರ ಮನೆಗೆ ಬಂದು ನೋಡಿದಾಗ, ಗ್ರೇ ಕಣ್ಣು ಮುಚ್ಚಿಕೊಂಡು, ಕುರ್ಚಿಯಲ್ಲಿ ಗೂನು ಬೆನ್ನಾಗಿ ಕುಳಿತಿದ್ದ. ಅವನ ಮುಖ ಬಿಳಿಚಿಕೊಂಡು ನೋವಿನಿಂದ ವಿಕೃತವಾಗಿತ್ತು. 'ಇದಕ್ಕೆ ಏನೂ ಉಪಾಯವಿಲ್ಲವೇ?' ಕೇಳಿದ ಲ್ಯಾರಿ, 'ನಾನು ನಿನ್ನ ನೋವನ್ನು ಪರಿಹರಿಸಲು ಪ್ರಯತ್ನಮಾಡುವೆ.'

'ಇಲ್ಲ', ಗ್ರೇ ನರಳಿದ. 'ನನಗೆ ಯಾರೂ ಸಹಾಯ ಮಾಡಲು ಸಾಧ್ಯವಿಲ್ಲ. ಇದು ನನ್ನ ಕೊಂದುಬಿಡುತ್ತದಷ್ಟೇ. ನೀವೆಲ್ಲರೂ ನನ್ನ ಸುಮ್ಮನೆ ಬಿಟ್ಟುಬಿಡಿ.'

'ಬಹುಶಃ ನೀನೇ ನಿನಗೆ ಸಹಾಯಮಾಡಿಕೊಳ್ಳಲು ನಾನು ನಿನಗೆ ಸಹಾಯ ಮಾಡಬಹುದು.'

ಗ್ರೇ ಮೆಲ್ಲನೆ ಕಣ್ಣು ತೆರೆದು ಲ್ಯಾರಿಯನ್ನು ನೋಡಿದ. 'ಅದ್ಹೇಗೆ ಮಾಡುತ್ತೀ?' ಲ್ಯಾರಿ ತನ್ನ ಜೇಬಿನೊಳಗಿಂದ ಒಂದು ಬೆಳ್ಳಿ ನಾಣ್ಯ–ವನ್ನು ಹೊರತೆಗೆದು ಗ್ರೇನ ಕೈಯಲ್ಲಿಟ್ಟ. 'ಇದನ್ನು ಗಟ್ಟಿಯಾಗಿ ಹಿಡಿದುಕೋ. ನಿನ್ನ ಮುಷ್ಟಿ ಕೆಳಮುಖವಾಗಿರಲಿ, ನಾನು ಇಪ್ಪತ್ತು ಎಣಿಸುವ–ಷ್ಟರಲ್ಲಿ ನಿನ್ನ ಮುಷ್ಟಿ ಬಿಚ್ಚಿ ನಾಣ್ಯ ಕೆಳಗೆ ಬೀಳುವದು.'

ಲ್ಯಾರಿ ಕುಳಿತುಕೊಂಡು ಎಣಿಸಹತ್ತಿದ. ಹದಿ–ನೈದಾದ ಬಳಿಕ, ಗ್ರೇನ ಮುಷ್ಟಿ ಮೆಲ್ಲನೆ ಬಿಚ್ಚಿ, ಹತ್ತೊಂಬತ್ತಕ್ಕೆ ನಾಣ್ಯ ಕೆಳಗೆ ಉರುಳಿ ಬಿತ್ತು. ಗ್ರೇ ತನ್ನ ಕೈಯ್ಯನ್ನು ದಿಗಿಲಿನಿಂದ ದಿಟ್ಟಿಸಿ ನೋಡಿದ.

'ನಾನು ನಾಣ್ಯವನ್ನು ಬೀಳಿಸಲಿಲ್ಲ, ತಾನೇ ಬಿದ್ದು ಹೋಯಿತು,' ಎಂದ. ಅವನ ಬಲಗೈ ಕುರ್ಚಿಯ ತೋಳಿನ ಮೇಲಿತ್ತು.

'ನೀನು ಹಾಗೇ ಕುಳಿತಿರು,' ಲ್ಯಾರಿ ಮತ್ತೆ ಹೇಳಿದ 'ನಾನು ಇಪ್ಪತ್ತು ಎಣಿಸುವಷ್ಟರಲ್ಲಿ ನಿನ್ನ ಕೈ ಕುರ್ಚಿಯ ತೋಳಿನಿಂದ ಎದ್ದು ನಿನ್ನ ತಲೆಯ ಮೇಲೆಯೂ ಏರುತ್ತದೆ.'

ಮತ್ತೆ ಮೆಲ್ಲನೆ ಎಣಿಸಹತ್ತಿದ. ಹನ್ನೆರಡರ ಬಳಿಕ ಗ್ರೇನ ಕೈ ಮೆಲ್ಲನೆ ಏರಹತ್ತಿ, ಇಪ್ಪತ್ತಕ್ಕೆ ಅವನ ತಲೆಯ ಮೇಲೆ ಹೋಗಿ, ಮತ್ತೆ ಒಮ್ಮೆಲೆ ಕುರ್ಚಿಯ ತೋಳಿನ ಮೇಲೆ ಬಿದ್ದಿತು.

'ನಾನು ಕೈ ಎತ್ತಲಿಲ್ಲ–ಅದೆಲ್ಲ ತನ್ನಿಂತಾನೇ ಆಯಿತು' ಗ್ರೇ ಆಶ್ಚರ್ಯಪಟ್ಟ.

'ಈಗ ನನ್ನಲ್ಲಿ ವಿಶ್ವಾಸವಾಯಿತೇ? ಎಲ್ಲಿ ಆ ನಾಣ್ಯ? ' ಎಂದು ಲ್ಯಾರಿ ಮತ್ತೆ ಅದನ್ನು ಗ್ರೇನ ಕೈಯಲ್ಲಿಟ್ಟ, 'ಇದನ್ನು ಮತ್ತೆ ಗಟ್ಟಿಯಾಗಿ ಹಿಡಿದುಕೋ. ಒಂದು ನಿಮಿಷದಲ್ಲಿ ನಿನ್ನ ಕಣ್ಣುಗಳು ಭಾರವಾಗಿ, ನೀನು ಸುಮಾರು ಆರು ನಿಮಿಷದವರೆಗೆ ನಿದ್ರಿಸುವಿ. ಆಮೇಲೆ ಎಚ್ಚರವಾದಾಗ, ನಿನ್ನ ನೋವು ಮಾಯವಾಗಿರುತ್ತದೆ.'

ನಾವು ಸ್ತಬ್ಧರಾಗಿ ನೋಡುತ್ತಿದ್ದೆವು. ಲ್ಯಾರಿ ಗ್ರೇನನ್ನು ನೆಟ್ಟನೋಟದಿಂದ ನೋಡುತ್ತಿದ್ದ. ಅವನ ದೃಷ್ಟಿ ಗ್ರೇನಲ್ಲಿ ತೂರಿಕೊಂಡು ಹೋಗಿ ಆಚೆಯ ಕಡೆಗೂ ಮುಂದುವರಿದಂತಿತ್ತು. ಒಂದು ನಿಮಿಷದಲ್ಲಿ ಗ್ರೇನ ಕಣ್ಣು ಕ್ರಮೇಣ ಮುಚ್ಚಿದವು: ಅವನು ನಿದ್ರೆಮಾಡಿದ. ಲ್ಯಾರಿಯಂತೂ ಸಮಾಧಿಸ್ಥಿತಿಯಲ್ಲಿದ್ದಂತಿತ್ತು. ಐದು ನಿಮಿಷಗಳ ನಂತರ ಗ್ರೇ ಬೆಚ್ಚಿಬಿದ್ದಂತೆ ಎದ್ದು ತನ್ನ ತಲೆನೋವೆಲ್ಲಾ ಹೋಗಿಬಿಟ್ಟಿದೆಯೆಂದು ಉತ್ಸಾಹದಿಂದ ಹೇಳಿದ.

ಲ್ಯಾರಿಯ ಅನಿರೀಕ್ಷಿತ ಪ್ರಭಾವದ ಪ್ರದರ್ಶನದಿಂದ ನಾವೆಲ್ಲರೂ ವಿಸ್ಮಯಗೊಂಡು ಅದು ಅಮಾನುಷ ಶಕ್ತಿಯೆಂದು ಭಾವಿಸಿದೆವು. ಆದರೆ ಅದರಲ್ಲಿ ಚಮತ್ಕಾರವೇನಿಲ್ಲ; ಕೇವಲ ಸ್ವ–ಚಿಕಿತ್ಸೆಯೆಂದು ಲ್ಯಾರಿ ಸಾಧಿಸಿದ. ಗ್ರೇ ತನ್ನ ತಲೆನೋವನ್ನು ತಾನೇ ನಿವಾರಿಸಿಕೊಂಡಿದ್ದ, ತಾನು ಅದಕ್ಕೆ ಪ್ರೋತ್ಸಾಹ ನೀಡಿದ್ದನಷ್ಟೇ. ಶಾಶ್ವತವಾಗಿ ಆ ನೋವು ನಿವಾರಣೆ ಮಾಡಲು ಸಾಧ್ಯವೇ ಎಂದು ಇಸಾಬೆಲ್ ಆಸೆಪಟ್ಟಿದ್ದರಿಂದ, ಲ್ಯಾರಿ ಪ್ರಯತ್ನಪಡುತ್ತೇನೆಂದು ಒಪ್ಪಿದ. ಬರುವ ವಾರ ದಿನಾಲೂ ಅವರ ಮನೆಗೆ ಬಂದು, ಗ್ರೇನೊಂದಿಗೆ ಕೋಣೆಯಲ್ಲಿ ಅರ್ಧ ಗಂಟೆ ಕಾಲ ಬಾಗಿಲು ಹಾಕಿಕೊಂಡಿರುತ್ತಿದ್ದ. ಲ್ಯಾರಿಯ ವಿಚಿತ್ರ ಶಕ್ತಿಯಲ್ಲಿ ಈಗ ಗ್ರೇನಿಗೂ ವಿಶ್ವಾಸ ಮೂಡಿ, ಅವನ ಸಹಜಚಿಕಿತ್ಸೆಯಿಂದ ಆರೋಗ್ಯ ಸುಧಾರಣೆಯಾ–ಯಿತು. ಗ್ರೇ ಮತ್ತೆ ಆತ್ಮವಿಶ್ವಾಸವನ್ನು ಹೊಂದಿ, ಉಲ್ಲಾಸಭರಿತನಾಗಿದ್ದ.

*

ಒಮ್ಮೆ ಮಾತಿನ ಸಂದರ್ಭದಲ್ಲಿ, 'ಲ್ಯಾರಿ ಇನ್ನೂ ಬ್ರಹ್ಮಚಾರಿಯಾಗಿಯೇ ಇರುವನೆಂದು ನಿಶ್ಚಿತವಾಗಿ ಹೇಳಬಲ್ಲೆ' ಎಂದು ಇಸಾಬೆಲ್ ಅಂದಾಗ, ನನಗೆ

ಸೂರ್ಝಾನ್ ರೂಪಿಯೋ ಹೇಳಿದ ಕಥೆ ನೆನಪಾಯಿತು.

ಸೂರ್ಝಾನ್ ರೂಪಿಯೋ—ಪ್ಯಾರಿಸ್ಸಿನಲ್ಲಿ ಹತ್ತು ಹನ್ನೆರಡು ವರ್ಷಗಳಿಂದ ನನಗೆ ಪರಿಚಿತಳಾದ ಒಬ್ಬ ಫ್ರೆಂಚ್ ಮಹಿಳೆ. ಅವಳು ಚಿತ್ರಕಾರರಿಗೆ ರೂಪದರ್ಶಿನಿಯಾಗಿ, ಅನೇಕ ಚಿತ್ರಕಾರರೊಂದಿಗೆ ಅನೈತಿಕ ಸಂಬಂಧವನ್ನಿಟ್ಟುಕೊಂಡು, ಒಂದು ಹೆಣ್ಣು ಮಗುವಿನ ತಾಯಿಯಾಗಿದ್ದಳು. ಅವಳು ಸಹವಾಸ ಮಾಡುತ್ತಿದ್ದ ಒಬ್ಬ ಚಿತ್ರಕಾರನೊಡನೆ ಲ್ಯಾರಿಯ ಸ್ನೇಹವಿದ್ದು, ಆಗಾಗ್ಗೆ ಅವರ ಕಾರ್ಯಾಲಯಕ್ಕೆ ಬರುವುದುಂಟು. ಒಮ್ಮೆ ಅವಳು ಟೈಫಾಯ್ಡಿನಿಂದ ಬಳಲುತ್ತಿರುವಾಗ, ಅತಿ ದೀನಳಾಗಿ, ಕೈಯಲ್ಲಿ ಹಣ, ಮೈಯಲ್ಲಿ ಗುಣ, ಎರಡೂ ಇಲ್ಲದಾಗಿ, ದಿಕ್ಕಿಲ್ಲದೇ ಅಲೆದಾಡುವ ಪರಿಸ್ಥಿತಿ ಒದಗಿತ್ತು. ಆವಾಗ್ಗೆ ಲ್ಯಾರಿ ಆಕಸ್ಮಾತ್ತಾಗಿ ಭೇಟಿಯಾದಾಗ ಹೇಳಿದ್ದ 'ನಿನ್ನ ಈ ಮಗೂನ್ನ, ಇಲ್ಲಿಯೇ ಒಂದು ಹಳ್ಳಿಯಲ್ಲಿಯ ಮನೆಗೆ ಕರೆದುಕೊಂಡು ಹೋಗಲೇ? ನನಗೂ ಸ್ವಲ್ಪ ವಿಶ್ರಾಂತಿ ಬೇಕಾಗಿದೆ.'

ಅವಳು ನಗುತ್ತ ಹೇಳಿದಳು: 'ಆದರೆ ಈ ಪರಿಸ್ಥಿತಿಯಲ್ಲಿ ನಾನು ಯಾವ ಪುರುಷನಿಗೂ ಉಪಯುಕ್ತವಿಲ್ಲ!'

'ನೀನೆಂಥ ತಿಳಿಗೇಡಿ! ನಾನು ಆ ವಿಚಾರ ಮಾಡಿಯೇ ಇಲ್ಲ' ಎಂದು ನಕ್ಕಿದ್ದ.

ಆ ಬೇಸಿಗೆಯಲ್ಲಿ ಸೂರ್ಝಾನ್ ಮಗುವಿನೊಡನೆ ನದೀತೀರದಲ್ಲಿರುವ ಆ ಹಳ್ಳಿಯಲ್ಲಿ ಶಾಂತ, ಸಣ್ಣದಾದ ಮನೆಯಲ್ಲಿ ಲ್ಯಾರಿಯ ಜೊತೆಯಿದ್ದಳು. ನದಿಯ ಮೇಲೆ ನಾವೆಯಲ್ಲಿ ತೇಲಾಟ, ಮೀನು ಹಿಡಿಯುವುದು, ಸಾಯಂಕಾಲ ವಾಯುವಿಹಾರ, ಮನೆಯಲ್ಲಿ ಜೊತೆಯಾಗಿ ಸಾಹಿತ್ಯ, ಕಾವ್ಯ ಓದುವುದು—ಹೀಗೆ ನೆಮ್ಮದಿಯಿಂದ ಕಾಲ ಕಳೆಯಿತು. ಕ್ರಮೇಣ ಒಳ್ಳೆ ಆಹಾರ, ವಿಶ್ರಾಂತಿಯಿಂದ ಅವಳ ಪ್ರಕೃತಿ ಸುಧಾರಿಸಿತ್ತು. ಒಂದು ರಾತ್ರಿ ತಾನೇ ಕೇಳಿದ್ದಳು; 'ಈ ರಾತ್ರಿ ನಿನ್ನ ಕೋಣೆಗೆ ಬರಲೇ?' ಒಂದು ನಿಮಿಷ ಅವಳನ್ನು ನೋಡಿ, ನಸುನಕ್ಕು 'ನಿನಗೆ ಬರಬೇಕಾಗಿದ್ದರೆ ಬಾ,' ಎಂದಿದ್ದ.

ಅವಳು ಹೋದಾಗ, ಲ್ಯಾರಿ ಹಾಸಿಗೆಯಲ್ಲಿ ಓದುತ್ತಾ ಅಡ್ಡಾಗಿದ್ದ. ತಾನು ಅವನ ಪಕ್ಕದಲ್ಲಿ ನುಸುಳಿಕೊಂಡಳು. 'ಅವನ ಪ್ರೇಮ ವಿಚಿತ್ರವಾದದ್ದು' ಎಂದು ಸೂರ್ಝಾನ್ ನಿಟ್ಟುಸಿರು ಬಿಟ್ಟಿದ್ದಳು. 'ಅತ್ಯಂತ ಮಧುರ, ಕೋಮಲ. ವಾತ್ಸಲ್ಯಪೂರ್ಣವಾದ ಪ್ರೇಮಸಲ್ಲಾಪ. ಸ್ವಲ್ಪವೂ ಸಂಯಮಹೀನತೆ, ದುರಾಚಾರ ಸುಳಿವಿಲ್ಲದೆ. ಹೃದಯ

ಸ್ಫೂರ್ತಿಯಾಗುವಂತಹದು. ಲ್ಯಾರೀನ್ನ ಪ್ರೇಮಿಸುವುದು ನೀರಿನಲ್ಲಿಯ ನೆರಳು, ಸೂರ್ಯನ ಕಿರಣ, ಅಥವಾ ಆಕಾಶದಲ್ಲಿಯ ಮೋಡವನ್ನು ಪ್ರೇಮಿಸಿದಂತೆಯೇ...ನಾನು ಎದ್ದು ಹೋದಾಗ, ಮತ್ತೆ ಪುಸ್ತಕವನ್ನು ತೆಗೆದುಕೊಂಡು, ಅದೇ ಪುಟದಿಂದ ಓದಲಾರಂಭಿಸಿದ.'

'ಅನೇಕ ಸಲ ನಮ್ಮಲ್ಲಿ ಇಂಥ ಪ್ರೇಮ ವ್ಯವಹಾರ ನಡೆದಿರಬಹುದು. ಒಂದು ದಿನ ಬೆಳಿಗ್ಗೆ ನಾನು ಕುಳಿತಲ್ಲಿಗೇ ಬಂದು ನನಗೆ ವಿದಾಯ ಹೇಳಿದ. ನನ್ನ ಮಗುವಿಗೆ ಮುತ್ತಿಟ್ಟು, ನನಗೆ ಸಾಕಷ್ಟು ದುಡ್ಡು ಕೊಟ್ಟು, ಹೊರಟು ಹೋದ. ನನಗೆ ಅವನ ವರ್ತನೆಯು ತಳಬುಡವೇ ಅರ್ಥವಾಗಲಿಲ್ಲ.'

'ಲ್ಯಾರಿ ನಿಷ್ಕಾಮ ಕರ್ಮದಲ್ಲಿ ನಂಬಿಕೆಯಿದ್ದ ಒಬ್ಬನೇ ವ್ಯಕ್ತಿ' ಎಂದು ನಾನು ಸೂರಘಾನಳಿಗೆ ಹೇಳಿದ್ದೆ.

ವಸಂತಋತುವಿನಲ್ಲಿ ಪ್ಯಾರಿಸ್ಸಿನ ದೃಶ್ಯಗಳು ಕಣ್ಣಿಗೆ ರಮ್ಯ, ಮನಸ್ಸಿಗೂ ಆಹ್ಲಾದಕರ. ಇಸಾಬೆಲ್ ಗ್ರೇ, ಲ್ಯಾರಿ ಹಾಗೂ ನಾನು–ನಾಲ್ವರೂ ಕೂಡಿಕೊಂಡು ಅನೇಕ ಸಂತಸದ ದಿನಗಳನ್ನು ಕಳೆದೆವು. ವಿಹಾರಾರ್ಥ ಸಂಚಾರಗಳು, ಚಿತ್ತಾಕರ್ಷಕ ಸ್ಥಳಗಳನ್ನು ಪ್ರೇಕ್ಷಿಸುವುದು, ಸತ್ಕಾರ ಸಮಾರಂಭಗಳು ಔತಣಕೂಟಗಳಲ್ಲಿ ಹೇರಳವಾಗಿ ತಿಂದುಂಡು ತೃಪ್ತಿ, ಹರ್ಷದಿಂದ ಕಾಲ ಕಳೆಯಿತು. ಒಂದು ದಿನ, ಪ್ಯಾರಿಸ್ಸಿನ ಕೆಲವು ವ್ಯಭಿಚಾರದ ಸ್ಥಳಗಳನ್ನು ಇಸಾಬೆಲ್ ನೋಡೋಣವೆಂದು ಪ್ರಸ್ತಾಪಿಸಿದ್ದರಿಂದ, ಕಿರಿದಾದ ಓಣಿಯಲ್ಲಿ ಒಂದು ಮಸುಕು, ಮಲಿನವಾದ ಉಪಾಹಾರಗೃಹಕ್ಕೆ ಹೋದೆವು. ಅಲ್ಲಿ ಸೋಫೀ ಇದ್ದಳು.

ಅಮೇರಿಕದಲ್ಲಿ, ಇಸಾಬೆಲಳ ಮನೆಗೆ ಭೋಜನ ಕೂಟಕ್ಕೆ ಹೋದಾಗ, ನಾನು ಸೋಫೀಯೆಂಬ ಲಜ್ಜೆಯುಳ್ಳ ಎಳೆಯ ಹುಡುಗಿಯನ್ನು ಈ ಮೊದಲು ಭೇಟಿಯಾಗಿದ್ದೆನೆಂದು ಓದುಗರಿಗೂ ಸ್ಮರಣೆಯಾಗಬಹುದು. ಆದರೆ ಈಗ ಇಲ್ಲಿ ಅವಳನ್ನು ಕಂಡು ಆಶ್ಚರ್ಯಚಕಿತರಾದೆವು. ಅವಳು ಮದ್ಯಪಾನದಿಂದ ಉನ್ಮತ್ತಳಾಗಿ, ಆಫೀಮು ಸೇವನೆಯಿಂದ ಮಂಕು ಹಿಡಿದಂತಿದ್ದಳು. ಅವಳ ರೂಪ, ವೇಷವು ಕೂಡ ಅಸಹ್ಯವುಂಟುಮಾಡುತ್ತಿತ್ತು. ಮುಖ, ತುಟಿಗಳಿಗೆಲ್ಲ ಧಾರಾಳವಾಗಿ ಬಳಿದ ಬಣ್ಣ; ತಲೆಗೆದರಿಕೊಂಡಂತಿದ್ದ ಗಿಡ್ಡ ಕೂದಲಿಗೂ ಹೋಲುವ ರಂಗು, ಉದ್ಧಟತನದಿಂದ ಮಾತನಾಡುತ್ತ, ನಿರ್ಲಜ್ಜೆಯಿಂದ ನಡೆದಾಡುತ್ತಿದ್ದಳು.

ಅವಳು ಜೋಲಾಡುತ್ತಲೇ ನಮ್ಮ ಟೇಬಲ್ ಹತ್ತಿರ ಬಂದು ನಮ್ಮೆದುರು ಪೆದ್ದತನದಿಂದ ಹಲ್ಲು ಕಿರಿಯುತ್ತ ನಿಂತುಬಿಟ್ಟಳು. ಇಸಾಬೆಲ್ ಅವಳತ್ತ ಶೂನ್ಯದೃಷ್ಟಿ ಬೀರಿದಳು; ಗ್ರೇ ಹುಬ್ಬುಗಂಟಿಕ್ಕಿ ಮುಖ ತಿರುಗಿಸಿದ; ಲ್ಯಾರಿ ನಂಬಲಾಗದ ಕಣ್ಣುಗಳಿಂದ ಅವಳನ್ನೇ ದಿಟ್ಟಿಸಿದ. ತನ್ನ ಹಳೆಯ ಸ್ನೇಹಿತರನ್ನು ಗುರುತಿಸಿ, ನಮ್ಮ ಜತೆ ಕುಳಿತು ಮತ್ತೆ ಮದ್ಯ ಕುಡಿದಳು. ನಾವು ಅವಳೊಡನೆ ಮಾತಾಡಲು ಪ್ರಯತ್ನಪಟ್ಟೆವು. ಅನಂತರ ಅವಳು ಎದ್ದು ಹೋಗಿ ಯಾವನೋ ಗಂಡಸಿನೊಡನೆ ಒರಟಾಗಿ ಹರಟುತ್ತ, ಅಸಭ್ಯವಾಗಿ ನಗುತ್ತ, ಬ್ಯಾಂಡ್ ಪ್ರಾರಂಭವಾದ ಕೂಡಲೇ ಅವನೊಡನೆ ನರ್ತಿಸತೊಡಗಿದಳು. ಇಸಾಬೆಲ್‌ಳಿಗೆ ಇದೆಲ್ಲ ಅಸಹ್ಯವಾಗಿ, ನಾವೆಲ್ಲ ಬೇಗನೆ ಅಲ್ಲಿಂದ ಕಾಲು ಕಿತ್ತಿದೆವು.

ಬೇರೊಂದು ಹೋಟೆಲ್ಲಿಗೆ ಹೋಗಿ ಕುಳಿತು ಸೋಫೀಯ ದುರವಸ್ಥೆಯ ಬಗ್ಗೆ ಯೋಚಿಸಿದೆವು. ಅಮೇರಿಕದಲ್ಲಿದ್ದಾಗ ಅವಳು ಬಾಬ್ ಮಾಕ್ ಡೊನಲ್ಡ್ ಎಂಬ ವಕೀಲಿ ವೃತ್ತಿಯಲ್ಲಿರುವ ರೂಪವಂತ ಯುವಕನನ್ನು ವಿವಾಹವಾಗಿದ್ದಳೆಂದು ಇಸಾಬೆಲ್ ಅವಳ ಕಥೆ ವಿವರಿಸಿದಳು. ಅವರದು ಸುಖ-ಸಂಸಾರ. ಒಂದು ಗಂಡು ಮಗುವೂ ಹುಟ್ಟಿತ್ತಂತೆ. ಆದರೆ ದುರದೃಷ್ಟದಿಂದ, ಕಾರ್ ಅಪಘಾತದಲ್ಲಿ ಅವಳಪತಿ ಮತ್ತು ಮಗು ಇಬ್ಬರೂ ಅಸುನೀಗಿದ್ದರು. ಸೋಫೀ ಅತ್ಯಂತ ದುಃಖಸಂತಪ್ತಳಾಗಿ, ಭ್ರಾಂತಿ ಹಿಡಿದವಳಂತೆ ಆಗಿಬಿಟ್ಟಿದ್ದಳು. ಆ ಮೇಲೆ ಕ್ರಮೇಣ ದುರ್ಮಾರ್ಗ, ದುಃಶ್ಚಟಗಳಿಗೆ ಬಲಿಯಾಗಿ, ಈಗ ಭೀಕರ ಅಪಮಾನದ, ಅತೀವ ಹೀನಾವಸ್ಥೆಯ ಜೀವನವನ್ನು ಸಾಗಿಸುತ್ತಿದ್ದಳು.

ಅವಳ ದುರಂತ ಪರಿಸ್ಥಿತಿಗಾಗಿ ನಾವೆಲ್ಲ ಮರುಗಿದೆವು. ಲ್ಯಾರಿ ಸಹ ಅವಳು ಮೊದಲು ವಿನಯಶೀಲ, ಉತ್ತಮಧ್ಯೇಯ ಹಾಗು ಆದರ್ಶಭಾವನೆಯ ಬಾಲಿಕೆಯಾಗಿದ್ದಳೆಂದು ಜ್ಞಾಪಿಸದೆ ಇರಲಿಲ್ಲ. ಅವಳು ಓದಿಕೊಂಡಿದ್ದ ಪುಸ್ತಕಗಳ ಬಗ್ಗೆ ಅವನೊಂದಿಗೆ ಚರ್ಚಿಸುತ್ತಿದ್ದಳಂತೆ. ಅವಳು ಕಾವ್ಯಪ್ರೇಮಿಯಾಗಿದ್ದು ತಾನೂ ರಹಸ್ಯವಾಗಿ ಕೆಲವು ಕವನಗಳನ್ನು

ರಚಿಸಿದ್ದಳು. ಲ್ಯಾರಿ ಯುದ್ಧದಿಂದ ತಿರುಗಿ ಬಂದಾಗ ಅವಳಿಗೆ ಸಮಾಜಸೇವಿಕೆ ಆಗಬೇಕೆಂಬ ಹಂಬಲವಿದ್ದಿತು. ಅವಳ ತ್ಯಾಗದ ಅಭಿಲಾಷೆ ನಿಷ್ಕಪಟವಾದದ್ದು. ಅವಳ ಅಂತರಂಗದ ಮಧುರ ಪರಿಶುದ್ಧತೆ, ಪವಿತ್ರ ಘನತೆ, ಶ್ಲಾಘನೀಯವೆಂದು ವರ್ಣಿಸಿದ. ಈಗ ಅವಳಲ್ಲಾದ ಪರಿವರ್ತನೆಯನ್ನು ಕಂಡು ಲ್ಯಾರಿ ಅತ್ಯಂತ ವ್ಯಥಿತನಾಗಿದ್ದ.

*

ಕೆಲವು ತಿಂಗಳು ಉರುಳಿದವು.

ಒಂದು ದಿನ ಇಸಾಬೆಲ್‌ಳಿಂದ ನನಗೊಂದು ತವಕದ ಕರೆಯೋಲೆ ಕಾದಿತ್ತು. ನಾನು ಅಷ್ಟೇ ತ್ವರೆಯಿಂದ ಅವರ ಮನೆಗೆ ಹೋದಾಗ, ಲ್ಯಾರಿ ಸೋಫಿಯನ್ನು ವಿವಾಹವಾಗಲು ನಿಶ್ಚಯಿಸಿದ್ದಾನೆಂಬ ಸಿಡಿಲೆರಗಿಸುವ ವಾರ್ತೆಯನ್ನು ಉದ್ರೇಕಗೊಂಡು ಹೇಳಿದಳು. 'ನಿನ್ನೆ ಮಧ್ಯಾಹ್ನ ಲ್ಯಾರಿ. ತಾನೇ ಇಲ್ಲಿಗೆ ಬಂದು ಹೇಳಿದಾಗಿನಿಂದ ನಾನು ಭ್ರಾಂತಳಾಗಿಬಿಟ್ಟಿದ್ದೇನೆ. ನಾನವನಿಗೆ ಬೇಡ ಲ್ಯಾರಿ ಅಂತ ಎಷ್ಟು ಹೇಳಿದರೂ ಇದು ನನ್ನ ದೃಢನಿರ್ಧಾರ. ನೀನವಳಿಗೆ ಸೌಹಾರ್ದ ತೋರಿಸಬೇಕು, ಇಸಾಬೆಲ್ ಅಂತ ಹೇಳಿದ.'

'ಮತ್ತೆ ಅವಳ ಭೇಟಿ ಅವನಿಗೆ ಹೇಗಾಯಿತು?'

'ಡಿರೆಕ್ಟರಿಯಲ್ಲಿ ಅವಳ ವಿಳಾಸ ಹುಡುಕಿ, ಅವಳನ್ನು ನೋಡಲಿಕ್ಕೆ ಹೋದಾಗ ಅವಳು ಅನಾರೋಗ್ಯದಿಂದ ಬಳಲುತ್ತಿದ್ದಳಂತೆ. ಡಾಕ್ಟರನ್ನು ಕರೆದುಕೊಂಡು ಹೋಗಿ, ಅವಳ ಶುಶ್ರೂಷೆಗೆ ಯಾರನ್ನೋ ನೇಮಿಸಿ, ಅವಳ ಪ್ರಕೃತಿ ಸುಧಾರಿಸುವಂತೆ ಲ್ಯಾರಿ ಪ್ರಯತ್ನಪಟ್ಟ. ಈಗ ಅವಳು ಮದ್ಯ ಕುಡಿಯುವದನ್ನು ಪೂರ್ತಿ ತ್ಯಜಿಸಿದ್ದಾಳಂತೆ. ಅವಳು ಸರಿಯಾದ ದಾರಿಗೆ ಬಂದಿದ್ದಾಳೆಂದು ತಿಳಿದುಕೊಳ್ಳುವುದು ಲ್ಯಾರಿಯ ಮೂರ್ಖತನವೇ ಸರಿ.'

'ಗ್ರೇನ ಗುಣಪಡಿಸಿದ್ದು ಮರೆತುಬಿಟ್ಟಿದ್ದೀಯಾ ಇಸಾಬೆಲ್?'

'ಅದು ಹೌದು. ಆದರೆ ಈ ಹುಡುಗ. ಕಾಮುಕ ಹೆಣ್ಣನ್ನು ನಾನು ಬಲ್ಲೆ. ಅವನ ಜೀವನ ಹಾಳು ಮಾಡಿ ಬಿಡುತ್ತಾಳೆ.'

'ಇರಬಹುದು. ಆದರೆ ಲ್ಯಾರಿ ಕಣ್ಣು ತೆರೆದುಕೊಂಡೇ ಈ ಕಾರ್ಯದಲ್ಲಿ ಕೈ ಹಾಕಿದ್ದಾನೆ.

'ನಿಮಗೆ ಸಾಧ್ಯವಿದೆ. ನಿಮ್ಮ ಮಾತಿನಲ್ಲಿ ಲ್ಯಾರಿಗೆ ನಂಬಿಕೆಯಿದೆ. ತನ್ನ ಆಯುಷ್ಯವನ್ನೇ ಹಾಳು ಮಾಡುವ ಇಂಥ ಮೂರ್ಖಕೃತ್ಯವನ್ನು ಮಾಡಬೇಡೆಂದು ಅವನಿಗೆ ತಿಳಿಸಿ ಹೇಳಿ.'

'ಈ ವಿಷಯ ನಿಮಗೆ ಸಂಬಂಧಿಸಿದ್ದಲ್ಲವೆಂದಿಷ್ಟೇ ಹೇಳುತ್ತಾನೆ.'

'ಹಾಗಾದರೆ ಅವನ ಜೀವನ ಹೀಗೆ ಹಾಳಾಗಿ ಹೋಗಲು ಬಿಟ್ಟುಬಿಡುವಿರಾ?'

'ಓಹ್! ಇಂಥ ಮೂಢ, ಕಾಮಾತುರ ಹೆಣ್ಣಿನ ಕೈಯಲ್ಲಿ ಸಿಕ್ಕಿಬೀಳಲು ನಾನವನನ್ನು ತ್ಯಾಗಮಾಡಿದನೇ?' ಎಂದು ಇಸಾಬೆಲ್ ಅಳಹತ್ತಿದಳು. 'ನಾನವನನ್ನು ಪ್ರೇಮಿಸುತ್ತೇನೆ. ಮತ್ತೆ ಅವನಿಂದ ಏನೂ ಅಪೇಕ್ಷಿಸುವದಿಲ್ಲ. ನನ್ನಷ್ಟು ನಿಃಸ್ವಾರ್ಥನಾಗಿ ಯಾರೂ ಅವನನ್ನು ಪ್ರೇಮಿಸಲು ಸಾಧ್ಯವಿಲ್ಲ. ಇನ್ನು ಅವನು ದುಃಖಸಾಗರದಲ್ಲಿ ಮುಳುಗಿ ಹೋಗುತ್ತಾನೆ.'

ನಾನು ಸುಮ್ಮನಿದ್ದೆ. ಲ್ಯಾರಿಯ ಮನಸ್ಸನ್ನು ತಿರುಗಿಸುವುದು ಅಶಕ್ಯವೆಂದು ನನಗೆ ಖಚಿತವಾಗಿತ್ತು. ಅವನು ಆತ್ಮಾರ್ಪಣೆಯ ಉಚ್ಚಭಾವನೆಯಿಂದ ಪ್ರೇರಿತನಾಗಿದ್ದ. ತಾನು ಬಲ್ಲ ನಿರ್ಮಲ ಹೃದಯದ ಹುಡುಗಿ. ಹೀಗೆ ಸ್ವೈರವೃತ್ತಿಯ ಸ್ತ್ರೀಯಾಗಿ ಮಾರ್ಪಟ್ಟಿದ್ದಾಳೆ. ಅವಳನ್ನು ಸಂರಕ್ಷಿಸಬೇಕೆಂಬ ಬಯಕೆ. ಅವಳನ್ನು ಬದುಕಿಸಬೇಕೆಂಬ ಆವಶ್ಯಕತೆ ಅವಸರ, ಅವನ ಮನಸ್ಸನ್ನು ವ್ಯಾಪಿಸಿತು. ಲ್ಯಾರಿಯ ಸ್ನೇಹವನ್ನು ಸಂಪೂರ್ಣ ಕಳೆದುಕೊಳ್ಳದಿರಬೇಕಾದರೆ ಸೋಫೀಯೊಡನೆ ಮೈತ್ರಿ ಬೆಳೆಸುವದೇ ಒಳ್ಳೆದೆಂದು ಇಸಾಬೆಲ್‌ಳಿಗೆ ಸೂಚನೆಯಿತ್ತೆ.

ಲ್ಯಾರಿ ಮತ್ತು ಸೋಫೀಯರ ವಿವಾಹ ಮುಂದಿನ ವಾರದ ನಂತರವೆಂದು ನಿಶ್ಚಿತವಾಗಿತ್ತು. ಮಧುಚಂದ್ರಕ್ಕಾಗಿ ಅವರು ಗ್ರೀಸ್‌ಗೆ ತೆರಳುವವರಿದ್ದರು.

ಆದರೆ ಅವರ ವಿವಾಹ ನೆರವೇರಲೇ ಇಲ್ಲ. ಮದುವೆಯಾಗಲು ಮೂರು ದಿನವಿದ್ದಾಗ, ಸೋಫೀ ಒಮ್ಮೆಲೆ ಅದೃಶ್ಯಳಾಗಿಬಿಟ್ಟಳು. ಲ್ಯಾರಿ ಅತ್ಯಂತ ವ್ಯಾಕುಲಗೊಂಡು ಅವಳಿಗಾಗಿ ಎಲ್ಲೆಡೆಯೂ ಶೋಧಿಸಿದ. ಆದರೆ ಪ್ಯಾರಿಸ್ಸಿನಲ್ಲಿ ಅವಳೆಲ್ಲಿಯೂ ಕಾಣಸಿಗಲಿಲ್ಲ.

ಸುಮಾರು ಒಂದು ವರ್ಷದ ನಂತರವಿರಬೇಕು—

# ಈ 8 ಕಾರಣಗಳಿಂದ...



ಹೊರಗಿಂದ
ಭದ್ರಪಡಿಸುವ ಮುಚ್ಚಳ.
ಅಧಿಕ ಅಡಿಗೆಗೆ ಅವಕಾಶ.



ಸುಲಭ ಉಪಯೋಗ
ಮತ್ತು ಸುರಕ್ಷತೆಗೆ
ತಕ್ಕರೂಪ–ರಚನೆ.



ಸುರಕ್ಷತೆ
ನೀಡುವ ಅಪೂರ್ವ
ಸೇಫ್ಟಿವಾಲ್ವ್.



ದಪ್ಪ ತಳದಿಂದ
ಅಧಿಕ ಧೃಢತೆ,
ಹೆಚ್ಚಿನ ಬಾಳಿಕೆ.




ಐ. ಎಸ್. ಐ.
ಗುರುತು–ಗುಣಮಟ್ಟದ
ಖಾತರಿ.



ಆಹಾರದ ರುಚಿ
ಮತ್ತು ಪೌಷ್ಟಿಕಾಂಶಗಳ
ಸುರಕ್ಷತೆ.



ದೇಶದಾದ್ಯಂತ
ಸೇವಾ
ಕೇಂದ್ರಗಳು.



4 ರಿಂದ 12
ಲೀಟರ್‌ವರೆಗೆ
ಅನೇಕ ಸೈಜುಗಳು.

## ಭಾರತದ ಮೊತ್ತಮೊದಲನೆಯ ಪ್ರೆಷರ್ ಕುಕರ್, ಇಂದಿಗೂ ಅತ್ಯಂತ ಹೆಚ್ಚು ಬಳಸಲ್ಪಡುತ್ತಿರುವ ಪ್ರೆಷರ್ ಕುಕರ್ ಆಗಿದೆ




**ಪ್ರೆಸ್ಟೀಜ್**
ಟಿಟಿ. (ಪ್ರೈ) ಲಿ.,
ಬೆಂಗಳೂರು-560016.

MCA-TT-50 Kan B

ತೌಲೋನ್ ಎಂಬ ಬಂದರಿನ ಊರಲ್ಲಿ ಒಂದು ದಿನ ಸೋಫೀಯನ್ನು ಕಂಡೆ. ನನ್ನ ಹತ್ತಿರ ಬಂದು ಮಾತನಾಡಿಸಿದಳು.

'ಪ್ಯಾರಿಸ್ಸಿನ ಮಿತ್ರರೆಲ್ಲಾ ಹೇಗಿದ್ದಾರೆ?'

'ಸರಿಯಾಗಿರಬಹುದು.'

'ಅಂತೂ ನಾನೂ ಲ್ಯಾರಿನ್ನ ಮದುವೆಯಾಗಲಿಲ್ಲ.' ಸಿಗರೇಟಿನ ಹೊಗೆ ಬಿಡುತ್ತಾ ನಗಹತ್ತಿದಳು.

'ಹೌದು, ಆದರೆ ಯಾಕೆ?'

'ಅಂಥ ಪುಣ್ಯವಂತನಿಗೆ ನನ್ನಂಥ ಪಾಪಿಯ ಸಂಬಂಧ ಬೇಡಪ್ಪಾ ಬೇಡ, ಎನಿಸಿತು.'

'ಕೊನೆಯ ಗಳಿಗೆಯಲ್ಲೇಕೆ ಮನಸ್ಸು ಬದಲಾಯಿಸಿದ್ದು?'

ಅವಳು ನನ್ನನ್ನು ಅಣಕಿಸುವಂತೆ ನೋಡಿದಳು. 'ಹೇಳಲೇ ? ಮೂರು ತಿಂಗಳ ಕಾಲ ನಾನು ಮದ್ಯ ಕುಡಿದಿರಲಿಲ್ಲ, ಅಫೀಮು ಸೇದಿರಲಿಲ್ಲ. ಅವೆರಡೂ ಇಲ್ಲದೆ ನನಗೆ ಜೀವಿಸುವದು ಅಸಾಧ್ಯವೆನಿಸಿತು. ಆ ದಿನ ಇಸಾಬೆಲ್ ಹಾಗು ನಾನು ನನ್ನ ಮದುವೆಯ ಉಡುಪನ್ನು ಖರೀದಿಸಲು ಹೋಗುವವರಿದ್ದೆವು. ನಾನು ಅವಳ ಮನೆಗೆ ಹೋದಾಗ ಅವಳು ಮನೆಯಲ್ಲಿರಲಿಲ್ಲ–ದಂತವೈದ್ಯರ ಹತ್ತಿರ ಹೋಗಿದ್ದಳಂತೆ. ಮೇಜಿನ ಮೇಲೆ ಸರಾಯಿ ಶೀಷೆಯಿತ್ತು. ನನಗೆ ಕುಡಿಯುವ ಚಪಲ ತಡೆಯಲಾಗಲಿಲ್ಲ. ಒಂದು ಗ್ಲಾಸಿನಲ್ಲಿ ಸ್ವಲ್ಪ ಸುರುವಿ ಕುಡಿದೆ–ಓಹ್ ! ಎಂಥ ಸ್ವರ್ಗಸುಖ! ಅವಾಗ್ಗೆ ಇಸಾಬೆಲ್ ಬಂದಿದ್ದರೆ. ನಾನೀಗ ಲ್ಯಾರಿಯ ಪತ್ನಿಯಾಗಿರುತ್ತಿದ್ದೆ. ಆದರೆ ಅವಳು ಬರಲಿಲ್ಲ. ಇನ್ನೊಂದು ಗ್ಲಾಸ್ ಕುಡಿದೆ... ಮತ್ತೊಂದು, ಶೀಷೆ ಖಾಲಿ ಮಾಡಿದೆ. ಆ ಮೇಲೆ ಇಸಾಬೆಲ್ ಬರುವ ಸದ್ದು ಕೇಳಿ, ಬೇಗನೆ ಮನೆ ಬಿಟ್ಟು ಓಡಿಹೋದೆ.

'ಅಲ್ಲಿಂದ ಹಶೀಷ್ ಅಂತ ಅಫೀಮು ಮಾರುವ ನನ್ನ ಮಿತ್ರನ ಸ್ಥಳಕ್ಕೆ ಹೋದೆ. ಅಲ್ಲಿ ಲ್ಯಾರಿ ನನ್ನ ಹುಡುಕುವ ಸಾಧ್ಯವೇ ಇರಲಿಲ್ಲ. ಪ್ಯಾರಿಸ್ಸಿನಲ್ಲಿದ್ದರೆ ಲ್ಯಾರಿ ನನ್ನ ಬಿಡುವದಿಲ್ಲವೆಂದು ಇಲ್ಲಿಗೆ ಬಂದು ಬಿಟ್ಟೆ...' ಅನಂತರ ಒಮ್ಮೆಲೆ ಅಂದಳು 'ಇಂದು ಪುಸ್ತಕದಂಗಡಿಯಲ್ಲಿ ನಿಮ್ಮ ಪುಸ್ತಕ ನೋಡಿದೆ. ನಿಮ್ಮ ಭೇಟಿಯಾಗುವದೆಂದು ತಿಳಿದಿದ್ದರೆ, ಅದನ್ನು ಕೊಂಡು, ನಿಮ್ಮ ಹಸ್ತಾಕ್ಷರ ಪಡೆಯುತ್ತಿದ್ದೆ.'

'ಆದರೆ ಅದು ನಿನಗೇನು ರುಚಿಸಿತು?'

'ಯಾಕಿಲ್ಲ? ನನಗೂ ಓದಲಿಕ್ಕೆ ಬರುತ್ತದೆ... ನಿಮ್ಮ ಪುಸ್ತಕ ನಾನು ಕೊಂಡು ತಂದರೆ ಅದರಲ್ಲಿ ನಿಮ್ಮ ಹಸ್ತಾಕ್ಷರ ಬರೆಯುವಿರಾ?'

'ನಾನೇ ತಂದು ಕೊಡುತ್ತೇನೆ.'

'ಓಹ್ ತುಂಬಾ ಧನ್ಯವಾದ'. ಅವಳ ನಾವಿಕ ಮಿತ್ರನೊಬ್ಬ ಬಂದದ್ದರಿಂದ ಎದ್ದಳು.

'ನಿಮ್ಮ ಭೇಟಿಯಾದದ್ದು ಸಂತೋಷ. ಪುಸ್ತಕವನ್ನು ಮರೆಯಬೇಡಿ' ಅನ್ನುತ್ತ ಅವನೊಡನೆ ಹೊರಟುಹೋದಳು.

ದಾರಿಯಲ್ಲಿ ಆ ಪುಸ್ತಕವನ್ನು ಕೊಂಡು, ಅದರಲ್ಲಿ ಸೋಫೀಯ ಹೆಸರು ಮತ್ತು ನನ್ನ ಹಸ್ತಾಕ್ಷರವನ್ನು ಬರೆದು, ಅವಳ ಹೋಟೆಲಿನಲ್ಲಿ ಕೊಟ್ಟು ಹೋದೆ.

೫

ಪ್ಯಾರಿಸ್ಸಿನಲ್ಲಿ ನನಗೆ ಮತ್ತೆ ಅಕಸ್ಮಾತ್ ಲ್ಯಾರಿಯ ಭೇಟಿಯಾಯಿತು. ನಾನೊಂದು ಫ್ರೆಂಚ್ ನಾಟಕದ ಪ್ರಯೋಗವನ್ನು ನೋಡಲು ಹೋದಾಗ, ಮಧ್ಯಂತರದಲ್ಲಿ ಯಾರೋ ನನ್ನ ಭುಜವನ್ನು ತಟ್ಟಿದರೆಂದು ತಿರುಗಿ ನೋಡಿದಾಗ ಲ್ಯಾರಿಯನ್ನು ಕಂಡೆ. ನಾಟಕ ಮುಗಿದ ನಂತರ ನಾವು ಮತ್ತೆ ಸಂಧಿಸಿದೆವು. ಮಧ್ಯರಾತ್ರಿಯಾಗಿ ಹೋಗಿದ್ದರೂ, ಲ್ಯಾರಿಯ ಊಟವಾಗಿಲ್ಲವೆಂದು ಹೋಟೆಲಿಗೆ ಹೋದೆವು. ಅಲ್ಲಿ ನಾಟಕದ ಬಗ್ಗೆ, ಮತ್ತಿತರ ವಿಷಯಗಳನ್ನು ಚರ್ಚೆ ಮಾಡುತ್ತಿದ್ದಾಗ ಇಸಾಬೆಲ್ ಹಾಗೂ ಗ್ರೇಯರ ಸಮಾಚಾರವೂ ಬಂತು. ಗ್ರೇನ ಆರೋಗ್ಯ ಸಂಪೂರ್ಣ ಸುಧಾರಿಸಿದೆಯೆಂದು ತಿಳಿಸಿ, ಅಂಥ ಚಿಕಿತ್ಸೆ ಎಲ್ಲಿ, ಹೇಗೆ ಕಲಿತುಕೊಂಡಿದ್ದನೆಂದು ವಿಚಾರಿಸಿದೆ.

'ಭಾರತದಲ್ಲಿದ್ದಾಗ ಅದನ್ನು ಸಾಧಿಸಿದೆ.'

'ಹೇಗೆಂದು ಹೇಳುವಿಯಾ?'

'ಆಕಸ್ಮಿಕವಾಗಿ. ಭಾರತದಲ್ಲಿದ್ದಾಗ ನಾನೊಮ್ಮೆ ನಿದ್ರಾನಾಶದಿಂದ ಬಳಲುತ್ತಿದ್ದೆ. ಒಬ್ಬ ವೃದ್ಧ ಸಂನ್ಯಾಸಿ ನನ್ನ ಮೇಲೆ ಈ ಪ್ರಯೋಗ ಮಾಡಿ ಗುಣಪಡಿಸಿದ. ಒಂದು ವರ್ಷದ ನಂತರ ನಾನು ನನ್ನ ಭಾರತೀಯ ಮಿತ್ರನೊಡನೆ ಹಿಮಾಲಯದಲ್ಲಿದ್ದಾಗ ಒಮ್ಮೆ ಆತನ ಪಾದದ ಕೀಲು ಉಳುಕಿತು. ಅಲ್ಲಿ ಡಾಕ್ಟರು ಸಿಗುವದು ಅಸಂಭವ. ನನ್ನ ಮಿತ್ರ ತೀವ್ರ ನೋವಿನಿಂದ ನರಳುತ್ತಿದ್ದ. ಆಗ ನಾನು

ಈ ಚಿಕಿತ್ಸೆ ಮಾಡಿ ನೋಡಿದೆ. ಯಶಸ್ವಿಯಾಯಿತು. ಅದರಲ್ಲಿ ಮಹತ್ವದ್ದೇನೂ ಇಲ್ಲ'. ಲ್ಯಾರಿ ನಗುತ್ತ ಹೇಳಿದ. 'ಮುಂದೆ ನಾವು ಊರಿಗೆ ಮರಳಿದಾಗ ಆತ ಈ ಸಂಗತಿ ಎಲ್ಲರ ಮುಂದೆ ಪ್ರಕಟಿಸುತ್ತ, ಕಪ್ಪದಲ್ಲಿದ್ದ ಅನೇಕ ಜನರನ್ನು ನನ್ನ ಹತ್ತಿರ ಕರೆದು ತರುತ್ತಿದ್ದ. ಅವರ ದೈಹಿಕ ನೋವುಗಳಷ್ಟೇ ಅಲ್ಲ; ಮರಣಭಯ, ಮಾನಸಿಕ ವೇದನೆಗಳನ್ನು ನಿವಾರಣೆ ಮಾಡುವದೂ ನನಗೆ ಸಾಧ್ಯವಾಗುತ್ತಿತ್ತು.'

'ಭಾರತಕ್ಕೆ ಏಕೆ ಹೋದೆ ?'

'ಯಾಕೂ ಇಲ್ಲ. ಅದೊಂದು ಅನಿರೀಕ್ಷಿತ ಘಟನೆ. ನನಗೆ ಸತತ ಅಭ್ಯಾಸ, ವಿಚಾರದಿಂದ ವಿಶ್ರಾಂತಿ ಬೇಕಿತ್ತು. ಕೇವಲ ವಿಹಾರಾರ್ಥ ಸಮುದ್ರ ಪರ್ಯಟನ ಮಾಡುವ ಹಡಗವೊಂದರಲ್ಲಿ, ಕೆಲಸವನ್ನು ಕೈಕೊಂಡೆ.'

'ಆದರೆ ನಿನಗೆ ಸಾಕಷ್ಟು ಹಣವಿದ್ದಿತು.'

'ಕೇವಲ ನೆಮ್ಮದಿಗಾಗಿ. ಯಾವಾಗಲೂ ನನಗೆ ಕೈಕೆಲಸದಲ್ಲಿ ವಿರಾಮವೆನಿಸುತ್ತದೆ. ಆ ವರ್ಷವಾದರೂ ಅಷ್ಟೇ...'ಎಂದು ಲ್ಯಾರಿ ತನ್ನ ಸ್ವಾಭಾವಿಕ ಸಂತೋಷಕರವಾದ ಶೈಲಿಯಲ್ಲಿ ತನ್ನೆಲ್ಲ ಅನುಭವಗಳ ಹೃದಯಂಗಮ ವೃತ್ತಾಂತವನ್ನೂ ವಿವರಿಸಿದ. ನನಗಾದರೂ ಎಂದಿನಿಂದಲೂ ಅದನ್ನೇ ಕೇಳುವ ಕುತೂಹಲ, ಅರಿಯುವ ಆತುರ.

'ಇಸಾಬೆಲಳೊಡನೆ ನನ್ನ ವಿವಾಹನಿಶ್ಚಯ ಮುರಿದ ಬಳಿಕ, ನಾನು ಪ್ಯಾರಿಸ್ಸಿನಲ್ಲಿಯೇ ಎರಡು ವರ್ಷವಿದ್ದು. ಫ್ರೆಂಚ್ ತತ್ವಜ್ಞಾನದ ಸತತ ಅಭ್ಯಾಸ ಮಾಡಿದೆ. ದಿನಾಲು ಎಂಟು ಹತ್ತು ತಾಸುಗಳ ವರೆಗೆ ಬಿಡುವಿಲ್ಲದೆ ಓದುತ್ತಿದ್ದೆ. ಆ ಮೇಲೆ ಪುಸ್ತಕಗಳಿಂದ ತುಸು ವಿರಾಮ ಬೇಕೆಂದೆನಿಸಿ, ಕಲ್ಲಿದ್ದಲು ಗಣಿಯಲ್ಲಿ ಕೆಲಸಕ್ಕೆ ಹೋದೆ.'

'ಏನು ಮಾಡಿದೆ?' ಆಶ್ಚರ್ಯದಿಂದ ಕೇಳಿದೆ.

'ಕೈಕೆಲಸದಲ್ಲಿ ಕೆಲವು ತಿಂಗಳ ಕಾಲ ಕಳೆಯುವದು ನನಗೆ ಒಳ್ಳೆಯದೆನಿಸಿತು. ನನ್ನ ಕಲ್ಪನೆಗಳನ್ನು ಸರಿಯಾಗಿ ವಿಚಾರ ಮಾಡಲು ಇದೊಂದು ಸದವಕಾಶವೆಂದು ಕಲ್ಲಿದ್ದಲು ಗಣಿ

ಯಲ್ಲಿ ಕೆಲಸ ಮಾಡಬೇಕೆಂದೆ. ಅದರ ವ್ಯವಸ್ಥಾಪಕ ಮೇಲಿ ಆಫೀಸಿನಲ್ಲಿ ನನ್ನನ್ನು ಕೆಲಸಕ್ಕೆ ನೇಮಿಸಿಕೊಳ್ಳಬೇಕೆಂದರೂ ನಾನು ಕೆಳಗೆ ಗಣಿಯಲ್ಲಿಯೇ ಕೆಲಸಮಾಡುವ ಹಟ ಹಿಡಿದೆ. ಮೊದಮೊದಲು ಅದು ಬೆನ್ನು ಮುರಿಯುವಂಥ ಪರಮ ಕಷ್ಟದ ದುಡಿತ ಅನಿಸುತ್ತಿತ್ತು. ನಾನು ಮಂಡೆಯೂರಿ, ಕೈಗಳ ಮೇಲೆ ತೆವಳುತ್ತ ಸುರಂಗಮಾರ್ಗದಲ್ಲಿ ಹೋಗಬೇಕು. ಅಲ್ಲಿ ನರಕದ ಉಷ್ಣತೆ ಬೇರೆ! ಕಲ್ಲಿದ್ದಲಿನ ಬಂಡೆಗಳನ್ನು ಒಟ್ಟುಗೂಡಿಸಿ, ಬುಟ್ಟಿಯಲ್ಲಿ ತುಂಬಿ, ಬುಟ್ಟಿಯನ್ನು ಸುರಂಗಮಾರ್ಗದಿಂದ ಹೊರಗೆಳೆಯುತ್ತಿದ್ದೆ. ಕೈ ಮೇಲೆ ಗುಳ್ಳೆಗಳೆದ್ದು, ವ್ರಣಗಳಾದವು; ಕಾಲುಗಳು ಮಸಿಯಂತೆ ಕಪ್ಪಾಗುತ್ತಿದ್ದವು. ಆದರೆ ಈ ಕೆಲಸ ಬೇಗನೆ ರೂಢಿಯಾಗಿಬಿಟ್ಟಿತು.

'ನನ್ನ ಜೊತೆಯಲ್ಲಿರುವ ಒಬ್ಬ ಪೋಲಂಡಿನ ಕೆಲಸಗಾರ ಕೋಸ್ತಿ ಎಂಬವನೊಡನೆ ಸ್ನೇಹ ಬೆಳೆಯಿತು. ಅವನು ಒಳ್ಳೇ ಮಾತುಗಾರ, ಸ್ವಲ್ಪ ತತ್ವಜ್ಞಾನವನ್ನೂ ಓದಿಕೊಂಡಿದ್ದ. ಕೆಲವೊಮ್ಮೆ ನನ್ನೊಡನೆ ದೇವ, ಮಾನವ ಸ್ವರೂಪದ ಬಗ್ಗೆ, ಚರ್ಚಿಸುತ್ತಿದ್ದ. ನನಗೂ ಸ್ವಾರಸ್ಯದ ವಿಷಯವದು.

'ಒಂದು ದಿನ ಬೆಳಿಗ್ಗೆ ಕೋಸ್ತಿ ಕಲ್ಲಿದ್ದಲು ಗಣಿಯನ್ನು ಬಿಟ್ಟು, ಜರ್ಮನಿಗೆ ಕಾಲು ನಡಿಗೆಯಿಂದ ಹೋಗಿ ಅಲ್ಲಿ ಯಾವುದಾದರೊಂದು ಹೊಲ ಗದ್ದೆಯಲ್ಲಿ ಕೆಲಸ ಮಾಡಬೇಕೆಂದು ನಿರ್ಧರಿಸಿದ. ನಾನೂ ಅವನ ಜೊತೆ ಹೋಗಿಬಿಡಬೇಕೆಂದು ಮನಸ್ಸು ಮಾಡಿದೆ. ನಾವು ಪಾದಚಾರಿಗಳಾಗಿ ದಿನಾಲು ಹತ್ತುಹನ್ನೆರಡು ಮೈಲಿ ಸಾಗುತ್ತ ಸಂಚಾರ ಮಾಡಿದೆವು. ದಾರಿಯಲ್ಲಿ ಹೊಲ ಗದ್ದೆ, ಒಕ್ಕಲಿಗರ ಮನೆ ಕಂಡೊಡನೆ ತಡೆದು ಅವರಿಗೆ ಕೂಲಿಕಾರರ ಅವಶ್ಯಕತೆ ಇರುವುದೋ ಎಂದು ವಿಚಾರಿಸುತ್ತಿದ್ದೆವು. ಕಡೆಗೊಮ್ಮೆ ಒಂದು ಒಕ್ಕಲುತನದ ಮನೆಯಲ್ಲಿ ಕೆಲಸ ಸಿಕ್ಕಿತು. ಆ ಕೆಲಸ ಸುಲಭವಾದದ್ದು. ಹುಲ್ಲು ಪೈರುಗಳನ್ನು ಕೊಯ್ಯುವುದು. ಹಣ್ಣು ಕೀಳುವುದು. ದನಕರುಗಳನ್ನು ಸಂಭಾಳಿಸುವದಷ್ಟೇ. ಸಾಯಂಕಾಲ ನಾವು ಹುಲ್ಲಗಾವಲಿನಲ್ಲಿ ಅಡ್ಡಾಡುತ್ತ, ಯೋಚನೆ ಮಾಡುತ್ತ ಕಾಲ ಕಳೆಯುತ್ತಿದ್ದೆವು. ಅದು ಸುಖಮಯ ಜೀವನ.

'ಆ ಕುಟುಂಬದಲ್ಲಿರುವವರು—ವಯಸ್ಸಾದ ಒಕ್ಕಲಿಗ, ಅವನ ಹೆಂಡತಿ, ಎಲ್ಲೀ ಎಂಬ ಹೆಸರಿನ ಅವರ ವಿಧವೆಯಾದ ಸೊಸೆ, ಮತ್ತು ಮೊಮ್ಮಕ್ಕಳು. ಎಲ್ಲೀ ಸುಪುಷ್ಟಳಾದ ಅಸಹ್ಯ ಹೆಂಗಸು. ಅತ್ತೆ–ಸೊಸೆ ಇಬ್ಬರೂ ಸದಾಕಾಲ ನಮ್ಮ ಮನಸ್ಸೆಳೆಯುವ ಪ್ರಯತ್ನದಲ್ಲಿದ್ದರು. ಒಂದು ರಾತ್ರಿ ನಾನು ಗಾಢ ನಿದ್ರೆಯಲ್ಲಿದ್ದಾಗ, ಏನೋ ಎಬ್ಬಿಸಿದಂತಾಯಿತು. ನನ್ನ ಮುಖದ ಮೇಲೊಂದು ಬಿಸಿಯಾದ ಕೈಯು, ಮೈ ಮೇಲೊಬ್ಬ ಹೆಣ್ಣಿನ ದೇಹವಿರುವದರ ಅರಿವಾಯಿತು. ಅವಳು ಎಲ್ಲೀ ಅಂತ ನಂತರ ಖಚಿತವಾಯಿತು.'

ನನಗೆ ನಗೆ ತಡೆಯಲಿಕ್ಕಾಗಲಿಲ್ಲ, 'ನೀನೇನು ಮಾಡಿದಿ?' ಅಂತ ಕೇಳಿದೆ.

ಲ್ಯಾರಿ ಅಂದ, 'ಅದು ತುಂಬಾ ಅಸಡ್ಡೆಯ ಪರಿಸ್ಥಿತಿ. ಆಗೇನು ಮಾಡುವುದು? ಅವಳು ಅಪೇಕ್ಷಿಸಿದ್ದನ್ನು ಮಾಡಬೇಕಾಯಿತಷ್ಟೇ...

'ಅನಂತರ ನಾನು ದೀರ್ಘವಿಚಾರಮಾಡಿ, ಕೊನೆಗೆ ಅಲ್ಲಿಂದ ಕಾಲು ಕಿತ್ತುವದೇ ವಾಸಿಯೆಂದೆನಿಸಿತು. ಕೋಸ್ತಿಯೂ ಗಾಢನಿದ್ರೆಯಲ್ಲಿದ್ದ. ಹೊರಗೂ ಗಾಢಾಂಧಕಾರ. ಮೆಲ್ಲನೆ ನನ್ನ ಸಾಮಾನುಗಳನ್ನು ಕಟ್ಟಿಕೊಂಡು ಅಲ್ಲಿಂದ ಹೊರಟುಹೋದೆ.

'ಮುಂದೆ ನಾನು ಬಾನ್ ನಗರ ತಲುಪಿದೆ.' ಲ್ಯಾರಿ ಮುಂದುವರಿಸಿದ. 'ಅಲ್ಲಿ ಜರ್ಮನ್ ಸಾಹಿತ್ಯ, ತತ್ವಜ್ಞಾನವನ್ನು ಅಭ್ಯಾಸಮಾಡುತ್ತ ಒಂದು ವರ್ಷವಿದ್ದೆ. ನನ್ನ ಕೋಣೆಯಲ್ಲಿ ಜೊತೆಗಾರನಾಗಿದ್ದ ಪಾದ್ರಿಯು ತುಂಬಾ ವಿದ್ವಾಂಸ. ವಿಶ್ವವಿದ್ಯಾಲಯದಲ್ಲಿ ಸಂಶೋಧನಾ ಕಾರ್ಯದಲ್ಲಿ ತೊಡಗಿದ್ದ. ನನಗೆ ವಾಚನ, ಧ್ಯಾನ, ಜ್ಞಾನದಲ್ಲಿರುವ ಆಸ್ಥೆ ಕಂಡು ತನ್ನ ಮಠದಲ್ಲಿ ನನಗೆ ಬಹಳೇ ಅನುಕೂಲವಾಗುವುದೆಂದು ಅಲ್ಲಿ ಕೆಲಕಾಲವಿರಲು ಆಹ್ವಾನಿಸಿದ. ಆ ಸಂನ್ಯಾಸಿಮಠದಲ್ಲಿ ನಾನು ಮೂರು ತಿಂಗಳ ವಾಸಮಾಡಿದೆ. ಪಾದ್ರಿಗಳ ಕೂಡ ಹೊಲ ಗದ್ದೆಯಲ್ಲಿ ಕೆಲಸಮಾಡುತ್ತ, ವಾಚನಾಲಯದಲ್ಲಿನ ಗ್ರಂಥಗಳಲ್ಲಿ ಮಗ್ನನಾಗಿರುತ್ತಿದ್ದೆ. ಅಲ್ಲಿ ನನಗೆ ತುಂಬಾ ಹಿಡಿಸಿದ್ದು ಆ ನಸುಕಿನ ಪ್ರಾರ್ಥನೆಗಳು—ಅವು ಮನಃಶಾಂತಿ ನೀಡುತ್ತಿದ್ದವು. ಪಾದ್ರಿಗಳು ನನ್ನೊಡನೆ ದೇವರು, ಪಾಪಗಳ ಬಗ್ಗೆ ಚರ್ಚೆಮಾಡುತ್ತಿದ್ದರು. ಅವರ ಅಭಿಪ್ರಾಯದಲ್ಲಿ ದೇವರು ಸ್ವಯಂ ಕೀರ್ತಿಗಾಗಿ ವಿಶ್ವನಿರ್ಮಾಣ ಮಾಡಿದ್ದು. ಹಾಗಾ

ವರೆ ಸರ್ವಗುಣ ಸಂಪನ್ನನಾದ ದೇವರು ಪಾಪ ವನ್ನು ನಿರ್ಮಿಸಿದ್ದೇಕೆ? ಪಾದ್ರಿಗಳ ನಂಬಿಕೆ ಹೀಗಿತ್ತು: ಮಾನವನು ತನ್ನಲ್ಲಡಗಿದ ಅಧರ್ಮವನ್ನು ಜಯಿಸಿ, ಪಾಪಪ್ರೇರಣೆಗಳನ್ನು ಪ್ರತಿಭಟಿಸಿ. ದುಃಖ ದುರದೃಷ್ಟವೆಲ್ಲಾ ಅಂತರಾತ್ಮವನ್ನು ಶುದ್ಧಗೊಳಿಸುವ ದೈವಪರೀಕ್ಷೆಯೆಂದು ಅಂಗೀಕರಿಸಿ, ಕೊನೆಗೆ ದೇವತಾನುಗ್ರಹವನ್ನು ಪಡೆಯಲು ಪಾತ್ರನಾಗಬೇಕೆಂದು ದೇವರೇ ಪಾಪನಿರ್ಮಾಣಮಾಡಿದ್ದಾನೆ.

'ಆದರೆ ಈ ಸಮರ್ಥನೆ ನನಗೆ ಸಮಾಧಾನಕರ ವೆನಿಸಲಿಲ್ಲ. ಪ್ರಶಂಸೆ, ಪೂಜೆಗಳನ್ನು ಅಪೇಕ್ಷಿಸುವ ಸಾಮಾನ್ಯಮಾನವನಿಗಿಂತ ದೇವರು ಹೆಚ್ಚಿನವನೇನಲ್ಲವೆಂದು ನಂಬಲು ಸಾಧ್ಯವಾಗಲಿಲ್ಲ. ನಾನು ಕಲ್ಪಿಸಿದ ದೇವರು ಮಾನವನಿಗಿಂತ ಅಪರಿಮಿತ ಪ್ರಭಾವವುಳ್ಳ ಪರಮ ವ್ಯಕ್ತಿ: ತಾನು ನಿರ್ಮಿಸದೇ ಇದ್ದ ಪಾಪದೊಡನೆ ಹೋರಾಡಿ, ಕೊನೆಗೆ ಪಾಪ ವನ್ನು ಸಂಹರಿಸುವಂಥ ಅಪಾರ ಶಕ್ತಿ.

'ನಾನು ಪ್ಯಾರಿಸ್ಸಿಗೆ ಮತ್ತೆ ಮರಳಿ ಬಂದು, ಈ ಸಲ ವಿಜ್ಞಾನದ ಅಭ್ಯಾಸ ಪ್ರಾರಂಭಿಸಿದೆ. ಮುಂದೆ ಸ್ಪೇನಿಗೂ ಹೋದೆ. ಅಲ್ಲಿ ನನ್ನ ಕಲ್ಪನೆಗಳನ್ನು ಸ್ಪಷ್ಟವಾಗಿ ಗ್ರಹಿಸುವ ಉದ್ದೇಶದಿಂದ, ಪ್ರಸಿದ್ಧ ಚಿತ್ರಕಾರರ ಕಲಾಕೃತಿಗಳನ್ನು ಪರಿಶೀಲಿಸಿದೆ: ಧರ್ಮವು ನಿರೂಪಿಸಲಾಗದ ಮಾರ್ಗವನ್ನು ಕಲೆಯಲ್ಲಿ ಕಂಡುಹಿಡಿಯಬಹುದೆಂದು ನನ್ನ ಆಶೆ.

'ಅದೇ ವರ್ಷ ಶರತ್ಕಾಲದಲ್ಲಿ ನಾನು ಕೈಕೊಂಡ ಪ್ರವಾಸವು ಭಾರತದ ತೀರವನ್ನು ತಲುಪಿಸಿತು.'

ರಾತ್ರಿ ಬಹಳ ವೇಳೆಯಾಗಿತ್ತು. ಉಪಾಹಾರ ಗೃಹದಲ್ಲಿ ಉಳಿದವರು ನಾವಿಬ್ಬರೇ. ಆದರೆ ಲ್ಯಾರಿ ಇನ್ನೂ ಮಾತನಾಡುವ, ನಾನು ಇನ್ನೂ ಕೇಳುವ ಮನೋಭಾವದಲ್ಲಿದ್ದೆವು.

'ನಿಮಗೆ ಬೇಸರವಾಗುತ್ತಿದೆಯೇ?' ಕೇಳಿದ.

'ಏನೂ ಇಲ್ಲ.'

'ಸರಿ, ಬೊಂಬಾಯಿಗೆ ಬಂದಾಗ, ಪ್ರವಾಸಿಕರಿಗೆ ಪ್ರೇಕ್ಷಣೀಯ ಸ್ಥಳಗಳಿಗೆ ಸಂಚಾರಕ್ಕಾಗಿ ಅವಕಾಶ ಕೊಡಲು ಹಡಗವು ಮೂರು ದಿನ ಅಲ್ಲಿಯೇ ನಿಲ್ಲುವದಿತ್ತು. ನಾನು ಎಲಿಫಂಟಾ ಗುಹೆಗಳನ್ನು ನೋಡಲು ಹೋದೆ. ಅಲ್ಲಿಯ ಮೂರು ಮುಖದ ಬೃಹದಾಕಾರದ ಮೂರ್ತಿಯನ್ನು ವೀಕ್ಷಿಸುತ್ತಾ ನಿಂತಾಗ, ನನ್ನ ಹಿಂದುಗಡೆಯಿದ್ದ ರಾಮಕೃಷ್ಣ ಪಂಥದ ಸ್ವಾಮೀಜಿಯೊಬ್ಬರು, ಇದು ವಿಶ್ವ ನಿರ್ಮಾತಾ ಬ್ರಹ್ಮ, ಜಗತ್ಪಾಲಕ ವಿಷ್ಣು, ಮತ್ತು ವಿಶ್ವನಾಶಕ ಮಹೇಶ್ವರರ – ಅಂತಿಮ ಸತ್ಯದ ಮೂರು ಮುಖ ಸ್ವರೂಪ' ಎಂದು ತಿಳಿಸಿದರು.

'ನನ್ನ ಅಂತರಂಗದಲ್ಲಿ ವಿಚಿತ್ರ ವಿಪ್ಲವವೆದ್ದಿತು. ನನಗೆ ಸಿಗಬೇಕಾದದ್ದು ಭಾರತ ನೀಡುತ್ತಿರುವುದೆಂದು ಒಮ್ಮೆಲೆ ಮನವರಿಕೆಯಾಗಿ, ಭಾರತದಲ್ಲಿ ನಿಲ್ಲಬೇಕೆಂದು ನಿರ್ಧರಿಸಿದೆ. ಆ ಸ್ವಾಮೀಜಿಯ ಜೊತೆ ವಾರಾಣಸಿಗೆ ಹೋಗಿ ಅಲ್ಲಿ ಆರು ತಿಂಗಳ ಕಾಲ ಹಿಂದೂ ಧರ್ಮ, ವೇದಾಂತ ಶಾಸ್ತ್ರವನ್ನೂ ಅಭ್ಯಾಸಮಾಡಿದೆ. ಹಿಂದೂ ತತ್ತ್ವ ಜ್ಞಾನದ ಸಾರಾಂಶ ನನ್ನ ಮನಸ್ಸೊಲಿಸಿತು. ಅದೇನೆಂದರೆ, ಈ ಜಗತ್ತಿಗೆ ಆದಿ–ಅಂತ್ಯಗಳಿಲ್ಲ ;ಸೃಷ್ಟಿ ಸಂಕಲ್ಪವು ಜೀವಾತ್ಮದ ಪೂರ್ವಜನ್ಮದ ಪಾಪ ಪುಣ್ಯಕರ್ಮಗಳಿಗೆ ಪ್ರತಿಫಲವನ್ನು ಸಮರ್ಪಿಸುವದಕ್ಕಾಗಿ ಒಂದು ವೇದಿಕೆ ಮಾತ್ರ. ಜೀವಾಳದ ಜನ್ಮಾಂತರವೇ ಜಗತ್ತಿನಲ್ಲಿಯ ಪಾಪದ ಕಲ್ಪನೆಯ ಸ್ಪಷ್ಟೀಕರಣ ಮತ್ತು ಸಮರ್ಥನೆ. ಮಾನವನು ಅನುಭವಿಸುತ್ತಿರುವ ಕಷ್ಟನಷ್ಟಗಳು ಪೂರ್ವಜನ್ಮದಲ್ಲಿ ತಾನು ಮಾಡಿದ ಪಾಪದ ಫಲಿತಾಂಶ. ಪುನರ್ಜನ್ಮದ ಬಂಧನದಿಂದ ವಿಮೋಚನೆಯೇ ಜೀವನದ ಅಂತಿಮ ಧ್ಯೇಯ. ಬಂಧಮುಕ್ತಿಯಾದಾಗ ಜೀವಾತ್ಮವು ಸಂಪೂರ್ಣ, ಸಮಗ್ರ ಹಾಗು ಅನಂತವಾದ ಪರಮಾತ್ಮ ಅಥವಾ ಬ್ರಹ್ಮನಲ್ಲಿ ಲೀನವಾಗುವದು. ಅದೊಂದು ಜಲಬಿಂದುವಿನಂತೆ–ಸಾಗರದಿಂದ ಏರಿ ಮೋಡವನ್ನು ಸೇರಿ, ಮಳೆಯಲ್ಲಿ ಹೊಳೆಗೆ ಬಿದ್ದು. ಅಲ್ಲಿಂದ ಸರೋವರಕ್ಕೆ ತೇಲಿಬಂದು, ಮುಂದೆ ನದಿಯಲ್ಲಿ ಕೊಚ್ಚಿಕೊಂಡು ಹೋಗಿ, ಗಿರಿ–ಕಂದರ, ಸವಿಸ್ತಾರಗಳಲ್ಲಿ ಹರಿದಾಡಿ, ಶಿಲಾಬಂಡೆ ಅಡ್ಡಬಿದ್ದ ವೃಕ್ಷಗಳನ್ನೆಲ್ಲಾ ಎದುರಿಸುತ್ತ, ಕೊನೆಗೊಮ್ಮೆ ತಾನು ಉದ್ಭವಿಸಿದ ಅನಂತ ಸಮುದ್ರವನ್ನೇ ತಲುಪುತ್ತದೆ.'

'ಆದರೆ ಆ ಜಲಬಿಂದು ತನ್ನ ವ್ಯಕ್ತಿತ್ವವನ್ನೇ ಕಳೆದುಕೊಳ್ಳುತ್ತದೆ.'

ಲ್ಯಾರಿ ನಗುತ್ತ 'ವ್ಯಕ್ತಿತ್ವ ಅಂದರೆ ಅಹಂಭಾವ. ಅದನ್ನು ಕಳೆದುಕೊಂಡ ನಂತರವೇ ಪರಮಾತ್ಮನಲ್ಲಿ-ಒಂದಾಗುವದು ಶಕ್ಯ. ನಮ್ಮ ಅಂತರಾತ್ಮದಲ್ಲೇ ಪರಮಾತ್ಮನಿರುವನು; ಭಕ್ತಿಮಾರ್ಗ, ಕರ್ಮ

ಮಾರ್ಗಗಳಿಂದಲೂ ಸತ್ಯಸಾಧನೆ ಸಾಧ್ಯ; ಆದರೆ ಅತಿ ಕಠಿಣ ಹಾಗು ಉದಾತ್ತ ಜ್ಞಾನಮಾರ್ಗವೇ ಮುಕ್ತಿಯ ಸಾಧನೆ.'

ಇಂಥ ಗಂಭೀರವಿಷಯಗಳನ್ನು ನಿವೇದಿಸುವಾಗ ಲ್ಯಾರಿಯ ಸಹಜ, ಸುರಸವಾದ ಶೈಲಿ, ಮಧುರ ಮನಮೊಲಿಸುವ ಧ್ವನಿ, ಸರಳವಿನಯ, ಸತ್ಯಭಾವನೆ ತುಂಬಿದ ನುಡಿ–ಇವುಗಳಿಂದ ಅವನ ಮಾತು ಕೇಳು ವುದು ಆಹ್ಲಾದಕರವೇ ಆಗಿತ್ತು. ಅಲ್ಪ ಮೌನಾ ನಂತರ ಮತ್ತೆ ಮುಂದುವರಿಸಿದ:

'ಅಲ್ಲಿಂದ ದಕ್ಷಿಣಾಭಿಮುಖವಾಗಿ ಸಾಗಿ, ಹಸಿರು ಬೆಟ್ಟ, ಚಿಕ್ಕ ಗ್ರಾಮಗಳು, ಹರಿಯುವ ನದಿಗಳ ಸುಂದರ ಜೀವಾದ ತಿರುವಾಂಕೂರನ್ನು ತಲುಪಿದೆ. ಅಲ್ಲಿ ಶ್ರೀಗಣೇಶ ಎಂಬ ಯೋಗಿಯ ಆಶ್ರಮದಲ್ಲಿ ನೆಲೆಸಿದೆ. ನನ್ನ ಮಂಚ, ಮೇಜು, ಪುಸ್ತಕಪೀಠ– ಇವಷ್ಟೆ ಹಿಡಿಸುವಷ್ಟು ಚಿಕ್ಕ ಗುಡಿಸಲಿನಲ್ಲಿರುತ್ತಿದ್ದೆ. ಹಿತಕರವಾದ ಭಾರತೀಯ ಉಡುಪನ್ನೇ ಧರಿಸಿದೆ. ಬೆಟ್ಟಗಳ ಮೇಲೆ ಹುಲಿ, ಚಿರತೆ, ಆನೆ, ಕಾಡು ಕೋಣ ಮುಂತಾದ ಪ್ರಾಣಿಗಳು ಸಂಚರಿಸುತ್ತಿ ದ್ದವು. ಸರೋವರದ ದಂಡೆಯಲ್ಲಿರುವ ಆಶ್ರಮದ ಸುತ್ತಲೂ ತೆಂಗು, ಅಡಿಕೆಯ ಮರಗಳು. ಅದಕ್ಕೆ ಅತಿ ಸಮೀಪವಿದ್ದ ಪಟ್ಟಣ ಮೂರು ನಾಲ್ಕು ಮೈಲಿ ದೂರವಿತ್ತು.

'ಶ್ರೀಗಣೇಶರೇ ನನ್ನ ಪರಮ ಗುರುವೆಂದು ನಂಬಿದೆ. ಅವರ ಸಾನ್ನಿಧ್ಯದಲ್ಲಿ ಓದುತ್ತ ಧ್ಯಾನ ಮಾಡುತ್ತ, ಚೇತನಗೊಳಿಸುವ ಅವರ ನುಡಿಗಳನ್ನು ಕೇಳುತ್ತಲಿದ್ದೆ. ಅವರ ಬೋಧನೆ ಅತಿ ಸರಳವಾದದ್ದು. ಮಾನವನು ತಾನು ತಿಳಿದಿರುವದಕ್ಕಿಂತ ಮಹಾತ್ಮ ನಿರುವನು; ಜ್ಞಾನವೇ ಮುಕ್ತಿಯ ಮಾರ್ಗ. ಮೋಕ್ಷ ಸಾಧನೆಗೆ ಜಗತ್ತನ್ನು ತ್ಯಜಿಸುವದು ಮುಖ್ಯವಲ್ಲ; ಕೇವಲ ಆತ್ಮನಿರಾಕರಣೆ ಮಹತ್ವವಾದದ್ದು. ಜಗತ್ತು ದೇವತಾ ಸ್ವರೂಪದ ಪ್ರತೀಕವೆಂದು ಅವರ ಸಮರ್ಥನೆ. ಹಾಗಾದರೆ, ನಾನು ಪ್ರಶ್ನಿಸಿದೆ, ಈ ಜಗತ್ತು ಆದರ್ಶ ಜೀವಿಯ ಪ್ರತಿರೂಪವಾಗಿದ್ದರೆ, ಮಾನವನಿಗೆ ಜೀವನದಲ್ಲಿ ತಿರಸ್ಕಾರವುಂಟಾಗಿ, ಅದರ ಬಂಧನದಿಂದ ವಿಮೋಚನೆ ಪಡೆಯುವದೊಂದೇ ಉಚಿತವಾದ ಬಾಳಿನ ಗುರಿಯೆಂದು ಇಟ್ಟುಕೊಂಡ ದ್ದೇಕೆ? ಅದಕ್ಕೆ ಅವರು ಉತ್ತರಿಸಿದ್ದು; ಈ ಜಗತ್ತಿನ ಮಹೋಲ್ಲಾಸಗಳು ನಶ್ವರ; ಪರಮಾತ್ಮನಲ್ಲಿ ಪ್ರಾಪ್ತವಾಗುವ ಸುಖಶಾಂತಿಯಷ್ಟೇ ಶಾಶ್ವತ ವಾದದ್ದು. ಶ್ರೀಗಣೇಶರು ಕರುಣಾಳು. ಉದಾತ್ತ, ಪವಿತ್ರಸ್ವಭಾವದ ಸತ್ಪುರುಷರು. ಅವರ ಪರಿಚಯ ವಾದದ್ದು ನನ್ನ ಸುದೈವ.

'ನಾನು ಆಶ್ರಮದಲ್ಲಿ ಸತತವಾಗಿ ಇರುತ್ತಿರಲಿಲ್ಲ. ಒಬ್ಬ ಅರಣ್ಯಾಧಿಕಾರಿಯ ಪರಿಚಯ ಮಾಡಿಕೊಂ– ಡಿದ್ದೆ. ಬೆಟ್ಟದಡಿಯಲ್ಲಿರುವ ಆತನ ಬಂಗ್ಲೆಯಲ್ಲಿ ನಾನು ಇಷ್ಟಪಟ್ಟಾಗ ವಾಸಿಸುತ್ತಿದ್ದೆ. ಕಾಡಿನಲ್ಲಿ ಬಹು ದೂರ ಅಡ್ಡಾಡುತ್ತ ಏಕಾಂತವನ್ನು ಅನು ಭೋಗಿಸುತ್ತಿದ್ದೆ.

'ಆ ವರ್ಷ ನನ್ನ ಜನ್ಮದಿನವನ್ನು ಆ ಅರಣ್ಯಾ– ಶ್ರಮದಲ್ಲಿಯೇ ಕಳೆಯಬೇಕೆಂದು ಹಿಂದಿನ ದಿನವೇ ಅಲ್ಲಿಗೆ ಹೋದೆ. ಅಂದು ನಸುಕಿನಲ್ಲಿ ಎದ್ದು ಸೂರ್ಯೋದಯವನ್ನು ವೀಕ್ಷಿಸಬೇಕೆಂದು ನನ್ನ ದೊಂದು ವಿಶೇಷ ಆಯ್ಕೆಯ ಸ್ಥಳದಲ್ಲಿ ಅರುಣೋ ದಯ ಪೂರ್ವದಲ್ಲೇ ಹೋಗಿ ಕುಳಿತುಕೊಂಡೆ. ಸುತ್ತಲೂ ಬೆಟ್ಟಗಳ ಮನೋಹರ ವಿಸ್ತಾರ. ಆಕಾಶ ದಲ್ಲಿಯ ನಕ್ಷತ್ರಗಳು ಮಂದವಾಗಿ ಬೆಳಗು ಸಮೀಪಿಸಿದಂತಿತ್ತು. ನನ್ನಲ್ಲಿ ವಿಚಿತ್ರ ಸಂದೇಹ ಭಾವನೆಗಳು ಮಿಡಿದಂತಾಯಿತು. ಅನಂತರ ಮೆಲ್ಲನೆ ಸೂರ್ಯ ಉದಯಿಸಿದ. ನಿಜವಾಗಿಯೂ ಆ ಸೂರ್ಯೋದಯದ ವೈಭವವನ್ನು ವರ್ಣಿಸಲು ಯಾವ ಶಬ್ದಗಳಿಂದಲೂ ಅಸಾಧ್ಯ. ಅಷ್ಟು ವರ್ಣ- ನಾತೀತವಾದದ್ದು. ನನಗೆ ಅತ್ಯಂತ ಉತ್ಕರ್ಷ, ಅಲೌ ಕಿಕ ಆನಂದದ ಅನುಭವವಾಗಿ, ನಾನು ದೇಹದಿಂದ ಒಮ್ಮೆಲೇ ವಿಮುಕ್ತನಾಗಿ, ಶುದ್ಧ ಆತ್ಮ ಹೊಂದಿದ ವಿಚಿತ್ರ ಸಂವೇದನೆ. ಈ ಆನಂದ ಪರವಶತೆಯಿಂದ ಬಿಡುಗಡೆಯಾಗಲು ಹೋರಾಡಿದೆ. ಏಕೆಂದರೆ ಈ ಅವಸ್ಥೆ ಇನ್ನೊಂದು ಕ್ಷಣ ಮುಂದುವರೆದರೆ ನಾನು, ಮರಣಹೊಂದಬಹುದೆನಿಸಿತು... ನನಗೆ ಸ್ಮೃತಿ ಮರಳಿದಾಗ ನಾನು ನಿತ್ರಾಣನಾಗಿ, ಮೈ– ಯೆಲ್ಲ ನಡುಗುತ್ತಿತ್ತು. ಅನಂತರ ನನಗೆ ನಿದ್ರೆ ಆವ ರಿಸಿತು. ಎಚ್ಚರವಾದಾಗ, ಮಧ್ಯಾಹ್ನದ ಸಮಯ. ನನಗೆ ಪರಮಜ್ಞಾನೋದಯವಾಗಿದೆಯೆಂದು ನಂಬಲೂ ಸಹ ಧೈರ್ಯವಾಗಲಿಲ್ಲ.'

'ಅದು ನಿನ್ನ ಮಾನಸಿಕ ಸ್ಥಿತಿಯಿಂದ ಪ್ರೇರಿತ ವಾದ ಕೃತಕ ನಿದ್ರಾವಸ್ಥೆಯಷ್ಟೇ ಅಲ್ಲವೆಂದು ಹೇಗೆ ಹೇಳಬಲ್ಲೆ?' ನಾನು ಕೇಳಿದೆ.

'ನನಗಾದ ಅನರ ಅನುಸ್ತವಾದ ಸತ್ಯಾನುಭವ. ಆ ಭಾವಾವೇಶದ ಕ್ಷಣದಲ್ಲಿ ನಾನು ಅನುಭವಿಸಿದ ಪರಮಸುಖ, ಶಾಂತಿ ಹಾಗು ಧೈರ್ಯದ ಪ್ರಜ್ಞೆ ನನ್ನಲ್ಲಿ ಇನ್ನೂ ಸ್ಥಿರವಾಗಿ ನೆಲೆಸಿದೆ. ಆ ಸೌಂದರ್ಯದ ದಿವ್ಯದೃಶ್ಯ ಪ್ರಥಮತಃ ನನ್ನ ಕಣ್ಣು ಕುಕ್ಕಿಸಿದಾಗಿನದಷ್ಟೇ ಈಗಲೂ ನವ್ಯ, ನಿಚ್ಚಳವಾಗಿ ಉಳಿದಿದೆ.

'ನನ್ನಲ್ಲೊಂದು ವಿಶಿಷ್ಟ ಚೈತನ್ಯ, ಶಕ್ತಿ ಮೂಡಿದಂತಾಗಿತ್ತು. ನಾನು ಇನ್ನೂ ಜೀವಿಸಬೇಕೆಂಬ ತೀವ್ರ ಬಯಕೆಯಾಯಿತು. ಜೀವನ ಪರಂಪರೆಯಲ್ಲಿಯೇ ನನ್ನ ಉತ್ಸಾಹ, ಕುತೂಹಲ, ಸತ್ವಗಳು ತೃಪ್ತಿ ಹೊಂದುವುವೆಂದು ಖಚಿತವಾಯಿತು.

'ಮರುದಿನ ಬೆಳಿಗ್ಗೆ ನಾನು ಬೆಟ್ಟದಿಂದ ಇಳಿದು, ಆಶ್ರಮಕ್ಕೆ ಬಂದು, ನನ್ನ ಗುರುಗಳ ಅಪ್ಪಣೆ ಪಡೆಯಲು, ಅವರ ಮುಂದೆ ಹೋಗಿ ನಿಂತೆ. ಅವರು ತೀಕ್ಷ್ಣ ದೃಷ್ಟಿಯಿಂದ ನನ್ನನ್ನು ದಿಟ್ಟಿಸಿ, ಏನು ಸಂಭವಿಸಿದೆಯೆಂದು ಅರಿತುಕೊಂಡರು. ನಾನು ಮಂಡಿಯೂರಿ, ಅವರ ಪಾದಕ್ಕೆರಗಿದಾಗ ನನ್ನನ್ನು ಆಶೀರ್ವದಿಸಿದರು.

'ಅಲ್ಲಿಂದ ಅನತಿದೂರದ ಪಟ್ಟಣಕ್ಕೆ ತಿರುಗಿ ನಡೆದೆ. ಒಂದು ವಾರದ ನಂತರ, ಬೊಂಬಾಯಿಯಲ್ಲಿ ಮತ್ತೆ ಹಡಗನ್ನೇರಿ, ಮಾರ್ಸೆಲ್ಸ್‌ನಲ್ಲಿ ಇಳಿದೆ.'

*

ಇಬ್ಬರೂ ಮೌನವಾಗಿ ಕುಳಿತು, ನಮ್ಮ ಪ್ರತ್ಯೇಕ ವಿಚಾರಗಳಲ್ಲಿ ಮಗ್ನರಾಗಿದ್ದೆವು. ಪ್ಯಾರಿಸ್ಸಿನ ಆ ಥಳಕಿನ ಹೋಟೆಲಿನಲ್ಲಿ ಕುಳಿತು ದೇವರು, ಪರಮಾತ್ಮ, ಮುಕ್ತಿ ಮತ್ತು ಜೀವನದ ಅನಂತ ಜನ್ಮಾಂತರದ ಬಗ್ಗೆ ತಾಸುಗಟ್ಟಲೆ ಲ್ಯಾರಿಯ ಮಾತುಗಳನ್ನು ಕೇಳುವುದು ನಿಜವಾಗಿ ಸೋಜಿಗದ ಸಂಗತಿ

ಯೆನಿಸಿತು.

'ಇನ್ನು ನಿನ್ನ ಮುಂದಿನ ಯೋಜನೆಯೇನು ?' ಕುತೂಹಲದಿಂದ ಕೇಳಿದೆ.

ಇಲ್ಲಿ ಒಂದು ಸಣ್ಣ ಕಾರ್ಯವಿದೆ. ಅದಾದ ನಂತರ ಅಮೇರಿಕಕ್ಕೆ ತೆರಳುವೆ'

'ಅಲ್ಲಿ ಏನು ಮಾಡುವಿ?'

'ಜೀವಿಸುತ್ತೇನೆ.'

'ಹೇಗೆ?'

'ನನ್ನ ಆತ್ಮಪರಿಪೂರ್ಣತೆಯ ಸಾಧನೆಗಾಗಿ, ಶಾಂತಿ, ಸಹನೆ, ಕರುಣೆ, ನಿಃಸ್ವಾರ್ಥ ಹಾಗು ಸಂಯಮದಿಂದ ಜೀವಿಸಲು ಪ್ರಯತ್ನಿಸುವೆ.'

'ನಿನ್ನದು ಅತ್ಯಂತ ಉದಾತ್ತ ಧ್ಯೇಯ. ಆದರೆ ಸಂಯಮವೇಕೆ? ನೀನಿನ್ನೂ ತಾರುಣ್ಯದಲ್ಲಿರುವಿ.'

'ಸಂಭೋಗ ನನಗೊಂದು ಸುಖಾನುಭವ ಮಾತ್ರ; ಅವಶ್ಯಕತೆಯಲ್ಲವೆಂಬುದು ನನ್ನ ಸುದೈವ. ಸಂಯಮದಿಂದ ಆತ್ಮಶಕ್ತಿ ಪ್ರಬಲವಾಗಿ ಅಭಿವರ್ಧಿಸುತ್ತದೆಂಬ ಜ್ಞಾನಿಗಳ ಅಭಿಪ್ರಾಯವೂ ಸರಿಯಾಗಿದೆ.'

'ಆದರೆ ನೀನೊಬ್ಬನೇ ನಿನ್ನ ಜೀವನ ವಿಧಾನದಿಂದ ಇಡೀ ಅಮೇರಿಕದ ಜನತೆಯ ಮೇಲೆ ಪ್ರಭಾವ ಬೀರಬಹುದೆಂದು ನಂಬುವೆಯಾ?'

'ನಾನು ಪ್ರಯತ್ನಿಸುವೆ. ಕೆರೆಯಲ್ಲಿ ಕಲ್ಲೆಸೆದಾಗ ಏಳುವ ಮೊದಲ ಅಲೆ ಚಿಕ್ಕದಾದರೂ ಒಂದು ಅಲೆ ಮತ್ತೊಂದು ಎಬ್ಬಿಸಿ, ಇನ್ನೊಂದು ಮೂರನೆಯದಕ್ಕೆ ಕಾರಣವಾಗುತ್ತದೆ. ಹೀಗೆ ಒಂದೆರಡು ಜನಕ್ಕೆ ನನ್ನ ಜೀವನ ವಿಧಾನದಿಂದ ಸುಖಶಾಂತಿ ದೊರೆಯುವುದೆಂದು ಖಚಿತವಾದರೆ ಸಾಧ್ಯವಾಗಬಹುದು.'

'ನೀನು ಇಷ್ಟಪಟ್ಟಂಥ ಜೀವನವನ್ನು ಸಾಗಿಸಲು ನಿನಗೆ ಸಾಕಷ್ಟು ಸ್ವಂತ ಆದಾಯವಿರುವುದು ನಿನ್ನ ಅದೃಷ್ಟ.'

'ಆ ಹಣ ಇಷ್ಟು ದಿನ ಬಹಳ ಉಪಯುಕ್ತವಾಯಿತು. ಇನ್ನು ಮೇಲೆ ಅದು, ನನಗೆ ಹೊರೆಯಾಗುವದಷ್ಟೇ. ನಾನದರ ಸ್ವಾಧೀನ ತಪ್ಪಿಸಿಕೊಳ್ಳಬೇಕೆನ್ನುತ್ತೇನೆ.'

'ಹಾಗಾದರೆ ನೀನು ಪ್ರಸ್ತಾಪಿಸಿದ ಬಾಳು ಹೇಗೆ ಸಾಧ್ಯ?'

'ನಾನು ಉದ್ಯೋಗ ಮಾಡುವೆ. ಎಲ್ಲಿಯಾದರೊಂದು ಮೋಟಾರುಖಾನೆಯಲ್ಲಿ ಕೆಲಸ ಮಾಡುವೆ; ಅಥವಾ ಟ್ರಕ್ ನಡೆಸುತ್ತೇನೆ. ಇಲ್ಲವೆ ಟ್ಯಾಕ್ಸಿ ಚಾಲಕನಾಗುತ್ತೇನೆ.'

'ಲ್ಯಾರಿ, ನಿನಗೆ ಹುಚ್ಚು ಹಿಡಿದಿದೆ.'

'ಇಲ್ಲ, ನನಗೆ ಯಾವಾಗಲೂ ಕೈದುಡಿಮೆಯಲ್ಲಿ ಚೈತನ್ಯ, ಸ್ಫೂರ್ತಿ ಲಭಿಸುತ್ತದೆ.'

'ನಿನಗೊಂದೇ ಒಂದು ಉಪದೇಶದ ಮಾತು ಹೇಳಬಹುದೇ?...ನಿನ್ನ ಹಣವನ್ನು ಅಷ್ಟು ಹಗುರವಾಗಿ ತ್ಯಜಿಸಬೇಡ. ಮುಂದೊಂದು ದಿನ ನಿನ್ನ ಮೂರ್ಖತನದ ಅರಿವಾದೀತು.'

'ನೀವು ಹಣಕ್ಕೆ ಹೆಚ್ಚಿನ ಮಹತ್ವ ಕೊಡುತ್ತೀರಿ.'

'ಹೌದು, ಹಣವಿದ್ದರೆ ಸ್ವತಂತ್ರವಾಗಿ ಜೀವಿಸಬಹುದು.'

'ಆದರೆ ನನಗದು ಸಂಕೋಲೆ.'

'ಲ್ಯಾರಿ, ನಿನ್ನದು ತೀರ ಮೊಂಡು ಸ್ವಭಾವ.'

'ಇರಬಹುದು' ಅಂತ ನಸುನಕ್ಕ. 'ಆದರೆ ಇನ್ನೂ ಮನಸ್ಸು ಬದಲಾಯಿಸಲು ತುಂಬಾ ವೇಳೆಯಿದೆ. ಸದ್ಯ ನಾನು...'

'ಇಲ್ಲ...ಸದ್ಯ ನಾನು ಸಾನೇರಿ(ಫ್ರಾನ್ಸಿನಲ್ಲಿ ಕಡಲುತೀರದ ಚಿಕ್ಕ ಪ್ರವಾಸ ಸ್ಥಳ)ಯಲ್ಲಿರುತ್ತೇನೆ. ಬಹಳಷ್ಟು ವಿಷಯ ಸಂಗ್ರಹಿಸಿದ್ದೇನೆ. ಅದನ್ನೆಲ್ಲ ಒಂದು ಪುಸ್ತಕ ರೂಪದಲ್ಲಿ ಬರೆದು ಪ್ರಕಟಿಸಬೇಕಾಗಿದೆ.'

ನಾವು ಹೋಟೆಲಿನಿಂದ ಹೊರಬಂದಾಗ ಬೆಳಗಿನ ಬಿಸಿಲು ಗಾಢವಾಗಿತ್ತು.

*

ಆರು ತಿಂಗಳ ನಂತರ.

ನಾನು ಮನೆಯಲ್ಲಿ ಬರೆಯುತ್ತಾ ಕುಳಿತಾಗ, ಇಬ್ಬರು ಪೋಲೀಸ್ ಪತ್ತೆದಾರರು ಬಂದಿದ್ದಾರೆಂದು ನನ್ನ ಸೇವಕ ತಿಳಿಸಿದಾಗ ನನ್ನ ಲೇಖನ ಕಾರ್ಯದಲ್ಲಿ ಅಡ್ಡಿಪಡಿಸಿದ್ದಕ್ಕೆ ಕುಪಿತನಾದೆ.

'ನಿಮಗೆ ಸೋಫೀ ಮ್ಯಾಕ್‌ಡೊನಲ್ಡ್ ಎಂಬುವರು ಗೊತ್ತೇ ?'

'ಆ ಹೆಸರಿನೊಬ್ಬರ ಗುರುತು ಇದೆ.' ಜಾಗರೂಕತೆಯಿಂದ ಉತ್ತರಿಸಿದೆ. ಅಫೀಮು ನಿಮಿತ್ತ ಸೋಫೀ ಏನೋ ಗೊಂದಲದಲ್ಲಿ ಸಿಕ್ಕಿಕೊಂಡಿದ್ದಾಳೆಂದು ಊಹಿಸಿದೆ.



"..ಒರಟಾದ, ಗಟ್ಟಿ ಕಣಗಳಿರುವ
ಟೂಥ್‌ಪೌಡರ್‌ಗಳು ನಿಮ್ಮ
ಒಸಡು ಮತ್ತು ಹಲ್ಲುಗಳಿಗೆ
ಹಾನಿಯನ್ನುಂಟುಮಾಡಬಹುದು..."

# ಕೋಲ್ಗೇಟ್ ಟೂಥ್ ಪೌಡರ್ ಬಳಸಿ ನಿಮ್ಮ ಹಲ್ಲುಗಳನ್ನೂ ಒಸಡುಗಳನ್ನೂ ರಕ್ಷಿಸಿರಿ – ಮತ್ತು ಉಸಿರಿನ ದುರ್ವಾಸನೆಯನ್ನೂ ನಿವಾರಿಸಿರಿ!




ಕೋಲ್ಗೇಟ್ ಟೂಥ್‌ಪೌಡರ್ ಅತಿ ಸೂಕ್ಷ್ಮ ಹಾಗೂ ಬಿಳುಪಾಗಿದೆ. ಅದು ನಿಮ್ಮ ಒಸಡುಗಳನ್ನು ಮೃದುವಾಗಿ ಉಜ್ಜುತ್ತಿರುವಾಗಲೇ ಅದರ ಪಾಲಿಶ್ ಮಾಡುವ ಸೌಮ್ಯ ಸತ್ವ ನಿಮ್ಮ ಹಲ್ಲುಗಳ ಮೇಲಿನ ಕೊಳೆಯ ಪೊರೆಯನ್ನು ತಗೆದು ಅವುಗಳನ್ನು ಅಧಿಕ ಸ್ವಚ್ಛ ಹಾಗೂ ಬಿಳಿ ಮಾಡುತ್ತದೆ. ಕೋಲ್ಗೇಟ್‌ನ ಹೇರಳ ನೊರೆ ನಿಮ್ಮ ಹಲ್ಲುಗಳ ಎಡೆಗಳನ್ನು ಪ್ರವೇಶಿಸಿ, ದುರ್ಗಂಧವನ್ನೂ ದಂತಕ್ಷಯವನ್ನೂ ಉಂಟುಮಾಡುವ ಕೀಟಾಣುಗಳನ್ನು ನಿವಾರಿಸುತ್ತದೆ; ಮತ್ತು ಶ್ವಾಸದ ದುರ್ಗಂಧವನ್ನು ದೂರಗೊಳಿಸುತ್ತದೆ.

ನಿಮ್ಮ ಕುಟುಂಬದವರಿಗೆ ಕೋಲ್ಗೇಟ್ ಟೂಥ್‌ಪೌಡರ್‌ನ ಮೂಲಕ ಆಧುನಿಕ ದಂತರಕ್ಷಣೆಯನ್ನು ನೀಡಿರಿ. ಅವರಿಗೆ ಅದರ ಶೀತಲವಾದ ಹಾಗೂ ಪೆಪ್ಪರ್‌ಮಿಂಟ್‌ನಂತಹ ಪರಿಮಳ ಇಷ್ಟವಾಗುವುದು.

TP.G.30 KN

'ತೋಲೊನ್ ಪೋಲೀಸ್ ಅಧಿಕಾರಿಯಿಂದ ನಮಗೆ ಸಂದೇಶ ಬಂದಿದೆ–ನೀವು ಕೂಡಲೇ ಅಲ್ಲಿಗೆ ಹೋಗಬೇಕಂತೆ.'

'ಯಾವ ಕಾರಣಕ್ಕಾಗಿ? ನನಗೆ ಸೋಫಿ ಮ್ಯಾಕ್‌ಡೋನಲ್ಡರ ಅಲ್ಪ ಪರಿಚಯ ಮಾತ್ರವಿದೆ.'

'ಅದು ನಮಗೆ ಗೊತ್ತಿಲ್ಲ. ಅವಳು ಐದು ದಿನಗಳಿಂದ ಮನೆಯಿಂದ ನಾಪತ್ತೆಯಾಗಿದ್ದಳಂತೆ. ಈಗ ಬಂದರಿನಲ್ಲಿ ಒಂದು ಮೃತದೇಹ ಸಿಕ್ಕಿದೆ; ಅದು ಅವಳದೇ ಅಂತ ಶಂಕಿಸಲಾಗಿದೆ. ನೀವದನ್ನು ಗುರುತಿಸಬೇಕು.'

ನನ್ನ ದೇಹದಲ್ಲಿ ನಡುಕವುಂಟಾಯಿತು. ಆದರೆ ಅವಳ ಬಟ್ಟೆ–ಬರೆಗಳಿಂದ ಗುರುತಿಸಬಹುದಲ್ಲ?

'ಅವಳ ಮೃತದೇಹ ಸಂಪೂರ್ಣ ನಗ್ನವಾಗಿ, ಕುತ್ತಿಗೆ ಹತ್ತಿರ ಇರಿದ ಗಾಯವಿದೆ.'

'ಓಹ್ ದೇವರೇ!' ಎಂದು ಉದ್ಗರಿಸಿದೆ.

ತೋಲೊನ್ ಪೋಲೀಸ್ ಕಚೇರಿಯಲ್ಲಿ ಮುಖ್ಯ ಅಧಿಕಾರಿ ನನ್ನ ಕೂಡ್ರಿಸಿ, ವಿಚಾರಿಸಿದ. 'ಈ ಸೋಫೀ ಮ್ಯಾಕ್‌ಡೊನಲ್ಡ್ ಅತ್ಯಂತ ಅಪಕೀರ್ತಿಯ ಹೆಣ್ಣಂತೆ ಕಂಡುಬರುತ್ತದೆ. ನಿಮ್ಮ ವಯಸ್ಸು, ಗೌರವ, ಲೆಕ್ಕಿಸಿದರೆ, ಇಂಥವಳ ಕೂಡ ನಿಮ್ಮ ಸಂಬಂಧ ಹೇಗೆ ಬೆಳೆಯಿತೆಂದು ಆಶ್ಚರ್ಯಕರ.'

'ನನಗೆ ಅವಳ ಪರಿಚಯ ಅತ್ಯಲ್ಪವಾದದ್ದು. ಶಿಕಾಗೋದಲ್ಲಿ ಅವಳು ಚಿಕ್ಕವಳಿದ್ದಾಗ ನೋಡಿದ್ದೆ. ಸುಮಾರು ಒಂದು ವರ್ಷದ ಹಿಂದೆ ಪ್ಯಾರಿಸ್ಸಿನಲ್ಲಿ ನಮ್ಮ ಮಿತ್ರರ ಮನೆಯಲ್ಲಿ ಭೇಟಿಯಾಗಿದ್ದೆವು.'

'ಹಾಗಾದರೆ ಈ ಪುಸ್ತಕ ಅವಳ ಕೋಣೆಯಲ್ಲಿ ಸಿಕ್ಕಿದೆ. ಅದರಲ್ಲಿ ಹಸ್ತಾಕ್ಷರ ನೋಡಿದರೆ, ಅವಳೊಡನೆ ನಿಮ್ಮ ಸಂಬಂಧ ಅಷ್ಟು ಅಲ್ಪವಿರಲಿಲ್ಲವೆಂದು ಸಿದ್ಧವಾಗುತ್ತದೆ.'

ಅವಳಿಗೆ ನಾನು ಕೊಟ್ಟ ಪುಸ್ತಕದಲ್ಲಿ, ನನ್ನ ಹಸ್ತಾಕ್ಷರದ ಕೆಳಗೆ ಒಂದು ಫ್ರೆಂಚ್ ಪ್ರೇಮ ಕವನದ ಪ್ರಥಮ ಪಂಕ್ತಿಯನ್ನು ಬರೆದಿದ್ದೆ. 'ನಾನು ಅವಳ ಪ್ರೇಮಿಯೆಂದು ನೀವು ತಿಳಿದುಕೊಂಡಿದ್ದರೆ, ನಿಮ್ಮದು ತೀರ ತಪ್ಪು ಕಲ್ಪನೆ' ಎಂದು ಹೇಳಿದೆ.

ಆತ ಒಮ್ಮೆಲೇ ನನ್ನೆದುರು ಒಂದು ಫೋಟೋ ಹರಿಸುತ್ತ, 'ಇವರು ಯಾರೆಂದು ನಿಮಗೆ ಗೊತ್ತಿದೆಯೇ?' ಎಂದು ಕೇಳಿದ.

ಈಜುವ ಉಡುಪಿನಲ್ಲಿರುವ ಲ್ಯಾರಿಯನ್ನು ಕೂಡಲೇ ಗುರುತಿಸಿದೆ. ಗೊತ್ತಿಲ್ಲವೆಂದು ಹೇಳಿಬಿಡಬೇಕೆಂದು ನನ್ನ ಪ್ರಥಮ ಪ್ರೇರಣೆ. ಆದರೆ ತುಸು ವಿಚಾರಮಾಡಿ, 'ಇವನು ಲಾರೆನ್ಸ್ ಡ್ಯಾರೆಲ್ ಅಂತ ಅಮೇರಿಕದ ನಾಗರಿಕ.'

'ಅವರಿಬ್ಬರ ಸಂಬಂಧವೇನಿತ್ತು?'

'ಅವರು ಬಾಲ್ಯಸ್ನೇಹಿತರು. ಶಿಕಾಗೋದ ಹತ್ತಿರ ಮಾರ್ವಿನ್ ಅಂತ ಒಂದೇ ಊರಿನವರು.

'ಆದರೆ ಈ ಫೋಟೋ ಇತ್ತೀಚಿನದು... ಈ ವ್ಯಕ್ತಿ ಏನಿದ್ದಾರೆ?'

'ಲೇಖಕ' ಅಂತ ದಿಟ್ಟತನದಿಂದ ಹೇಳಿ, 'ಅವನಿಗೆ ಸ್ವಂತ ಆದಾಯವೂ ಇದೆ' ಇನ್ನಷ್ಟು ಗೌರವಾರ್ಹವಾಗಲೆಂದು ಕೂಡಿಸಿದೆ.

'ಈಗೆಲ್ಲಿ ಇದ್ದಾರೆ?'

ಮತ್ತೆ ಅನುಮಾನಿಸಿದೆ. ಆದರೆ ಈ ಫ್ರೆಂಚ್ ಪೋಲೀಸಿನವರ ಕಾರ್ಯದಕ್ಷತೆ ಬಲ್ಲವನಾಗಿದ್ದೆ. 'ಸಾನೇರಿಯಲ್ಲಿ.'

'ಅಲ್ಲಿಂದ ಕರೆಸುತ್ತೇವೆ. ಅವರನ್ನೂ ಪ್ರಶ್ನಿಸಬೇಕಾಗುತ್ತದೆ.'

ಸೋಫೀಯ ದುರ್ಮರಣದ ಬಗ್ಗೆ ಮತ್ತೆ ಸವಿಸ್ತಾರವಾಗಿ ಹೇಳಿದ. ಮತ್ಸರದಿಂದಲೋ, ಹಣದಾಸೆಯಿಂದಲೋ, ಯಾವನೋ ನಾವಿಕ ಅವಳ ಕೊಲೆಗೈದು, ಮೃತಶರೀರವನ್ನು ಸಮುದ್ರದಲ್ಲಿ ಎಸೆದಿರಬೇಕು. ಮೀನುಗಾರರಿಗೆ ಅವಳ ನಗ್ನದೇಹ ಸಿಕ್ಕಿತು. ಅದನ್ನು ಗುರುತಿಸಿದ ಬಳಿಕ ನಾವು ಸ್ವಂತ ಖರ್ಚಿನಿಂದ ಅಂತ್ಯಸಂಸ್ಕಾರ ನಡೆಸಬಹುದಾಗಿತ್ತು.

ಮರುದಿನ ಬೆಳಿಗ್ಗೆ ನಾನು ಪೋಲೀಸ್ ಕಚೇರಿಗೆ ಹೋದಾಗ, ಲ್ಯಾರಿ ಗಂಭೀರವಾಗಿ, ವಿಷಣ್ಣವದನನಾಗಿ ಕುಳಿತುಕೊಂಡಿದ್ದ. ಅಧಿಕಾರಿ ನನ್ನನ್ನು ಆದರದಿಂದ ಬರಮಾಡಿಕೊಂಡು, 'ಸರ್ ನಿಮ್ಮ ಮಿತ್ರ ಎಲ್ಲ ಪ್ರಶ್ನೆಗಳನ್ನು ಅತ್ಯಂತ ಪ್ರಾಮಾಣಿಕತೆಯಿಂದ ಉತ್ತರಿಸಿದ್ದಾರೆ. ನಮ್ಮ ಸಂದೇಹಗಳೆಲ್ಲಾ ಸಂಪೂರ್ಣ ಪರಿಹಾರವಾಗಿವೆ. ನಿಮಗೆ ತೊಂದರೆ ಕೊಟ್ಟದ್ದಕ್ಕಾಗಿ ವಿಷಾದಿಸುತ್ತೇವೆ.'

ಶವಾಗಾರದಲ್ಲಿ ಮೃತದೇಹವನ್ನು ನೋಡಿದಾಗ ಅದು ಸೋಫೀಯದೇ ಆಗಿತ್ತು. ಊದಿಕೊಂಡ ಮುಖ, ಕುತ್ತಿಗೆಯ ಮೇಲಿನ ಗಾಯವೆಲ್ಲಾ ಕಂಡು ನಮಗೆ ಕರುಳು ಕಿತ್ತಿ ಬರುವಂತಾಯಿತು.

ಬೆಳಗಿನ ಉಪಾಹಾರಕ್ಕಾಗಿ ಹೋಟೆಲ್ಲಿಗೆ ಹೋಗಿ ಕುಳಿತೆವು, ಲ್ಯಾರಿ ಇನ್ನೂ ಮೌನ ಧರಿಸಿದ್ದ. ದ್ರಾಕ್ಷಾರಸ ತರಿಸಿ, ಅವನಿಗೆ ಒಂದು ಗ್ಲಾಸುಕೊಟ್ಟೆ.

'ಇದನ್ನು ಕುಡಿ. ಅಂದರೆ ಏನಾದರೂ ಮಾತ ನಾಡಲು ಬರುತ್ತೆ'.

'ಮೌನದಿಂದಲೂ ಮಾತನಾಡಬಹುದೆಂದು ಶ್ರೀಗಣೇಶರು ಹೇಳುತ್ತಿದ್ದರು.' ತುಸು ತಡೆದು ಅಂದ: 'ಇದೆಲ್ಲಾ ಖರ್ಚಿನ ಹೊಣೆ ನಿಮ್ಮದೇ, ನನ್ನ ಹತ್ತಿರ ದುಡ್ಡಿಲ್ಲ.'

'ಅಂದರೆ...ನಿನ್ನ ದುಡ್ಡೆಲ್ಲಾ ತ್ಯಜಿಸಿಬಿಟ್ಟೆಯಾ?'

'ಹೌದು. ಈಗ ನಾನು ಸಂಪೂರ್ಣ ಸ್ವತಂತ್ರ ಪುರುಷ.'

'ನಿನ್ನ ಲೇಖನ ಕಾರ್ಯ ಮುಗಿಯಿತೇ?'

'ಹೌದು. ಒಂದೆರಡು ದಿನಗಳಲ್ಲಿ ಪುಸ್ತಕದ ಪ್ರತಿ ಸಿಗಬಹುದು.' ಮುಂದೆ ಮೌನದಲ್ಲಿಯೆ ನಮ್ಮ ಉಪಾಹಾರ ಮುಗಿಸಿದೆವು.

'ನಾನು ಶತಮೂರ್ಖನೆಂದು ಹೇಳಬೇಕಾಗಿದ್ದರೆ ಅನುಮಾನಿಸಬೇಡಿ. ನಾನೇನೂ ತಪ್ಪು ತಿಳಿಯುವೆ ದಿಲ್ಲ.' ಲ್ಯಾರಿಯ ಕಣ್ಣುಗಳು ತುಂಟಾಟಿಕೆಯಿಂದ ಮಿನುಗುತ್ತಿದ್ದವು.

'ಇಲ್ಲಪ್ಪಾ. ಆದರೆ ನಿನಗೂ ಎಲ್ಲರಂತೆಯೇ ಮದುವೆ, ಮಕ್ಕಳಾಗಿದ್ದರೆ ನಿನ್ನ ಜೀವನಕ್ಕೆ ಒಂದು ಸಮಗ್ರ ಸ್ವರೂಪ ಸಿಗುತ್ತಿತ್ತೆಂದು ಯೋಚಿಸು ತ್ತಿದ್ದೆ.' ಆತ ನಸುನಕ್ಕ. ಯಾವಾಗಲೂ ಸರಳ ಮಾಧುರ್ಯವಿರುವ ಆ ನಸುನಗೆಯಲ್ಲಿ ಈಗ ಕೋಮಲವಿಷಾದವು ಬೆರೆಸಿದಂತಿತ್ತು. 'ಈಗ ಕೈ ಮೀರಿ ಹೋಯಿತು. ನಾನು ಮದುವೆಯಾಗ ಬಹುದಾದ ಒಬ್ಬಳೇ ಒಬ್ಬ ಸ್ತ್ರೀ ಸೋಫೀ.'

ನಾನು ವಿಸ್ಮಯಗೊಂಡು 'ಈಗಲೂ ಹೀಗೆ ಹೇಳುವಿಯಾ?' ಎಂದೆ.

'ಅವಳೊಬ್ಬ ಮಹಾತ್ಮಳು, ಉದಾರಜೀವಿ, ಆದರ್ಶಪ್ರಿಯಳು. ಅವಳ ದುರಂತದಲ್ಲಿಯೂ ಉದಾತ್ತತೆ ಅಡಕವಾಗಿದೆ.'

ಸೋಫೀಯ ಅಂತ್ಯಸಂಸ್ಕಾರದ ನಂತರ ನಾವಿ- ಬ್ಬರೂ ಮೌನವಾಗಿಯೇ ನಮ್ಮ ಪ್ರತ್ಯೇಕ ದಾರಿ ಯಲ್ಲಿ ಸಾಗಿದೆವು.

ಕೆಲವು ದಿನಗಳ ನಂತರ ನಾನು ಇಂಗ್ಲಂಡಿಗೆ ಹೊರಟಾಗ, ಪ್ಯಾರಿಸ್ಸಿನಲ್ಲಿ ಇಳಿದು, ಇಸಾಬೆಲ್ಲಳ ಭೇಟಿಗೆಂದು ಹೋದೆ. ಗ್ರೇನಿಗೆ ಅಮೇರಿಕದಲ್ಲಿ ಪ್ರಸಿದ್ಧ ತೈಲ ಕಂಪನಿಯಲ್ಲಿ ಒಳ್ಳೆ ಉದ್ಯೋಗ ದೊರೆತಿದ್ದು, ಇನ್ನು ಕೆಲವೇ ದಿನಗಳಲ್ಲಿ ಅವರು ಅಮೇರಿಕಕ್ಕೆ ಮರಳಿ ಹೋಗುವವರಿದ್ದರು.

ಮೇಜಿನ ಮೇಲೆ ಲ್ಯಾರಿಯ ಪುಸ್ತಕ ನೋಡಿದೆ.

'ಇಂದು ಬೆಳಿಗ್ಗೆ ಬಂದಿತು' ಇಸಾಬೆಲ್ ಹೇಳಿ ದಳು. 'ಅದನ್ನೋದಲು ನನಗೆಂದು ಬಿಡುವು ಸಿಗು ವದೋ...ಇಷ್ಟು ದಿನವೆಲ್ಲಾ ಲ್ಯಾರಿ ಸಾನೇರಿಯ ಲ್ಲಿದ್ದ. ನಿಮಗೆ ಭೇಟಿಯಾಗಿದ್ದನೆ?'

'ಮೊನ್ನೆಯೇ ತೋಲೊನ್‌ದಲ್ಲಿ ಕೂಡಿಯೇ ಇದ್ದೆವು– ಸೋಫೀಯ ಅಂತ್ಯಸಂಸ್ಕಾರದ ನಿಮಿತ್ತ.'

'ಅವಳು ಸತ್ತಳೆ?'

'ಸತ್ತಳೆಂದೇ ಅಂತ್ಯಸಂಸ್ಕಾರದ ಮಾತಲ್ಲವೇ?'

'ಓಹ್, ನನಗೇನೂ ಕೆಡುಕೆನಿಸುವದಿಲ್ಲ. ಮಿತಿ ಮೀರಿದ ಮದ್ಯಪಾನದಿಂದ ಸತ್ತುಹೋಗಿರ ಬೇಕು.'

'ಇಲ್ಲ, ಕುತ್ತಿಗೆ ಕೊಯ್ದು ಸಮುದ್ರದಲ್ಲಿ ಎಸೆ ಯಲ್ಪಟಿದ್ದಳು.

'ಎಷ್ಟು ಭಯಂಕರ! ಯಾರು ಕೊಂದಿರುವ ರೆಂದು ಪೋಲೀಸಿನವರಿಗೆ ತಿಳಿದಿದೆಯೇ?'

'ಇಲ್ಲ. ಆದರೆ ನನಗೆ ತಿಳಿದಿದೆ....ಸೋಫೀನ್ನ ಕೊಂದವಳು ನೀನು, ಇಸಾಬೆಲ್.'

'ಇದೇನು ಹೇಳುತ್ತಿರುವಿರಿ!' ಆಶ್ಚರ್ಯದಿಂದ ನನ್ನತ್ತ ನೋಡಿದಳು.

'ಹೋದ ವರ್ಷ ತೋಲೋನಿನಲ್ಲಿ ಭೇಟಿಯಾ ಗಿದ್ದಳು. ಮದುವೆಯ ಮುಂಚೆ ತಾನು ಪರಾರಿ ಯಾದ ಕಥೆಯಲ್ಲಾ ಹೇಳಿದಳು.'

ಇಸಾಬೆಲ್ಲಳ ಮುಖ ಬಿಗುವಾಯಿತು.

'ಇಸಾಬೆಲ್, ನೀನೇಕೆ ಆ ಸೆರೆಯ ಶೀಷೆಯನ್ನು ಮೇಜಿನ ಮೇಲಿಟ್ಟು, ಮನೆ ಬಿಟ್ಟು ಹೊರಗೆ ಹೋದೆ?'

'ನನಗೆ ಗೊತ್ತಿಲ್ಲ. ನಾನಿಟ್ಟಿರಲಿಲ್ಲ.'

'ಸುಳ್ಳು ಹೇಳಬೇಡ, ಇಸಾಬೆಲ್.'

'ಹಾಗಾದರೆ ಕೇಳಿ, ಸತ್ಯವನ್ನು ಹೇಳುತ್ತೇನೆ.' ಅವಳ ಕಣ್ಣುಗಳು ಕೋಪದಿಂದ ಕೆಂಪಗಾಗಿದ್ದುವು 'ಸೋಫಿ ಲ್ಯಾರೀನ್ನ ಮದುವೆಯಾಗಬಾರದೆದು. ನಿರ್ಧರಿಸಿದ್ದೆ. ಅವಳು ಮದ್ಯದ ಶೀಷೆ ಕಂಡರೆ

ಮತ್ತೆ ಮರಳಾಗುತ್ತಾಳೆ ಅಂತ ನನಗೆ ಗೊತ್ತು. ನಾನು ಎಣಿಸಿದ ಹಾಗೆಯೇ ನಡೆಯಿತು.'

'ಅದಕ್ಕೇ ನಾನು ಹೇಳಿದ್ದು, ನೀನೇ ಅವಳ ಕೊಲೆ ಗೈದ ಹಾಗಿದೆ.'

'ಓಹ್, ತುಂಬಾ ಕೆಟ್ಟವಳು. ಅವಳು ಸತ್ತು ಹೋದಳೆಂದು ನನಗೆ ಸಂತೋಷ...ಆದರೆ ಇದ ನ್ನೆಲ್ಲಾ ಲ್ಯಾರಿಗೆ ಹೇಳಬೇಡಿ, ಮತ್ತೆ.'

'ಹೇಳುವುದಿಲ್ಲ. ಹೇಳಬೇಕೆಂದರೂ ಅವನು ನನಗೆ ಇನ್ನು ಭೇಟಿಯಾಗುವದಿಲ್ಲ.'

'ಅಂದರೆ......'

'ಈ ಗಳಿಗೆಯಲ್ಲಿ ಅವನು ಸರಕು ಹಡಗಿನಲ್ಲಿ ದುಡಿಯುತ್ತ ನ್ಯೂಯಾರ್ಕಿಗೆ ಹೋಗುವ ಮಾರ್ಗ ದಲ್ಲಿದ್ದಾನೆ.'

'ಅವನೊಬ್ಬ ವಿಚಿತ್ರ ಪ್ರಾಣಿ! ಮೊನ್ನೆ ಭೇಟಿ ಯಾದಾಗ ಅಮೇರಿಕಕ್ಕೆ ಹೋಗುವ ಮಾತೇ ಹೇಳಲಿಲ್ಲ. ಅವನು ಅಮೇರಿಕದಲ್ಲಿದ್ದರೆ ನನಗೆಷ್ಟು ಸಂತೋಷ; ನಾವು ಮೇಲಿಂದ ಮೇಲೆ ಭೇಟಿಯಾ-ಗುತ್ತಾ ಇರುತ್ತೇವೆ.'

'ಆದರೆ ಅವನ ಅಮೇರಿಕಕ್ಕೂ ನಿಮ್ಮ ಅಮೇ ರಿಕಕ್ಕೂ ಭೂಮಿ ಆಕಾಶದಷ್ಟು ಅಂತರ!'

ಅವಳಿಗೆ ಲ್ಯಾರಿ ಮಾಡಿದ್ದನ್ನು, ಮಾಡಬೇಕೆನ್ನುವು ದನ್ನು, ಎಲ್ಲಾ ಸಂಗತಿ ತಿಳಿಸಿದೆ. ಅವಳು ದಿಗ್ಭ್ರಾಂತಿ ಯಿಂದ ಎಲ್ಲಾ ಕೇಳಿ, 'ಅವನೆಷ್ಟು ಹುಚ್ಚ, ಎಷ್ಟು ಹುಚ್ಚ,'ಎಂದು ಉದ್ಗಾರ ತೆಗೆದಳು. ನನ್ನ ಕಥೆ ಮುಗಿದ ಬಳಿಕ, 'ಈಗ ನಿಜವಾಗಿ ಅವನನ್ನು ಪೂರ್ತಿ ಕಳೆದುಕೊಂಡೆ' ಎಂದು ಕಣ್ಣೀರು ಸುರಿಸ ಹತ್ತಿದಳು. ಅವಳ ಅಂದವಾದ ಮುಖ ದುಃಖ ದಿಂದ ವಿಕಾರವಾಗಿತ್ತು.

ಅವಳು ಅಳುತ್ತಿದ್ದಾಗ, ನಾನೇನು ಮಾಡಬೇಕೆಂದು ತಿಳಿಯದೇ ಲ್ಯಾರಿಯ ಪುಸ್ತಕವನ್ನು ನೋ-ಡುತ್ತಲಿದ್ದೆ. ಅದು ಅನೇಕ ಪ್ರಸಿದ್ಧ ಪುರುಷರ ಬಗ್ಗೆ ಪ್ರಬಂಧಗಳ ಸಂಗ್ರಹ. ಸರ್ವಾಧಿಕಾರವನ್ನು ಬಳಿಸಿದ ನಂತರ, ಪ್ರಭುತ್ವವನ್ನು ತ್ಯಜಿಸಿ ಆಪ್ತಜೀವನಕ್ಕೆ ಮರಳಿದ ರೋಮನ್ ಸಾರ್ವಭೌಮ ಸುಲ್ಲಾನ ವಿಷಯವಾಗಿ ಒಂದು ಲೇಖನವಿತ್ತು. ಮತ್ತೊಂ-ದು ಪ್ರಬಂಧ, ಸಾಮ್ರಾಜ್ಯವನ್ನು ಆಳಿದ ಮೊಗಲ್ ಸಮ್ರಾಟ ಅಕಬರನ ಬಗ್ಗೆ ಇದ್ದಿತು. ಪ್ರಸಿದ್ಧ ಚಿತ್ರಕಾರ ರೂಬೆನ್ಸ್, ಜರ್ಮನ್ ಕವಿ ಗಯಟೆ ಮತ್ತು ಲಾರ್ಡ್ ಚೆಸ್ಟರ್‌ಫೀಲ್ಡ್–ಇವರ ವಿಷಯ ವಾಗಿಯೂ ತನ್ನ ಸಂಪೂರ್ಣ ವಿದ್ವತ್ಪೂರ್ಣವಾ-ದರೂ ಸರಳ ಶೈಲಿಯಲ್ಲಿ ಬರೆದಿದ್ದ. ಅವನು ನಿರೂ ಪಿಸಿದ ಪ್ರತಿಯೊಬ್ಬ ವ್ಯಕ್ತಿಯೂ ತನ್ನ ಜೀವನದಲ್ಲಿ ಒಂದಿಲ್ಲೊಂದು ವಿಧದಲ್ಲಿ ಪರಮ ಕೀರ್ತಿ ಪಡೆದ ವನಾಗಿದ್ದ.

ಪುನಃ ನಾನು ಲ್ಯಾರಿಯನ್ನು ಎಲ್ಲಿಯೂ ಕಂಡಿಲ್ಲ; ಅವನ ಬಗ್ಗೆ ಯಾವ ವಾರ್ತೆಯನ್ನೂ ಕೇಳಿಲ್ಲ, ಕೇಳ ಬಹುದೆಂದು ನಿರೀಕ್ಷಿಸಿಯೂ ಇಲ್ಲ. ಯಾಕಂದರೆ ಅವನು ಯಾವ ಮನದಾಸೆ, ಕೀರ್ತಿಮೋಹ ಇದ್ದ ವನಲ್ಲ. ಕೇವಲ ಸುಖ ಶಾಂತಿಯುಕ್ತವಾದ ತನ್ನ ಜೀವನಮಾರ್ಗವು, ಸತ್ಯಶೋಧನೆಯಲ್ಲಿದ್ದವರನ್ನು ಆಕರ್ಷಿಸಬಹುದೆಂದು ನಂಬಿಕೆಯಿದ್ದವನು. ಇಂಥ ತೇಜಃಪುಂಜ ವ್ಯಕ್ತಿಯನ್ನು ನಾನೆ ಆರಾಧಿಸಬಲ್ಲೆನೇ ವಿನಾ ಅಂಥ ಅಪೂರ್ವ ಆತ್ಮದೊಂದಿಗೆ ಒಂದಾ ಗಲು ಅಸಮರ್ಥನು: ನಾನೊಬ್ಬ ಇಹಲೋಕದ ಸಾಮಾನ್ಯ ಮಾನವ. ✪



Printed & published by P. S. Bhat for the Jayakarnataka News Printers Ltd., at the Samyukta Karnataka Press, Koppikar Road, Hubli-580 020. Rep: Bombay: V. Satyamurthy Phone: 522412; Calcutta: H. Muzamdar 46-4233; Madras: A. K. Subramanian Phone: 842201; New Delhi. P. R. Chopra Phone: 224130

# ಯಾರು ಹೇಳುತ್ತಾರೆ ಇಮಲ್ಶನ್ ಪೇಂಟ್ ನಮಗೆ ಎಟಕಲಾರದಂಥ ಪೇಂಟ್ ಎಂದು?

ಸುಪರ್ ಡೆಕೊಪ್ಲಾಸ್ಟ್ ಹಚ್ಚಿಯಾದರು ನೋಡಿರಿ!




ಖರ್ಚಿಗೆ ಖರ್ಚೂ ಕಡಿಮೆ,ಅಂದಕ್ಕೆ ಅಂದವೂ ಹೌದು.
ಇಮಲ್ಶನ್ ಪೇಂಟ್‌ಗಳಲ್ಲಿಯು

**ಸುಪರ್**
**ಡೆಕೋಪ್ಲಾಸ್ಟ್**
**ಏಶಿಯನ್ ಪೇಂಟ್ಸ್**



Adroit-1808 KAN

KASTURI PRICE : 1–25 Regd. No. KRNG 43
*Registered with the Registrar of Newspapers for India under No. 3333/57*